ಸಂಪುಟ ೧ ಸಂಚಿಕೆ ೧ ಜನವರಿ ೯೯

# ಮಹಿಳಾ ಅಧ್ಯಯನ

ಉತ್ತರಾಯಣ ಸಂಚಿಕೆ





ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

## ಲೇಖಕರಿಗೆ ಸೂಚನೆಗಳು

೧. ಲೇಖನಗಳು ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿರಬೇಕು. ಅಥವಾ ಮಹಿಳಾ ಅಧ್ಯಯನಕ್ಕೆ ಹೊಸ ಆಯಾಮ ನೀಡಬಲ್ಲ ತಾತ್ವಿಕ ಚಿಂತನೆಗಳನ್ನು ಒಳಗೊಂಡಿರಬೇಕು.

೨. ಲೇಖನಗಳನ್ನು ಹಾಳೆಯ ಒಮ್ಮಗ್ಗುಲಲ್ಲಿ ಅಂದವಾಗಿ ಬರೆದಿರಬೇಕು.

೩. 'ಲೇಖನ'ಗಳು ೫ ರಿಂದ ೧೦ ಪುಟಗಳ ಒಳಗಿರಲಿ.

೪. ಲೇಖನಗಳ ಒಳಗಿನ ಅಭಿಪ್ರಾಯಗಳು ಆಯಾ ಲೇಖಕರವು. ವಿಶ್ವವಿದ್ಯಾಲಯದವಲ್ಲ.

೫. ಲೇಖನಗಳನ್ನು ಪತ್ರಿಕೆಯ ಆಶಯಕ್ಕೆ ಅನುಗುಣವಾಗಿ ಆಯ್ದು ಪ್ರಕಟಿಸಲಾಗುವುದು. ಅಪ್ರಕಟಿತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಆದ್ದರಿಂದ ಲೇಖಕರು ಲೇಖನದ ನಕಲನ್ನು ಇಟ್ಟುಕೊಳ್ಳುವುದು.

೬. ಲೇಖನಗಳನ್ನು ಕಳಿಸುವ ವಿಳಾಸ : ಸಂಪಾದಕರು<br>'ಮಹಿಳಾ ಅಧ್ಯಯನ' ಪತ್ರಿಕೆ<br>ಮಹಿಳಾ ಅಧ್ಯಯನ ವಿಭಾಗ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ.<br>ವಿದ್ಯಾರಣ್ಯ, ಕಮಲಾಪುರ -೨೧

**ಚಂದಾವಿವರ :** ವಾರ್ಷಿಕ ಚಂದಾ : ರೂ. ೩೦<br>ಬಿಡಿ ಪ್ರತಿ : ರೂ. ೧೫

**ಚಂದಾ ಕಳಿಸುವ ವಿಳಾಸ :** ನಿರ್ದೇಶಕರು, ಪ್ರಸಾರಾಂಗ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ<br>ವಿದ್ಯಾರಣ್ಯ, ಕಮಲಾಪುರ-೫೮೩ ೨೨೧<br>ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.

# ಮಹಿಳಾ ಅಧ್ಯಯನ

## (ಉತ್ತರಾಯಣ ಸಂಚಿಕೆ)

ಸಂಪಾದಕಿ

ಎಚ್. ಎಸ್. ಶ್ರೀಮತಿ



ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೨೧

**MAHILA ADHYAYANA** (Half Yearly) Vol I-1
Ed. by Dr. H. S. Sreemathi.
Published by The Director, Prasaranga
Kannada University, Hampi, Vidyaranya, Kamalapura-583 221
Pages : XII + 156

ಅರ್ಧವಾರ್ಷಿಕ ಪತ್ರಿಕೆ, ಸಂಪುಟ ೧, ಸಂಚಿಕೆ ೧





ಬಿಡಿ ಪ್ರತಿ : ರೂ. ೧೫.೦೦
ವಾರ್ಷಿಕ ಚಂದಾ : ರೂ. ೩೦.೦೦

ಮುಖ ಪುಟ : ಕೆ. ಕೆ. ಮಕಾಳಿ

ಅಕ್ಷರ ಜೋಡಣೆ : ಯಾಜಿ ಗ್ರಾಫಿಕ್ಸ್, ಹೊಸಪೇಟೆ

**ಪ್ರಕಾಶಕರು**
ಪ್ರೊ. ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ -೫೮೩ ೨೨೧

**ಮುದ್ರಕರು:**
ಸತ್ಯಶ್ರೀ ಪ್ರಿಂಟರ್ಸ್ ಪ್ರೈ ಲಿ.
ಬೆಂಗಳೂರು - 560 018 ದೂರವಾಣಿ: 625736, 6506023

# ಮಹಿಳೆಯರ ಪರವಾಗಿ

ನಮ್ಮ ಮುಂದೆ ಮಹಿಳೆಯರ ಸ್ಥಿತಿಗತಿಗಳಿಗೆ ಸಂಬಂಧಿಸಿದ ಹಲವು ಪ್ರಶ್ನೆಗಳಿವೆ. ದಿನನಿತ್ಯದ ಸವಾಲುಗಳಾಗಿ ನಿಲ್ಲುವ ಪ್ರಸಂಗಗಳನ್ನು ನಿಭಾಯಿಸುವಲ್ಲಿ ಕ್ರಿಯಾಶೀಲ ಸಂಘಟನೆಗಳು, ಚಳುವಳಿಗಳು ನಮ್ಮ ಹೆಣ್ಣು ಮಕ್ಕಳಿಗೆ ನೆರವಾಗಬಲ್ಲವು. ಆದರೆ ಇಂತಹ ಕ್ರಿಯಾತ್ಮಕ ಚಟುವಟಿಕೆಗಳು ಶೂನ್ಯದಲ್ಲೆಲ್ಲೋ ರೂಪುಗೊಳ್ಳುವುದು ಸಾಧ್ಯವಿಲ್ಲ. ಭೂತ, ವರ್ತಮಾನ, ಭವಿಷ್ಯತ್ತುಗಳನ್ನು ಅರ್ಥಪೂರ್ಣವಾಗಿ ಗ್ರಹಿಸುವ ಚಿಂತನೆಗಳ ಹಿನ್ನೆಲೆಯಲ್ಲಿ ಮಾತ್ರವೇ ಈ ಚಟುವಟಿಕೆಗಳು ಮಹಿಳೆಯರ ಸ್ಥಿತಿಗತಿಗಳ ಸುಧಾರಣೆಯ ಸಾಧನಗಳೆನಿಸಲು ಸಾಧ್ಯ. ಈ ಹಿನ್ನೆಲೆಯಲ್ಲಿ 'ಮಹಿಳಾ ಅಧ್ಯಯನ' ಎಂಬ ಜ್ಞಾನ ಶಿಸ್ತನ್ನು ಗ್ರಹಿಸಬೇಕು. ಇಂದಿನ ಬುದ್ಧಿಜೀವಿಗಳ ಚರ್ಚೆಗಳಲ್ಲಿ ಸ್ತ್ರೀ ಸ್ವಾತಂತ್ರ್ಯ, ಸಮಾನತೆ, ವಿಮೋಚನೆಗಳಂತಹ ಮಹಿಳಾ ಸಂಬಂಧೀ ಸಂಗತಿಗಳು ಪ್ರಧಾನವಾಗಿ ಕಾಣಿಸಿಕೊಳ್ಳುತ್ತಿವೆ ಎಂಬಂತೆ ತೋರುತ್ತದೆ. ಆದರೆ ಈ ಪೈಕಿ ವಾಸ್ತವದಲ್ಲಿ ಪ್ರಾಮಾಣಿಕವೂ, ಮಹಿಳೆಯರಿಗೆ ಉಪಯುಕ್ತವೂ ಎನಿಸುವ ಚರ್ಚೆಗಳಾವುವು ಮತ್ತು ಕೇವಲ ಶೈಕ್ಷಣಿಕ ಆಸಕ್ತಿಗಾಗಿ ಅಥವಾ ಇನ್ನಿತರ ವ್ಯಾವಹಾರಿಕ ಉದ್ದೇಶಗಳಿಗಾಗಿ ಪ್ರಚಾರಗೊಳ್ಳುವ ಚರ್ಚೆಗಳಾವುವು ಎಂಬುದನ್ನು ಬೇರ್ಪಡಿಸಿ ಗ್ರಹಿಸುವುದು ಕಷ್ಟಸಾಧ್ಯ. ಇದೇ ಒಂದು ಪ್ರತ್ಯೇಕ ಅಧ್ಯಯನವೆನಿಸಬಹುದೇನೋ.

ಇದು ಸಿನಿಕತೆಯ ಮಾತೆನಿಸಬಹುದು. ಆದರೆ ಮಾನವ ಇತಿಹಾಸದಲ್ಲಿ ಮಹಿಳೆಯ ಸ್ವತಂತ್ರ ಅಸ್ತಿತ್ವದ ಪ್ರಶ್ನೆಯು ಚಿರಂತನವೆನಿಸಿಬಿಟ್ಟಿರುವಾಗ ಚಿಂತನೆಗಳು, ಸಿದ್ಧಾಂತಗಳು ಎಂಬ ಬೌದ್ಧಿಕ ಚಟುವಟಿಕೆಗಳನ್ನು ತೀರಾ ಅಮಾಯಕವಾಗಿ ಸ್ವೀಕರಿಸುವುದು ಸಾಧ್ಯವಾಗಲಾರದು. ಈ ಮಾತನ್ನು ವಿವರಿಸಿ ಹೇಳಲು ಇದು ಸೂಕ್ತ ಸಂದರ್ಭವಲ್ಲ. ಆದರೆ ಮಹಿಳೆಯರ ಸ್ಥಿತಿಗತಿಗಳನ್ನು ಅರಿಯುವಲ್ಲಿ, ಸುಧಾರಣೆಯ ಪ್ರಯತ್ನಗಳಲ್ಲಿ ತೊಡಗುವಲ್ಲಿ ವಿಸ್ತೃತ ಹಾಗೂ ಸೂಕ್ಷ್ಮ ಅಧ್ಯಯನಗಳ ಅಗತ್ಯವನ್ನಂತೂ ನಿರಾಕರಿಸಲಾಗದು. ಇಂತಹ ಅಧ್ಯಯನಗಳು ವಿವಿಧ ಆಯಾಮಗಳಲ್ಲಿ ಚರ್ಚೆಗೆ ಒಳಗಾಗಬೇಕು. ಈ ಅಗತ್ಯವನ್ನು ಪೂರೈಸುವ ಸಮರ್ಥವಾದ ವೇದಿಕೆಯೂ ಒದಗಬೇಕು. ನಿರುಪಯುಕ್ತ ಬೌದ್ಧಿಕ ಚಟುವಟಿಕೆಗಳು ಹಾಗೂ ವೇಷ ಮರೆಸಿಬರುವ ಬೌದ್ಧಿಕ ಶೋಷಣೆಗಳು ಯಾವ ಬಗೆಯ ಅಪಾಯಗಳನ್ನು ಹುಟ್ಟುಹಾಕಬಲ್ಲವೆಂಬುದನ್ನು ಗುರುತಿಸುವ ಸಾಮರ್ಥ್ಯ ಈ ವೇದಿಕೆಗೆ ಕೂಡಿ ಬರಬೇಕು. ಹಾಗೆಯೇ ಆರೋಗ್ಯಕರವೂ, ಉಪಯುಕ್ತವೂ ಆದ ಚಿಂತನೆಗಳನ್ನು ಬೆಳೆಸುವ ಸಾಧನವಾಗಿಯೂ ಈ ವೇದಿಕೆ ಶಕ್ತಿಯುತವಾಗಬೇಕು. ವ್ಯಕ್ತಿಗಳ ಜೀವನದ ಅನುಭವಗಳು ಸಾಮೂಹಿಕವಾದ ಸಾಮಾಜಿಕ ಚಿಂತನೆಗಳೆನಿಸಿ ಆರೋಗ್ಯಪೂರ್ಣವಾಗಿ ಬೆಳೆಯುವಲ್ಲಿ ಇಂತಹ ವೇದಿಕೆಗಳು ಮಾತ್ರವೇ ನೆರವಾಗಬಲ್ಲವು.

ಕನ್ನಡ ವಿಶ್ವವಿದ್ಯಾಲಯ ಕೇವಲ ಒಂದು ಶೈಕ್ಷಣಿಕ ಕೇಂದ್ರವಲ್ಲ. ನಾಡು, ನುಡಿ, ಸಂಸ್ಕೃತಿಗಳನ್ನು ಅಭಿವ್ಯಕ್ತಿಸುತ್ತಲೇ ಜನರ ಬದುಕನ್ನು ಹಸನು ಮಾಡುವ ಜ್ಞಾನ ಮಾಧ್ಯಮ.

ಇಂತಹುದೇ ಒಂದು ವಿಸ್ತೃತ ಉದ್ದೇಶದಿಂದ ಕನ್ನಡ ವಿಶ್ವವಿದ್ಯಾಲಯವು ಮಹಿಳಾ ಅಧ್ಯಯನಕ್ಕೆ ಮೀಸಲಾದ ಒಂದು ಸ್ವತಂತ್ರ ವಿಭಾಗವನ್ನು ಆರಂಭಿಸುವುದರೊಂದಿಗೆ ಸ್ತ್ರೀಪರ ಚಿಂತನೆಗಳಿಗೆ ಮುಕ್ತ ಅವಕಾಶಗಳನ್ನು ಕಲ್ಪಿಸಿದೆ. ಈ ವಿಭಾಗವು ಮಹಿಳೆಯರ ಸ್ಥಿತಿಗತಿಗಳನ್ನು ವಿವಿಧ ಆಯಾಮಗಳಲ್ಲಿ ಗ್ರಹಿಸಲು ಹಲವು ಯೋಜನೆಗಳನ್ನು ರೂಪಿಸುತ್ತಿದೆ. ಆ ಪೈಕಿ ಮಹಿಳಾಪರ ಚಿಂತನೆಗಳ ಮಂಡನೆ, ಚರ್ಚೆ ಹಾಗೂ ಪ್ರಸಾರಗಳಿಗೆ ಒಂದು ಸಮರ್ಥ ಸಾರ್ವಜನಿಕ ವೇದಿಕೆಯೊಂದನ್ನು ಕಲ್ಪಿಸುವ ಪತ್ರಿಕೆಯೊಂದನ್ನು ತರುವ ಯೋಜನೆ ಅತ್ಯಂತ ಪ್ರಮುಖವಾದುದು. ಈ ಪತ್ರಿಕೆ ಪ್ರಾಮಾಣಿಕವಾಗಿ ಮಹಿಳಾಪರ ಚಿಂತನೆಗಳಲ್ಲಿ ತೊಡಗಿರುವ ನಾಡಿನ ಎಲ್ಲ ವಿದ್ವಾಂಸರ, ಸಹೃದಯರ ಪ್ರೀತಿ ಸಹಕಾರಗಳನ್ನು ಆಶಿಸಿ, ನಿರೀಕ್ಷಿಸಿ ಆರಂಭಗೊಳ್ಳುತ್ತಿದೆ.

ಮಹಿಳಾಪರ ಚಿಂತನೆಗಳ ವೈವಿಧ್ಯಮಯ ಆಯಾಮಗಳನ್ನು ಗ್ರಹಿಸಲು ಅನುಕೂಲವಾದೀತೆಂಬ ಆಶಯದಿಂದ 'ಪತ್ರಿಕೆ' ಯಲ್ಲಿ ವಿವಿಧ ಶೀರ್ಷಿಕೆಗಳನ್ನು ಗುರುತಿಸಿಕೊಳ್ಳಲಾಗಿದೆ. ಸಂಘ-ಸಂಸ್ಥೆಗಳೊಂದಿಗೆ, ಮಹಿಳಾ ಪತ್ರಿಕೆಗಳೊಂದಿಗೆ ನಡೆಸುವ **'ಮಾತುಕತೆ'** ಯಲ್ಲಿ ಮಹಿಳೆಯರು ಸಾಮುದಾಯಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಅನುಭವಗಳನ್ನು ಹಿಡಿಯುವ ಉದ್ದೇಶವಿದೆ. ಹಾಗೆಯೇ **'ಅನುಭವ'** ದಲ್ಲಿ ಸಾಮಾಜಿಕವಾದ ಹಲವು ಪ್ರತಿಕೂಲ ಪರಿಸರಗಳಲ್ಲೂ ಗಟ್ಟಿಯಾಗಿ ಎದ್ದುನಿಂತು ಮಹತ್ವದ ಸಾಧನೆಗಳನ್ನು ತೋರಿದ ಮಹಿಳೆಯರ ಜೀವನವನ್ನು ಪರಿಚಯಿಸಲಾಗುತ್ತದೆ. **'ಸಮಕಾಲೀನ'** ಎಂಬ ಭಾಗದಲ್ಲಿ ಹಲವು ವಾದ ವಿವಾದಗಳನ್ನೆಬ್ಬಿಸುತ್ತಾ, ನಮ್ಮ ಸಮಾಜದ ಮೂಲ ಪ್ರವೃತ್ತಿಗಳನ್ನು ಅನಾವರಣಗೊಳಿಸುತ್ತಿರುವ ಪ್ರಸ್ತುತದ ಮಹಿಳಾ ಸಮಸ್ಯೆಯೊಂದರ ಬಗೆಗಿನ ಚರ್ಚೆ ಇರುತ್ತದೆ. ಇಂತಹ ಒಂದು ಸಮಸ್ಯೆಯ ಬಗ್ಗೆ ವಿವಿಧ ಕ್ಷೇತ್ರಗಳ ತಜ್ಞರಿಂದ ಟಿಪ್ಪಣಿಗಳನ್ನು ಆಹ್ವಾನಿಸಿ ಕ್ರೋಢೀಕರಿಸಿದಾಗ, ವಿಸ್ತೃತವಾದ ಸೂಕ್ಷ್ಮ ಚಿಂತನೆಗೆ ಆಕರವನ್ನು ಕಲ್ಪಿಸಿದಂತಾದೀತು ಎಂಬುದು ಇಲ್ಲಿನ ಆಶಯ. ಮಹಿಳಾ ಅಧ್ಯಯನ ಎಂಬುದು ವಿವಿಧ ಜ್ಞಾನಶಿಸ್ತುಗಳನ್ನು ತೆಕ್ಕೆಗೆ ತೆಗೆದುಕೊಳ್ಳಬೇಕಾದ ಕ್ಷೇತ್ರ. ಸಾಹಿತ್ಯ, ಮಾನವಿಕಗಳಲ್ಲಿ, ವಿಜ್ಞಾನ - ತಂತ್ರಜ್ಞಾನ ಕ್ಷೇತ್ರಗಳಲ್ಲಿ ಜರುಗುವ ಸೃಜನಶೀಲ ಪ್ರಕ್ರಿಯೆಗಳನ್ನು, ಸಂಶೋಧನೆಯ ಪ್ರಯೋಗಗಳನ್ನು ಸಾಮಾಜಿಕ ನೆಲೆಯಲ್ಲಿ ವಿವರಿಸಿಕೊಳ್ಳುವುದು ತುಂಬಾ ಅಗತ್ಯ. ಏಕೆಂದರೆ ಈ ಮೂಲಕವೇ ನಮ್ಮ ಸಮಾಜವು ಮಹಿಳೆಯ ಬಗೆಗೆ ತೋರುತ್ತಿರುವ ಧೋರಣೆಗಳನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಈ ಉದ್ದೇಶದಿಂದ **'ಗ್ರಹಿಕೆ'** ಎಂಬ ಶೀರ್ಷಿಕೆಯನ್ನು ರೂಪಿಸಲಾಗಿದ್ದು, ಇಲ್ಲಿ ವಿವಿಧ ಕ್ಷೇತ್ರಗಳ ಸೃಜನಾತ್ಮಕ ಹಾಗೂ ಸಂಶೋಧನಾತ್ಮಕ ಸಂದರ್ಭಗಳನ್ನು ಪರಿಚಯಿಸಲಾಗುತ್ತದೆ. ಇವಿಷ್ಟು ನಿರ್ದಿಷ್ಟ ಉದ್ದೇಶಗಳ ಶೀರ್ಷಿಕೆಗಳು. ಇನ್ನುಳಿದ ಪುಟಗಳಲ್ಲಿ ನಾಡಿನ ವಿವಿಧ ಕ್ಷೇತ್ರಗಳ ವಿದ್ವಾಂಸರು ತಮ್ಮ ಸ್ವತಂತ್ರ ಪರಿಕಲ್ಪನೆ, ಚಿಂತನೆಗಳನ್ನು ಮಂಡಿಸುವ ಲೇಖನಗಳು ಇವೆ. ಇಂತಹ ಉಪಯುಕ್ತ ಲೇಖನಗಳು ಬೇರೆ ಭಾಷೆಯಲ್ಲಿದ್ದರೆ ಅವುಗಳು ಅನುವಾದಗಳಾಗಿ, ಸಂಗ್ರಹಗಳಾಗಿ ಬರುತ್ತವೆ. ಇನ್ನೊಂದು ಮುಖ್ಯ ಶೀರ್ಷಿಕೆ 'ಅಭಿವ್ಯಕ್ತಿ'. ಇದರಲ್ಲಿ ಮಹಿಳೆಯರ ಸೃಜನಶೀಲ ಅಭಿವ್ಯಕ್ತಿಗೆ ವೇದಿಕೆಯನ್ನು ಒದಗಿಸಲಾಗಿದ್ದು ಕತೆ, ಕವನ ಇತ್ಯಾದಿಗಳನ್ನು ಕೊಡಲಾಗುತ್ತದೆ. ಮಹಿಳಾ ಸಾಹಿತ್ಯದ ಚರಿತ್ರೆಯಲ್ಲಿ ಅಪರೂಪವೆನಿಸಿಯೂ, ಹೆಚ್ಚು ಪ್ರಚಲಿತವಾಗದೆ ಉಳಿದ ಸೃಜನಶೀಲ ಅಭಿವ್ಯಕ್ತಿಗಳನ್ನೂ ಈ ಶೀರ್ಷಿಕೆಯಲ್ಲಿ ಅಳವಡಿಸಲಾಗುತ್ತದೆ. ಕೊನೆಯದಾಗಿ 'ಮಹಿಳಾ ಅಧ್ಯಯನ'ಕ್ಕೆ ನೆರವಾಗುವ ಗ್ರಂಥಸೂಚಿಯನ್ನು **'ಒದಿಗೆ ನೆರವು'** ಎಂಬ ಭಾಗದಲ್ಲಿ ನೀಡಲಾಗಿದೆ.

ನಮ್ಮ ಈ ಪತ್ರಿಕೆಯ ಎಲ್ಲ ಹಂತಗಳಲ್ಲೂ ನಮ್ಮ ಮಾನ್ಯ ಕುಲಪತಿಯವರು ಮಾರ್ಗದರ್ಶಕರಾಗಿ ಮುನ್ನಡೆಸಿದ್ದಾರೆ. ಪತ್ರಿಕೆಗಷ್ಟೇ ಅಲ್ಲ, ನಮ್ಮ ಮಹಿಳಾ ಅಧ್ಯಯನ ವಿಭಾಗಕ್ಕೆ, ಅದು ಇಡುವ ಪ್ರತಿಯೊಂದು ಹೆಜ್ಜೆಗೆ ಅವರೇ ಕಾರಣಕರ್ತರು. ನಮಗೆ ಪ್ರೇರಣೆ, ಪ್ರೋತ್ಸಾಹ, ಬೆಂಬಲಗಳನ್ನು ನೀಡುತ್ತಾ ಇಂತಹ ಮಹತ್ವದ ಕಾರ್ಯಯೋಜನೆಯಲ್ಲಿ ನಮ್ಮನ್ನು ತೊಡಗಿಸಿದ್ದಾರೆ. ಮಾನ್ಯ ಕುಲಪತಿ ಡಾ. ಎಂ. ಎಂ. ಕಲಬುರ್ಗಿಯವರಿಗೆ ನಮ್ಮ ಬಗ್ಗೆ ಅವರು ಇಟ್ಟಿರುವ ಭರವಸೆ, ವಿಶ್ವಾಸಗಳಿಗಾಗಿ ನಾನು ವೈಯಕ್ತಿಕವಾಗಿ ಹಾಗೂ ವಿಭಾಗದ ಪರವಾಗಿ ಅತ್ಯಂತ ಗೌರವಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ.

ಈ ಪತ್ರಿಕೆಯನ್ನು ರೂಪುಗೊಳಿಸುವಲ್ಲಿ, ವಿನ್ಯಾಸಗೊಳಿಸುವಲ್ಲಿ ಸಾಕಷ್ಟು ಶ್ರಮವನ್ನು ವಹಿಸಲಾಗಿದೆ. ಅಪರೂಪದ ಇಂತಹ ಒಂದು ಪ್ರಯೋಗದ ಅವಕಾಶ ವ್ಯರ್ಥವಾಗದಿರಲಿ ಎಂದು ಎಚ್ಚರವನ್ನು ವಹಿಸಲಾಗಿದೆ. ನಮ್ಮ ಪತ್ರಿಕೆಯ ಸಲಹಾ ಸಮಿತಿಯಲ್ಲಿ ಡಾ. ವಿಜಯಾದಬ್ಬೆ ಮತ್ತು ಡಾ. ಮಲ್ಲಿಕಾ ಘಂಟಿಯವರು ಇದ್ದು ನಮಗೆ ಹಲವು ಉಪಯುಕ್ತ ಸಲಹೆಸೂಚನೆಗಳನ್ನು ನೀಡಿದ್ದಾರೆ. ಅವರ ಈ ನೆರವನ್ನು ನಾನಿಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ. ಪತ್ರಿಕೆಯ ವಿವಿಧ ಶೀರ್ಷಿಕೆಗಳಿಗೆ ಲೇಖನಗಳನ್ನು ಬರೆದುಕೊಟ್ಟು ಉಪಕರಿಸಿದ ನಾಡಿನ ಎಲ್ಲಾ ವಿದ್ವಾಂಸರನ್ನೂ ನೆನೆಯುವುದು ನನ್ನ ಸಂತೋಷದ ಕರ್ತವ್ಯವಾಗಿದೆ. ವಿಭಾಗದ ಸಹೋದ್ಯೋಗಿ ಗೆಳತಿಯರಾದ ಡಾ. ಎಂ. ಉಷಾ ಮತ್ತು ಡಾ. ಶೈಲಜಾ ಇಂ. ಹಿರೇಮಠ ಅವರುಗಳು ಪತ್ರಿಕೆಯನ್ನು ಸಿದ್ಧಪಡಿಸುವ ಎಲ್ಲ ಹಂತಗಳಲ್ಲೂ ನನ್ನೊಂದಿಗೆ ನಿಂತಿದ್ದಾರೆ. ವಿದ್ಯಾರ್ಥಿ ಮಿತ್ರ ಎ. ದಿನೇಶ್ ಮತ್ತು ಯೋಜನಾ ಸಹಾಯಕಿ ಸುಚೇತಾ ನವರತ್ನ ಇವರುಗಳೂ ಹಲವು ಬಗೆಯ ನೆರವನ್ನಿತ್ತಿದ್ದಾರೆ. ಇವರೆಲ್ಲರನ್ನೂ ನಾನಿಲ್ಲಿ ಸಂತೋಷದಿಂದ ನೆನಪಿಸಿಕೊಳ್ಳುತ್ತೇನೆ.

ನಮ್ಮ ಪ್ರಸಾರಾಂಗದ ನಿರ್ದೇಶಕ ಪ್ರೊ. ಎ. ವಿ. ನಾವಡ ಅವರನ್ನೂ, ಪ್ರಸಾರಾಂಗದ ಸಿಬ್ಬಂದಿ ವರ್ಗವನ್ನು ಅವರು ನಿರ್ವಹಿಸಿದ ಪ್ರಕಟಣೆಯ ಜವಾಬ್ದಾರಿಗಾಗಿ ವಂದಿಸುತ್ತೇನೆ. ಡಿ. ಟಿ. ಪಿ. ಮಾಡಿಕೊಟ್ಟ ಯಾಜಿ·ಗ್ರಾಫಿಕ್ಸ್, ಹೊಸಪೇಟೆ ಅವರಿಗೆ ಧನ್ಯವಾದಗಳು. ಪತ್ರಿಕೆಯ ಮುಖಪುಟದ ಅಂದ, ಚಂದ ಹಾಗೂ ಅರ್ಥಪೂರ್ಣತೆಯ ಬಗ್ಗೆ ವಿಶೇಷ ಕಾಳಜಿ ವಹಿಸಿ ನೆರವಾದ ಶ್ರೀ ಮಕಾಳಿ ಹಾಗೂ ಶ್ರೀ ಜಯಕುಮಾರ್ ಅವರ ಸ್ನೇಹಕ್ಕೆ ನಾನು ಋಣಿ. ಮುದ್ರಣ ವಿನ್ಯಾಸದಲ್ಲಿ ನೆರವಾದ ಶ್ರೀ ಸುಜ್ಞಾನಮೂರ್ತಿ ಇವರಿಗೆ ಧನ್ಯವಾದಗಳು. ಪತ್ರಿಕೆಯ ವಿವಿಧ ಹಂತಗಳಲ್ಲಿ ನೆರವಾದವರನ್ನು ಪ್ರತ್ಯೇಕ ಪ್ರತ್ಯೇಕವಾಗಿ ನೆನೆಯುತ್ತಾ ಈ ಪಟ್ಟಿಯನ್ನು ಬೆಳೆಸುತ್ತಲೇ ಇರಬೇಕಾಗುತ್ತದೆ. ಒಟ್ಟಿನಲ್ಲಿ ಹೇಳಬೇಕೆಂದರೆ ವಿಶ್ವವಿದ್ಯಾಲಯದ ಸ್ನೇಹವಲಯವೆಲ್ಲವನ್ನು ಈ ಸ್ಮರಣೆ ಒಳಗೊಳ್ಳುತ್ತದೆ.

ವಿಶೇಷವಾಗಿ ಈ ಪತ್ರಿಕೆಯನ್ನು ಆದರದಿಂದ ಬರಮಾಡಿಕೊಳ್ಳುತ್ತಿರುವ ಓದುಗರಿಗೆ ನಮ್ಮ ಈ ಪತ್ರಿಕೆ ಮೆಚ್ಚಿಕೆಯಾಗಲಿ ಎಂದು ಆಶಿಸುತ್ತೇನೆ.

ಶ್ರೀಮತಿ ಎಚ್. ಎಸ್.

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಪರಿವಿಡಿ

# ಗಾಂಧಿವಾದ, ಸ್ತ್ರೀವಾದ ಮತ್ತು ಹೊಸಗನ್ನಡ ಸಾಹಿತ್ಯದಲ್ಲಿ ಮಹಿಳಾ ವಸ್ತು ನಿರ್ವಹಣೆ

ಡಾ. ಪ್ರೀತಿ ಶುಭಚಂದ್ರ

೧

## ಗಾಂಧಿವಾದ ಮತ್ತು ಸ್ತ್ರೀವಾದ

ಜಾಗತಿಕ ಸ್ತ್ರೀವಾದಿ ಚರಿತ್ರೆಯಲ್ಲಿ ಭಾರತೀಯ ಸಂದರ್ಭದ ಸ್ತ್ರೀವಾದವನ್ನು ಖಚಿತವಾಗಿ ರೂಪಿಸಿ ಅದಕ್ಕೊಂದು ತಾತ್ವಿಕ ಆಕಾರವನ್ನು ವಿಶಿಷ್ಟ ಸ್ಥಾನವನ್ನು ಗಾಂಧಿವಾದ ಕಲ್ಪಿಸಿಕೊಟ್ಟಿದೆ. ಸ್ತ್ರೀವಾದದ 'ಭಾರತೀಯ' ವೈಶಿಷ್ಟ್ಯವನ್ನು ರೂಪಿಸುವಲ್ಲಿ ಗಾಂಧಿವಾದ ವಹಿಸಿದ ಪ್ರಧಾನ ಪಾತ್ರವನ್ನು ವಿಶ್ಲೇಷಿಸುವುದು ನನ್ನ ಮುಖ್ಯ ಉದ್ದೇಶ. ಈ ಮೂಲಕ ನನ್ನ ಮಟ್ಟಿಗೆ ಎರಡು ಉದ್ದೇಶಗಳು ನೆರವೇರಿದಂತಾಗುವುದು. ಒಂದು -ಗಾಂಧಿವಾದದ ಮೂಲಕ ಸ್ತ್ರೀವಾದವನ್ನು ಅರ್ಥಮಾಡಿಕೊಳ್ಳುವುದು. ಎರಡನೆಯದು- ಸ್ತ್ರೀವಾದದ ಮೂಲಕ ಗಾಂಧಿವಾದವನ್ನು ಅರ್ಥಮಾಡಿಕೊಳ್ಳುವುದು. ಈ ಮಾರ್ಗವನ್ನು ಅನುಸರಿಸುವುದರಿಂದ ಏಕಕಾಲಕ್ಕೆ ಗಾಂಧಿವಾದ ಮತ್ತು ಸ್ತ್ರೀವಾದದ ಬಗೆಗಿನ ಪೂರ್ವಾಗ್ರಹಗಳನ್ನು ಕೈಬಿಟ್ಟು, ಅವುಗಳ ಇತಿಮಿತಿಗಳನ್ನು ವಸ್ತುನಿಷ್ಠವಾಗಿ ತಿಳಿದುಕೊಳ್ಳಲು ಸಹಾಯಕವಾದೀತು.

ಮಹಿಳಾ ಸಮಸ್ಯೆಯನ್ನು ಸಮಗ್ರ ಮಾನವತೆಯ ಬಿಡುಗಡೆಯ ಒಂದು ಅಂಗವಾಗಿ ಮಾತ್ರ ಗಾಂಧಿ ಪರಿಗಣಿಸಲಿಲ್ಲ. ಅತ್ಯಂತ ಮೂಲಭೂತವಾದ, ಪರಿಹರಿಸಲೇಬೇಕಾದ ಪ್ರಾಥಮಿಕ ಸಾಮಾಜಿಕ ಅಗತ್ಯಗಳಾಗಿ ಅವು ಅವರಿಗೆ ಕಂಡವು. ಹೀಗಾಗಿ, ಮಹಿಳಾ ಬಿಡುಗಡೆಯಾಗಲೀ ಅಸ್ಪೃಶ್ಯ ಬಿಡುಗಡೆಯಾಗಲೀ ಕೇವಲ ಆಂಗಿಕ ಅಗತ್ಯ ಮಾತ್ರವಾಗದೆ ಸಮಗ್ರ ಮಾನವತೆಯ ಬಿಡುಗಡೆಗೆ ಮೂಲಮಾದರಿಯಾಗುವಂತೆ ಗಾಂಧಿ ತಮ್ಮ ತತ್ವ ಹಾಗೂ ಕಾರ್ಯಯೋಜನೆಯನ್ನು ರೂಪಿಸಿಕೊಂಡರು.

ಗಾಂಧಿವಾದವನ್ನು ಎರಡು ನೆಲೆಗಳಲ್ಲಿ ಕೆಲಸ ಮಾಡುವ ಒಂದು ಪ್ರಕ್ರಿಯೆಯಾಗಿ ನಾವು ಅರ್ಥಮಾಡಿಕೊಳ್ಳಬೇಕು. ಗಾಂಧಿಯವರ ಸಾಮಾಜಿಕ ಹಾಗೂ ರಾಜಕೀಯ ಚಿಂತನೆಗಳಿಗೆ ಸಂಬಂಧಿಸಿದಂತೆ ಎರಡು ಸ್ತರಗಳ ಸಂರಚನೆಯನ್ನು ಕಾಣಬಹುದು. ಮೊದಲನೆಯದು -ಅತೀತವಾಗುಳಿಯದ ಆತ್ಯಂತಿಕ ಆದರ್ಶಪರತೆ. ಎರಡನೆಯದು - ಈ ಅತೀತದ ಸಾಮೀಪ್ಯಕ್ಕೆ ಕ್ರಮೇಣ ಕೊಂಡೊಯ್ಯಬಲ್ಲ ಕ್ರಿಯಾಚರಣೆ. (approximation to the altimate ideal)

ಅಹಿಂಸೆ, ಸತ್ಯ, ಸ್ವಾತಂತ್ರ್ಯ, ಸಮಾನತೆ, ತ್ಯಾಗ ಮೊದಲಾದ ಪರಮ ಮೌಲ್ಯಗಳ ಪರಿಪೂರ್ಣ ಅನುಷ್ಠಾನವನ್ನು ಸ್ವಕೇಂದ್ರದ ನೆಲೆಯಲ್ಲಿ ಮೊದಲನೆಯ ಸ್ತರದ ಚಿಂತನೆ ನಿಲ್ಲಿಸುತ್ತದೆ. ಈ ಚಿಂತನೆ ಯಾವುದೇ ರಾಜಕೀಯ ಅಧಿಕಾರ ವ್ಯವಸ್ಥೆಯನ್ನು ಅವಲಂಬಿಸದ ಶುದ್ಧ ಅರಾಜಕೀಯ ಆಧ್ಯಾತ್ಮಿಕ ಸ್ವರೂಪವುಳ್ಳದ್ದು. ಎರಡನೆಯ ಸ್ತರವು ಸ್ವಲ್ಪಮಟ್ಟಿಗೆ ಸಮಾಜವಾದೀ ಪ್ರಜಾಪ್ರಭುತ್ವ (democratic socialism) ದ ಸ್ವರೂಪವನ್ನು ಹೊಂದಿದ್ದು ಆದರ್ಶಗಳ ಅನುಷ್ಠಾನದ ವಿಷಯದಲ್ಲಿ ಸಾಪೇಕ್ಷವಾದ ಆದರೆ ಮೂರ್ತವಾದ ಕಾರ್ಯಚಟುವಟಿಕೆಗಳನ್ನುಳ್ಳದ್ದು. ಇವೆರಡೂ ಸ್ತರಗಳ ನಡುವಣ ದ್ವಂದ್ವಾತ್ಮಕ ಪ್ರಕ್ರಿಯೆಯನ್ನು ನಾವು ಗಾಂಧಿವಾದದಲ್ಲಿ ಗುರುತಿಸಬಹುದು. ಗಾಂಧಿವಾದದ ಈ ದ್ವಂದ್ವಾತ್ಮಕ ವೈಶಿಷ್ಟ್ಯವು ಮಹಿಳೆಯರ ಬಗೆಗಿನ ಅವರ ಚಿಂತನೆಗಳನ್ನು ಅರ್ಥೈಸಿಕೊಳ್ಳಲು ನಮಗೆ ಸೂಕ್ತ ಚೌಕಟ್ಟನ್ನು ಒದಗಿಸುತ್ತದೆ.

ವೈಯಕ್ತಿಕ ನೆಲೆಯ 'ಆತ್ಮ'ದ ಪರಿಶುದ್ಧತೆಯ ಚಿಂತನೆಯನ್ನು ಗಂಡು-ಹೆಣ್ಣನ್ನೊಳಗೊಂಡ ಕೌಟುಂಬಿಕ ವಲಯದ ಆಚಾರ ಸಂಹಿತೆಯಾಗಿಸಿ, ಅನಂತರ ಸಾರ್ವಜನಿಕ ವಲಯದ ರಾಜಕೀಯ ನೈತಿಕತೆಯ ಮಟ್ಟಕ್ಕೆ ಕೊಂಡೊಯ್ದ ಸಾಧನೆ ಗಾಂಧಿಯದು. ಗಾಂಧಿಯ ಈ ಪ್ರಯತ್ನದ ಮೂಲವು ಭಾರತೀಯ ಆಧ್ಯಾತ್ಮಿಕ ಚಿಂತನ ಕ್ರಮಗಳದ್ದು. ಮಹಿಳೆಯ ಬಗೆಗಿನ ಅವರ ವಿಚಾರಗಳು ನೇರವಾಗಿ ಹಿಂದೂ ಧರ್ಮದ 'ಪಾವಿತ್ರ್ಯ'ಕ್ಕೆ ಸಂಬಂಧಿಸಿದ ನಂಬಿಕೆಗಳಿಂದ ರೂಪಿತವಾಗಿದೆ. ಗಾಂಧಿಯವರಿಗೆ, 'ಆತ್ಮ'ದ ಪರಿಕಲ್ಪನೆಯಂತೆಯೇ ಹಿಂದೂಧರ್ಮವೂ ಮೂಲತಃ ಪರಿಶುದ್ಧವಾದುದು. ಹಾಗೆಯೇ ಕುಟುಂಬದ ಕೇಂದ್ರವಾದ ಮಹಿಳೆಯೂ ಪವಿತ್ರಳು. ಆತ್ಮ ಹೇಗೆ ಸಹಜವಾಗಿ ಶುದ್ಧ ಸ್ವರೂಪದಲ್ಲಿದ್ದರೂ ಇಂದ್ರಿಯ ಮೂಲ ಶರೀರ ಸಂಪರ್ಕದಿಂದ ಕಲುಷಿತಗೊಳ್ಳುವುದೋ ಹಾಗೇ ಹಿಂದೂ ಧರ್ಮವೂ ಸ್ವಾರ್ಥಸಾಧಕ ವಿಷಯಲಂಪಟ ಅಧಿಕಾರದಾಹಿ ಜನರಿಂದ ಕಳಂಕಯುತವಾಗಿದೆ. ಮಹಿಳೆಯರ ಬಗೆಗಿನ ಕೀಳುಭಾವನೆಯಾಗಲಿ ಅಸ್ಪೃಶ್ಯರ ಬಗೆಗಿನ ತಿರಸ್ಕೃತ ಧೋರಣೆಯಾಗಲಿ ಹಿಂದೂ ಧರ್ಮದ ಕಳಂಕಯುಕ್ತ ಭಾಗಗಳು. ವೈಯಕ್ತಿಕ ಸಾಧನೆಯ ಮೂಲಕ ಹೇಗೆ 'ಆತ್ಮ'ತನ್ನ ಕಳಂಕವನ್ನು ಕಳೆದುಕೊಂಡು ಶುದ್ಧ ನಿರಂಜನ ಸ್ಥಿತಿಗೇರುತ್ತದೆಯೋ ಅಂತೆಯೇ ಸ್ತ್ರೀ ಹಾಗೂ ಅಸ್ಪೃಶ್ಯಶೋಷಣೆಯ ಕಳಂಕವನ್ನು ನೀಗಿಕೊಂಡು ಹಿಂದೂಧರ್ಮ ಶುದ್ಧವಾಗಬೇಕೆಂಬ ಆದರ್ಶವನ್ನು ಗಾಂಧಿ ನಮ್ಮ ಮುಂದಿಡುತ್ತಾರೆ. ಹೀಗೆ ಮಹಿಳಾ ಶೋಷಣೆಯ ಸ್ವರೂಪವನ್ನು ಧಾರ್ಮಿಕ ಶುದ್ಧೀಕರಣ ಕ್ರಿಯೆಯ ಚೌಕಟ್ಟಿನಲ್ಲಿ ಗಾಂಧಿ ವಿವೇಚಿಸುತ್ತಾರೆ.

ಗಾಂಧಿಯವರ ಅಹಿಂಸೆ ಹಾಗೂ ಸತ್ಯದ ವಿಚಾರಗಳು ಆದರ್ಶೀಕೃತ ಸ್ತರದಲ್ಲಿ ಮಂಡಿತವಾಗುವಾಗ ಸ್ತ್ರೀಯನ್ನು ಮೂಲ ಮಾದರಿಯಾಗಿ ಸ್ವೀಕರಿಸುತ್ತದೆ. ಅವರ ಪ್ರಕಾರ ಮಹಿಳೆ ಅಹಿಂಸೆಯ ಮೂರ್ತಿವೆತ್ತ ಸ್ವರೂಪ. ಅಹಿಂಸೆ ಎಂದರೆ ಅಪರಿಮಿತ ಪ್ರೇಮ; ಅಪರಿಮಿತ ಸಹನಾಶಕ್ತಿ. ಈ ಗುಣಗಳು ಅವಳ ತಾಯ್ತನದ ಸಹಜ ಸತ್ವದಿಂದಾಗಿ ಮತ್ತೂ ಉಜ್ವಲವಾಗಿ ಅವಳಲ್ಲಿ ಬೆಳಗುತ್ತವೆ. ಮಹಿಳೆಯರು ಆತ್ಮತ್ಯಾಗದ

ಮೂರ್ತರೂಪ. ಆದುದರಿಂದ ಸಹಜಸ್ವಭಾವವಾಗಿ ಕೌಟುಂಬಿಕ ವಲಯದಲ್ಲಿ ಪ್ರಕಟಗೊಳ್ಳುವ ಮಹಿಳೆಯ ಈ ಗುಣಗಳು ದೇಶಸೇವೆಗೆ, ಆ ಮೂಲಕ ಮಾನವತೆಯ ಸೇವೆಗೆ ವಿನಿಯೋಗವಾಗಬೇಕೆಂಬ ಆದರ್ಶವನ್ನು ಗಾಂಧಿ ರೂಪಿಸುತ್ತಾರೆ. ಏಕೆಂದರೆ ಗಾಂಧಿಯ ಪ್ರಕಾರ ಸ್ತ್ರೀ ಪುರುಷರಲ್ಲಿ ಸ್ತ್ರೀಯೇ ಹೆಚ್ಚು ಘನತೆವೆತ್ತವಳು. ತ್ಯಾಗ, ಮೌನ, ವೇದನಾನುಭವ, ನಂಬಿಕೆ, ಜ್ಞಾನ, ಸಹನೆಗಳ ಸಾಕಾರ ರೂಪ ಆಕೆ. ಮಹಿಳೆಯ ಈ ಗುಣಗಳು ಅಹಿಂಸೆಯ ಮೂಲಕ ನಡೆಸುವ ಸತ್ಯಾಗ್ರಹ ಹೋರಾಟಕ್ಕೆ ಅತ್ಯಗತ್ಯವಾಗಿರಲೇಬೇಕಾದ ಅರ್ಹತೆಗಳು. ಹೀಗಾಗಿ ಪುರುಷನಿಗೆ ಮಹಿಳೆ ಸರಿಸಮಾನಳೆನ್ನುವುದಕ್ಕಿಂತ ಆತನಿಗೆ ಆದರ್ಶದ ಕೇಂದ್ರವೂ ಆಗಿದ್ದಾಳೆ. ಅವರ ಮಾತುಗಳನ್ನೇ ನೋಡಿ : "ಸ್ತ್ರೀಯನ್ನು ಅಬಲೆ ಎನ್ನುವುದು ಒಂದು ಅಪಮಾನಕರ ಮಾತೇ ಸರಿ; ಅದು ಮಹಿಳೆಯರಿಗೆ ಪುರುಷ ಎಸಗಿರುವ ಒಂದು ಅನ್ಯಾಯ. ಶಕ್ತಿಯ ಅರ್ಥ ಕೇವಲ ಪಾಶವಿಕ ಶಕ್ತಿ ಎನ್ನುವುದಾದರೆ, ಆಗ ಸ್ತ್ರೀ ನಿಜವಾಗಿಯೂ ಪುರುಷನಷ್ಟು ಪಶುಪ್ರಾಯಳಲ್ಲ. ಆದರೆ ಶಕ್ತಿಯ ಅರ್ಥ ನೈತಿಕ ಶಕ್ತಿ ಎನ್ನುವುದಾದರೆ, ಆಗ ಸ್ತ್ರೀ ಪುರುಷನಿಗಿಂತ ಅಗಾಧ ಮೇಲ್ಮೆಯವಳೆನಿಸುತ್ತಾಳೆ." [1]

ಸ್ತ್ರೀಯನ್ನು ಹೀಗೆ ನೈತಿಕ ಹಾಗೂ ಆಧ್ಯಾತ್ಮಿಕ ಸಾಮರ್ಥ್ಯದ ಸಂಕೇತವಾಗಿ ಪುರುಷಪ್ರಧಾನ ಜಗತ್ತಿನೆದುರು ಗಾಂಧಿ ಇಡುತ್ತಾರೆ. ಪುರುಷ ಪ್ರಧಾನ ಜಗತ್ತಿನ ಸ್ತ್ರೀ ಶೋಷಣೆಯ ಸಂಕೇತವಾಗಿ ಇಂದಿನ ಸ್ತ್ರೀವಾದಿಗಳಿಂದ ಪರಿಭಾವಿಸಲ್ಪಡುವ ಸೀತೆ, ಸಾವಿತ್ರಿ, ದ್ರೌಪದಿ, ದಮಯಂತಿಯರು ಇತ್ಯಾತ್ಮಕ ಮೌಲ್ಯಗಳಾದ ಧೈರ್ಯ, ಸ್ಥೈರ್ಯ, ಪಾವಿತ್ರ್ಯದ ಸಂಕೇತಗಳಾಗಿ ಗಾಂಧಿಗೆ ಕಂಡಿದ್ದಾರೆ. ಇದರಿಂದ ಎರಡು ರೀತಿಯ ಪ್ರಯೋಜನಗಳನ್ನು ಗಾಂಧಿ ಪಡೆದುಕೊಳ್ಳುತ್ತಾರೆ. ಏಕಕಾಲಕ್ಕೆ ಸನಾತನಿಗಳನ್ನೂ ಸುಧಾರಣವಾದಿಗಳನ್ನೂ ಸೃಷ್ಟಿಸಿದಂತಹ ವಸಾಹತುಶಾಹಿ ಆಳ್ವಿಕೆಯಲ್ಲಿ ಯಾವುದೇ ನೇರ ಆಕ್ರಮಣಕ್ಕೆ ಗಾಂಧಿ ತೊಡಗುವಂತಿರಲಿಲ್ಲ. ಸೀತೆ, ಸಾವಿತ್ರಿ, ದ್ರೌಪದಿಯರ ಸಾಂಪ್ರದಾಯಿಕ ಸಂಕೇತವನ್ನೇ ಬಳಸಿಯೂ ಉದಾತ್ತೀಕರಣದ ಸಂದರ್ಭದಲ್ಲಿ ಅದಕ್ಕೆ ಕೊಟ್ಟ ಆಯಾಮ ಮಾತ್ರ ಗಾಂಧಿಯವರ ಅದ್ಭುತವಾದ ವ್ಯಾವಹಾರಿಕ ಕೌಶಲ್ಯವನ್ನು ತೋರುತ್ತದೆ. ಸಾಂಪ್ರದಾಯಿಕರು ಹೇರುವ ಸ್ತ್ರೀಗುಣಗಳ ಅಪೇಕ್ಷೆಯ ಚೌಕಟ್ಟು ಪುರುಷರ ಹಿತಾಸಕ್ತಿಗಳನ್ನೂ ಕಾಪಾಡುವಂತಹದ್ದು. ಗಾಂಧಿ ಬಳಸುವ ಸೀತೆ ಸಾವಿತ್ರಿಯರ ಸಂಕೇತವಾದರೋ ಮಹಿಳೆಯ ಮೇಲೆ ಹೇರಲ್ಪಡುವ ಪಾಕ್ಷಿಕ ಅಪೇಕ್ಷೆಯಾಗಿರದೆ ಪುರುಷನು ಭರಿಸಲೇಬೇಕಾದ ಗುಣಾವಳಿಗಳ ಆದರ್ಶೀಕೃತ ಸಂಕೇತವಾಗುತ್ತದೆ. ಇದಕ್ಕೆ ಅವರು ತಮ್ಮ ಅನುಭವಕ್ಕೆ ಬಂದ ಉದಾಹರಣೆಯನ್ನು ಕೊಡುತ್ತಾರೆ. ಸ್ತ್ರೀಗೆ ಸಹಜವಾಗಿ ನೋವನ್ನು ಸಹಿಸುವ, ಯಾತನೆಯನ್ನು ತಾನಾಗಿಯೇ ಆಹ್ವಾನಿಸುವ ಶಕ್ತಿ ಆಕೆಯಲ್ಲಿರುವ ಪ್ರೇಮಭಾವನೆಯಿಂದ ಒದಗುತ್ತದೆಂದೂ, ಅಹಿಂಸೆ ಎಂದರೆ ಪ್ರೇಮವೆಂದೂ, ಪ್ರೇಮವೆಂದರೆ ಎಣೆಯಿಲ್ಲದ ನೋವನ್ನು ಸಹಿಸುವ ಶಕ್ತಿಯೆಂದೂ ಗಾಂಧಿ ಭಾವಿಸುತ್ತಾರೆ. ಗರ್ಭಸ್ಥ ಶಿಶುವಿಗೆ ಅಪಾಯವಾದೀತೆಂಬ ಮಮತೆಯಿಂದ ಅರಿವಳಿಕೆ ಇಲ್ಲದೆಯೇ ಶಸ್ತ್ರಚಿಕಿತ್ಸೆಗೆ ಒಳಗಾದ ಮಹಿಳೆಯ ಮನೋಸ್ಥೈರ್ಯವನ್ನು, ಅದ್ಭುತ

ಸಹನಶಕ್ತಿಯನ್ನು ಗಾಂಧಿ ಉದಾಹರಿಸುತ್ತಾರೆ.

ಹೀಗೆ ವಿಚಾರಮೂಲವಾದಿ ನೆಲೆಯಿಂದ ಹೊರಡುವ ಗಾಂಧಿಯವರ ಚಿಂತನೆಗಳು ಮಹಿಳಾಬಿಡುಗಡೆಗೆ ಸಂಬಂಧಿಸಿದಂತೆ ಮೂರ್ತವಾದ ವಾಸ್ತವಿಕವಾದ ಪರಿಹಾರವನ್ನು ಸೂಚಿಸುವುದಿಲ್ಲವೆಂಬ ಮಿತಿಯನ್ನು ಗಾಂಧಿಯವರ ಸಮಕಾಲೀನರೇ ಗುರುತಿಸುತ್ತಾರೆ. ಸ್ತ್ರೀ ಶಿಕ್ಷಣದ ಬಗೆಗೆ, ವಿಧವಾ ಸಮಸ್ಯೆ, ವೇಶ್ಯಾ ಸಮಸ್ಯೆ, ಸ್ತ್ರೀಯರ ರಾಜಕೀಯ ಪ್ರವೇಶದ ಬಗೆಗಿನ ಅವರ ನಿಲುವುಗಳು ಆಧುನಿಕ ಸ್ತ್ರೀವಾದಿ ನೆಲೆಯಿಂದ ನೋಡಿದಾಗ ಪ್ರಗತಿ ವಿರೋಧಿ ಎನಿಸುತ್ತದೆ. ಪ್ರಗತಿ ವಿರೋಧಿ ಎನಿಸುವ ಅವರ ಬಹಳಷ್ಟು ಆಲೋಚನೆಗಳು ಮೊದಲು ಹೇಳಿದಂತಹ ಎರಡನೆಯ ಸ್ತರದ ಚಿಂತನೆಯಲ್ಲಿ ವ್ಯಕ್ತವಾಗುತ್ತದೆ. ನ್ಯಾಷನಲ್ ಕಾಂಗ್ರೆಸ್ ಪಕ್ಷದೊಂದಿಗಿನ ಗಾಂಧಿಯವರ ಸಂಬಂಧವು ಅತ್ಯಂತ ಸೂಕ್ಷ್ಮವೂ ಜಟಿಲವೂ ಆದುದಾಗಿತ್ತು. ಬಹುಸಂಖ್ಯಾತ ಜನವರ್ಗದ ಪ್ರತಿನಿಧಿ ಎನಿಸುವ ಪಕ್ಷದ ಸಂರಚನೆಯ ಇತಿಮಿತಿಗಳ ಪರಿಚಯ ಗಾಂಧಿಯವರ ಸೂಕ್ಷ್ಮ ದೃಷ್ಟಿಗೆ ಗಾಢವಾಗಿತ್ತು. ಹೋರಾಟಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಡುವಷ್ಟರ ಮಟ್ಟಿಗೆ ಗಾಂಧಿ ಪಕ್ಷದ ಪ್ರಾತಿನಿಧಿಕ ಸ್ವರೂಪವನ್ನು ಮಾನ್ಯ ಮಾಡಿದ್ದರು. ಗಾಂಧಿಯವರ ಚಿಂತನೆಗಳ ನೈಜ ಯಶಸ್ಸಿರುವುದೇ ಪಕ್ಷದ ಆಚೆ ನಿಂತು ನಿಷ್ಪಕ್ಷಪಾತವಾಗಿ ಪ್ರಾಮಾಣಿಕವಾಗಿ ತನ್ನನ್ನು ತೊಡಗಿಸಿಕೊಳ್ಳುವಲ್ಲಿ, ಪಕ್ಷದ ಆಚೆ ಉಳಿದೂ ಪಕ್ಷದ ನೈತಿಕ ಕೇಂದ್ರುವನ್ನು ನಿಯಂತ್ರಿಸುವ ಪ್ರಯಾಸದ ಕಾರ್ಯವನ್ನು ಗಾಂಧಿ ನಿರ್ವಹಿಸಬೇಕಾಗಿತ್ತು. ಇಂಥ ಸಂದರ್ಭದಲ್ಲಿ ಬಹುಸಂಖ್ಯಾತ ಜನವರ್ಗದ ಮನೋಕೋಶದೊಳಗೆ ಈಗಾಗಲೇ ಸಿದ್ಧವಿರುವ ಎಲ್ಲ ಸಾಂಪ್ರದಾಯಿಕ ಎನಿಸಬಹುದಾದ ನಂಬಿಕೆಗಳ ವಲಯವನ್ನು ಪೂರ್ಣತಿರಸ್ಕರಿಸದೆ ಸಂಸ್ಕರಿಸಿ ಉತ್ತಮಗೊಳಿಸುವ 'ಶುದ್ಧೀಕರಣ' ಕ್ರಿಯೆಯಲ್ಲಿ ತೊಡಗಿದರು. ಹೊಸ ರೀತಿ ಶಿಕ್ಷಣ ವ್ಯವಸ್ಥೆ ಬಹುಸಂಖ್ಯಾತರನ್ನು ಮುಟ್ಟಿರದ ಸನ್ನಿವೇಶದಲ್ಲಿ ಗಾಂಧಿಯವರಿಗೆ ತಮ್ಮ ಪ್ರಯತ್ನಗಳ ಮಿತಿಯ ಅರಿವಿತ್ತು. ಸಾಮಾನ್ಯ ಜನವರ್ಗದ ಪ್ರಜ್ಞೆಯಲ್ಲೇ ಹೊಸ ಸ್ಥಿತ್ಯಂತರವನ್ನುಂಟುಮಾಡುವುದು ವಾಸ್ತವವಾಗಿ ಅಸಾಧ್ಯವಾಗಿತ್ತು. ಅಂಥ ಸಂದರ್ಭದಲ್ಲಿ ಸಾಂಪ್ರದಾಯಿಕವೆನಿಸಬಹುದಾದ ಸಿದ್ಧ ಸಂಕೇತಗಳನ್ನು ಬಳಸಿಯೇ ಹೋರಾಟಕ್ಕೆ ಬೇಕಾದ ತಾತ್ವಿಕ ಚೌಕಟ್ಟನ್ನು ರೂಪಿಸಿಕೊಳ್ಳದೆ ಅವರಿಗೆ ವಿಧಿ ಇರಲಿಲ್ಲ. ಅಹಿಂಸಾತ್ಮಕ ಸತ್ಯಾಗ್ರಹ ಹೋರಾಟದಲ್ಲಿ ಸ್ತ್ರೀಯರೂ ಒಳಗೊಂಡಂತೆ ಹೆಚ್ಚು ಜನಸಮುದಾಯವು ಯಶಸ್ವಿಯಾಗಿ ತನ್ನನ್ನು ತೊಡಗಿಸಿಕೊಳ್ಳುವಂತೆ ಇದು ಮಾಡಿತು. ಗಾಂಧಿಯವರ ರಾಜಕೀಯ ಜೀವನದ ಚರಿತ್ರೆಯೇ ಸ್ವಂತ ಬದುಕನ್ನೂ ಜನತೆಯ ಎದುರು ತೆರೆದಿಟ್ಟುಕೊಂಡ ಪಾರದರ್ಶಕತೆಯಿಂದ ಕೂಡಿದುದಾಗಿದೆ. ಅಹಿಂಸಾತ್ಮಕ ಮಾರ್ಗದ ರಾಜಕೀಯ ಹೋರಾಟದ ಯಶಸ್ಸಿಗೆ ಬೇಕಾದ ನೈತಿಕತೆಯ ಮಾದರಿಯನ್ನು ನ್ಯಾಷನಲ್ ಕಾಂಗ್ರೆಸ್ ಪಕ್ಷ ಹೊರುವ ಧೈರ್ಯ ತೋರಲಿಲ್ಲ. ಹೀಗಾಗಿ ಆದರ್ಶದ ದೊಡ್ಡ ಮಾದರಿಯಾಗಬೇಕಾದ ಭಾರವನ್ನು ಗಾಂಧಿಯವರು ವೈಯಕ್ತಿಕ ಬದುಕಿನಲ್ಲಿ ಹೊರುವಂತಾಯಿತು. ಈ ಅತಿಭಾರ ಗಾಂಧಿಯವರ ಧೋರಣೆಗಳನ್ನು

ಅನಗತ್ಯಎನಿಸುವಷ್ಟು ನಿಷ್ಠುರಗೊಳಿಸಿದವು.

ಒಳಿತನ್ನು ಸಾಧಿಸಬೇಕಾದಾಗ ಕೂಡ ಪತ್ನಿಯ ಮೇಲೆ ಪತಿಯಾದವನು ತನ್ನ ಗಂಡಸುತನದ ಅಧಿಕಾರವನ್ನು ಹೇರಬಾರದು ಎಂದು ಹೇಳುವ ಗಾಂಧಿ ಕಸ್ತೂರಬಾರನ್ನು ನಡೆಸಿಕೊಂಡ ರೀತಿ ಹಲವರಿಗೆ ಅಮಾನವೀಯವೆನಿಸುತ್ತದೆ. ಆದರೆ ಈ ಅತಿನಿಷ್ಠುರತೆಯೇ ಗಾಂಧಿ ತನ್ನನ್ನು ಅಸಂಖ್ಯಾತ ಭಾರತೀಯರೊಂದಿಗೆ ಭಾವನಾತ್ಮಕ ಸಂಬಂಧ ಕಲ್ಪಿಸಿಕೊಳ್ಳಲು ಕಾರಣವಾಯಿತು. ಶುದ್ಧ ಜೀವನಸಂಹಿತೆಯನ್ನು ಅತಿನಿಷ್ಠುರವಾಗಿ ಪ್ರತಿಪಾದಿಸಬೇಕಾದ ಅನಿವಾರ್ಯತೆ ಗಾಂಧಿಗೆ ಒದಗುವುದಕ್ಕೆ ಪಕ್ಷರಾಜಕಾರಣವು ಅದನ್ನು ಪಾಲಿಸುವುದರ ಬಗೆಗಿನ ಅನುಮಾನವೇ ಕಾರಣ. ಗಂಡಸಿಗಿಂತ ಹೆಂಗಸು ಶ್ರೇಷ್ಠ ಎನ್ನುವ ಗಾಂಧಿ ಹೆಣ್ಣು ಪಾಲಿಸಬೇಕಾದ ಪುರುಷನಿರ್ಮಿತ ನಿಷ್ಠುರ ಸಂಹಿತೆಯೊಳಗಿನ ಸಂಕೇತವನ್ನು ಬಳಸಿಕೊಳ್ಳುತ್ತಾರೆ. ಈ ವೈರುಧ್ಯ ಮಹಿಳಾ ಸಮಸ್ಯೆಯ ಬಗೆಗಿನ ಅವರ ಬಹಳಷ್ಟು ಬಿಡಿ ಆಲೋಚನೆಗಳಲ್ಲಿ ದೊರೆಯುತ್ತವೆ. ಮತ್ತು ಅವೆಲ್ಲ ಪರಸ್ಪರ ಸಂಬಂಧಿತವಾದುವು.

ರಾಮ ಮತ್ತು ಸೀತೆಯರ ದಾಂಪತ್ಯದ ಆದರ್ಶವನ್ನು ನಮ್ಮ ಮುಂದೆ ಗಾಂಧಿ ಇಡುವ ರೀತಿ ಇದು :

ಸೀತೆ ಆದರ್ಶ ಪತ್ನಿಯಾಗೂ ರಾಮ ಆದರ್ಶ ಪತಿಯಾಗೂ ಇದ್ದ ಸಂಸಾರದಲ್ಲಿ ಸೀತೆ ಎಂದೂ ರಾಮನಿಗೆ ಗುಲಾಮಳಾಗಿರಲಿಲ್ಲ. ಇಲ್ಲವೆ ಇಬ್ಬರೂ ಪರಸ್ಪರ ಪ್ರೇಮ ಬಂಧನಕ್ಕೊಳಗಾಗಿದ್ದು ಒಬ್ಬರಿಗೊಬ್ಬರು ಗುಲಾಮರಾಗಿದ್ದರೆನ್ನಬಹುದು. ಪ್ರೇಮವಿಲ್ಲದಿದ್ದರೆ ಪತಿಪತ್ನಿ ಸಂಬಂಧವೇ ಅಸ್ತಿತ್ವದಲ್ಲಿ ಉಳಿಯುವುದಿಲ್ಲ. ಸ್ವತಃ ಬಾಲ್ಯವಿವಾಹದ ಕಹಿ ಅನುಭವವನ್ನುಂಡ ಗಾಂಧಿಗೆ ಪರಸ್ಪರರಲ್ಲಿ ಅರಳಬೇಕಾದ ಪ್ರೌಢಾವಸ್ಥೆಯ 'ಪ್ರೇಮ' ಒಂದು ಸಾಮಾಜಿಕ ಮೌಲ್ಯವಾಗಿ ಕೂಡ ಪರಿವರ್ತಿತವಾಗಬಲ್ಲ ಸಾಧ್ಯತೆಯುಳ್ಳದ್ದು ಎನಿಸಿತ್ತು. ಅವರಿಗೆ -ಜೀವನವೇ ಒಂದು ದೊಡ್ಡ ಕರ್ತವ್ಯ ಹಾಗೂ ಸೇವಾಕ್ಷೇತ್ರ. ಮದುವೆ ಎನ್ನುವುದು ಪರಸ್ಪರರಲ್ಲಿನ ಒಳಿತನ್ನು ವೃದ್ಧಿಪಡಿಸುವ, ಆ ಮೂಲಕ ಮಾನವತೆಯ ಸೇವೆಗೆ ತಮ್ಮನ್ನು ತೊಡಗಿಸಿಕೊಳ್ಳುವ ಒಂದು ಅವಕಾಶ. ಹೀಗೆ ದೊಡ್ಡ ಕರ್ತವ್ಯವೊಂದಕ್ಕೆ ತಮ್ಮನ್ನು ಬದ್ಧವಾಗಿಸಿಕೊಳ್ಳುವ ದಾಂಪತ್ಯದ ಆದರ್ಶವು ಹೊಸದಾಗಿ ಏನನ್ನೂ ಹೇಳದಿದ್ದರೂ ಪರೋಕ್ಷವಾಗಿ ಮಹಿಳೆಗೆ ಬಿಡುಗಡೆಯ ಕೊಂಚ ಸಾಧ್ಯತೆಯನ್ನು ಒದಗಿಸಿತು. ಗಂಡಾಗಲೀ ಹೆಣ್ಣಾಗಲೀ ಈ ಕರ್ತವ್ಯ ಲೋಪಕ್ಕೆ ಒಳಗಾದರೆ ತಮ್ಮ ನಡುವಿನ ನೈತಿಕ ನೆಲೆಯ ಬಂಧವನ್ನು ಕಡಿದೊಗೆಯಬಲ್ಲ ಸ್ವಾತಂತ್ರ್ಯವಿದೆ. ಆದರೆ ಆಧುನಿಕ ಅರ್ಥದ ವಿಚ್ಛೇದನವನ್ನು ಗಾಂಧಿ ಒಪ್ಪುವುದಿಲ್ಲ. ಏಕೆಂದರೆ ಗಂಡು ಹೆಣ್ಣುಗಳು ಮದುವೆಯ ಮೂಲಕ ಯಾವ ಉದಾತ್ತ ಸೇವಾ ಉದ್ದೇಶಕ್ಕೆ ಬದ್ಧರಾಗಿದ್ದರೋ ಅದನ್ನು ಅಕಸ್ಮಾತ್ ತಮ್ಮ ನಡುವಿನ ಬಂಧ ಕಡಿದು ಹೋದರೂ ವೈಯಕ್ತಿಕವಾಗಿ ಮುಂದುವರೆಸಬೇಕಾಗುತ್ತದೆ. ಹಿಂದೂಧರ್ಮ ಈ ಉದಾತ್ತ ವೈವಾಹಿಕ ಆದರ್ಶವನ್ನು ಹೊಂದಿದ್ದು ನಂತರ ಸ್ತ್ರೀಯ ಸ್ಥಾನವನ್ನು

ಕೆಳಗಿಳಿಸುವಂತಹ ಅನಿಷ್ಟ ಆಚರಣೆಗಳು ಅದರಲ್ಲಿ ಸೇರಿಕೊಂಡಿವೆ ಎಂದೂ, ಅವುಗಳನ್ನು ಮುಕ್ತಗೊಳಿಸುವುದು ಧಾರ್ಮಿಕ ಶುದ್ಧೀಕರಣದ ಭಾಗ ಎಂದೂ ಗಾಂಧಿ ಭಾವಿಸುತ್ತಾರೆ. ಇದಕ್ಕೆ ಉದಾಹರಣೆಗಾಗಿ, ಮನುಸ್ಮೃತಿಯು ಕೆಲವು ಆಕ್ಷೇಪಾರ್ಹ ಭಾಗಗಳನ್ನು ತಿರಸ್ಕರಿಸಬೇಕೆನ್ನುತ್ತಾರೆ. ಪುರುಷನಿಂದ ದಮನಕ್ಕೊಳಗಾದ ಸ್ತ್ರೀಗೆ ಬಿಡುಗಡೆಯಾಗಿ ಒಂದು ಮಾರ್ಗವಿದೆ ಎನ್ನುತ್ತಾರೆ ಅವರು. ಅದು ಭಕ್ತ ಮೀರಾಳ ಮಾರ್ಗ. ಉದಾತ್ತ ಉದ್ದೇಶಕ್ಕೋಸ್ಕರ ತನಗೆ ಸರಿಕಂಡ ಮಾರ್ಗವನ್ನು ಆಯ್ಕೆಮಾಡಿಕೊಳ್ಳುವ ಹಕ್ಕು ಮಹಿಳೆಗೆ ಇದೆ ಎಂಬ ಅಭಿಪ್ರಾಯ ಅವರದು. ಸಮಕಾಲೀನ ಸಂದರ್ಭದ 'ಜನಸೇವೆಯೇ ಜನಾರ್ದನ ಸೇವೆ' ಎಂಬ ಮಾನವತಾವಾದಿ ಚೌಕಟ್ಟಿನಲ್ಲಿ ಗಾಂಧಿ ಮಹಿಳೆಯ ಈ ಬಿಡುಗಡೆಯ ಆಧ್ಯಾತ್ಮಿಕ, ನೈತಿಕ ಆಯಾಮವನ್ನು ಸಾಮಾಜೀಕರಣಗೊಳಿಸಿದರು. ಆಧ್ಯಾತ್ಮದ ಸಾಮಾಜೀಕರಣದ ಕಾರಣದಿಂದಾಗಿ, ಕುಟುಂಬದ ಭದ್ರಗೋಡೆಯೊಳಗಿನ ಮಹಿಳೆಯ ಬದುಕು ಹೊರಗಿನ ಬೆಳಕನ್ನು ಕಾಣುವಂತಾಯಿತು. ಹೆಚ್ಚು ಸಂಖ್ಯೆಯ ಸ್ತ್ರೀಯರು ಅಸಹಕಾರ ಆಂದೋಲನದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳಲು ಇದರಿಂದ ಸಾಧ್ಯವಾಯಿತು. ದಕ್ಷಿಣ ಆಫ್ರಿಕೆಯ ಗಣಿಕಾರ್ಮಿಕರಿಗೆ ಮಹಿಳೆಯರ ಈ ಪಾಲ್ಗೊಳ್ಳುವಿಕೆ ದೊಡ್ಡ ಸ್ಫೂರ್ತಿಕೇಂದ್ರವಾಯಿತು. ಭಾರತದಲ್ಲೂ ಕೂಡ ಮದ್ಯಪಾನನಿರೋಧ, ಸ್ವದೇಶಿ ವಸ್ತ್ರ ಆಂದೋಲನ, ದಂಡಿಯಾತ್ರೆಯ ಸಂದರ್ಭಗಳಲ್ಲಿ ಮಹಿಳೆಯರು ತೋರಿಸಿದ ಕಾರ್ಯಕ್ಷಮತೆ ಅನನ್ಯವಾದುದು. ಪುರುಷರ ಚಳುವಳಿ ಹಿಂಸಾ ಮಾರ್ಗಕ್ಕಿಳಿಯಬಹುದಾದ ಸಾಧ್ಯತೆಯ ಬಗೆಗೆ ಗಾಂಧಿಯವರಿಗೆ ಆತಂಕವಿತ್ತು. ಚಳುವಳಿಗಳಲ್ಲಿನ ಮಹಿಳೆಯರ ಪ್ರವೇಶವು ಚಳುವಳಿಯು ಹಿಂಸಾತ್ಮಕ ಮಾರ್ಗಕ್ಕೆ ತಿರುಗದ ರೀತಿ ಇತ್ತು. ಜಾಗತಿಕ ಯುದ್ಧದಿಂದ ನೊಂದ ಜನರನ್ನುದ್ದೇಶಿಸಿ ಮಾತನಾಡುವ ಸಂದರ್ಭದಲ್ಲಿ ಭಾರತದ ಮಹಿಳೆಯರ ಸಾಧನೆಯನ್ನು ಜಗತ್ತಿನ ಸ್ತ್ರೀಯರಿಗೆಲ್ಲಾ ಮಾದರಿ ಎನಿಸುವಂತೆ ಅವರು ಎತ್ತಿ ಹಿಡಿಯುತ್ತಾರೆ. ಈ ಕಾರಣಕ್ಕಾಗಿ ಹಿಂಸಾತ್ಮಕ ಯುದ್ಧದಲ್ಲಿ ಸ್ತ್ರೀ ಸೈನ್ಯ ತುಕಡಿಗಳಿರುವುದರ ಬಗೆಗೆ ಗಾಂಧಿಯವರಿಗೆ ಅಸಮಾಧಾನವಿತ್ತು. ತಮ್ಮ ತಮ್ಮ ಮನೆಗಳ ಗಂಡಸರನ್ನು ಯುದ್ಧದಲ್ಲಿ ಪಾಲ್ಗೊಳ್ಳದಂತೆ ತಡೆಗಟ್ಟುವ ಮನೋಭಾವವನ್ನು ಮಹಿಳೆ ಬೆಳೆಸಿಕೊಂಡರೆ ಜಾಗತಿಕ ಶಾಂತಿ ಮೂಡೀತೆಂಬ ಆಸೆ ಅವರದು.

ವಿಜ್ಞಾನ ಪ್ರಚುರ ಯುಗದ ಯಂತ್ರನಾಗರಿಕತೆಯನ್ನು ತೀವ್ರವಾಗಿ ವಿರೋಧಿಸುತ್ತಿದ್ದ ಗಾಂಧಿ ಆ ವಿರೋಧಕ್ಕೆ ಅನುಗುಣವಾಗಿ ಮಹಿಳಾ ಸಮಸ್ಯೆಯನ್ನು ವಿವೇಚಿಸುತ್ತಾರೆ. ಕೈಗಾರಿಕೀಕರಣ, ನಗರೀಕರಣಗಳು ಕುಟುಂಬದ ಹಂತದಿಂದ ಜಾಗತಿಕ ಹಂತದವರೆಗೂ ಬೀರಬಹುದಾದ ಪರಿಣಾಮಗಳ ಬಗೆಗೆ ಗಾಂಧಿಗೆ ಸ್ಪಷ್ಟ ಅರಿವಿತ್ತು. ಉಪಭೋಗವಾದವನ್ನು ಆಧುನಿಕ ಸಂದರ್ಭದಲ್ಲಿ ವ್ಯಕ್ತಿಗಳ ಮೇಲೆ ಹೇರುವ ಕೈಗಾರಿಕೀಕೃತ ನಾಗರಿಕತೆಯ ದಾಳಿಯಿಂದ ಕುಟುಂಬವನ್ನು ರಕ್ಷಿಸಲು ಅವರು ಸಾಂಪ್ರದಾಯಿಕ ರೀತಿಯನ್ನೇ ಅನುಮೋದಿಸುತ್ತಾರೆ. ಅದೆಂದರೆ, ಪಾವಿತ್ರ್ಯದ ಕಲ್ಪನೆಯನ್ನಾಧರಿಸಿದ ಬ್ರಹ್ಮಚರ್ಯಪಾಲನೆಯನ್ನು ಏಕಕಾಲಕ್ಕೆ ವಿವಾಹಿತರಿಗೂ

ಅವಿವಾಹಿತರಿಗೂ, ವಿಧವೆ, ವೇಶ್ಯೆಯರಿಗೂ ಪಾಲಿಸುವಂತೆ ಕರೆ ಕೊಡುತ್ತಾರೆ. ಸಂತತಿಯ ಅಪೇಕ್ಷೆಯಿಂದ ಮಾತ್ರ ದಂಪತಿಗಳು ದೈಹಿಕ ಸಂಪರ್ಕಹೊಂದುವುದು ಧರ್ಮವೆಂದೂ ಮೊದಲ ಸಂತಾನವನ್ನು ಧರ್ಮಜವೆಂದೂ ನಂತರದ್ದು ಕಾಮಜವೆಂದೂ ಹೇಳುತ್ತಾರೆ. ಪಾಶ್ಚಾತ್ಯ ಸಂತಾನನಿರೋಧ ಪ್ರಚಾರವನ್ನು ಈ ಕಾರಣಕ್ಕಾಗಿಯೇ ಗಾಂಧಿ ನಿಷ್ಠುರವಾಗಿ ಖಂಡಿಸುತ್ತಾರೆ. ಉದ್ಯೋಗದ ಅವಕಾಶ ಹೆಚ್ಚಿರುವ ಪಾಶ್ಚಾತ್ಯಮಹಿಳೆಗೆ ಪಾಲನೆಯ ಜವಾಬ್ದಾರಿಯಿಂದ ಬಿಡುಗಡೆಯು ಸಂತಾನನಿರೋಧಕಗಳಿಂದ ದೊರೆಯುತ್ತದೆ ಎಂಬ ವಾದವನ್ನು ಒಪ್ಪಿದರೂ, ಅನೈತಿಕವೆಂದು ಅದನ್ನು ಖಂಡಿಸುತ್ತಾರೆ. ಏಕೆಂದರೆ ಮಾನವತೆಯ ಸೇವೆಗೆ ತಮ್ಮನ್ನು ಸಿದ್ಧಗೊಳಿಸಲು ಪೂರ್ವಭಾವಿಯಾಗಿ ರೂಪುಗೊಳ್ಳಬೇಕಾದ 'ಪ್ರೇಮ'ದ ಬದಲಿಗೆ 'ಕಾಮ' ಮಾತ್ರ ದಂಪತಿಗಳ ನಡುವೆ ಸ್ಥಾನ ಪಡೆಯಲು ಈ ವಿಧಾನಗಳು ಸಹಾಯಕವಾಗುತ್ತವೆಂದು ಅವರ ಅನಿಸಿಕೆ. ಇದು ಮಹಿಳೆ ಹಾಗೂ ಪುರುಷರಿಬ್ಬರೂ ಸಾಂಸಾರಿಕ ಭದ್ರತೆ, ಭೋಗದಿಂದ ಮುಕ್ತರಾಗಿ, ಆಂದೋಲನದಲ್ಲಿ ಭಾಗವಹಿಸದೆ ಇರುವ ಹಾಗೆ ಮಾಡಬಲ್ಲದೆಂಬ ಆತಂಕ ಗಾಂಧಿಯವರದು.

ಅಂತೆಯೇ ಅವಿವಾಹಿತಳಾಗಿ ಉಳಿಯುವ ಸ್ತ್ರೀಯ ನಿರ್ಧಾರವನ್ನು ಗಾಂಧಿ ಮುಕ್ತವಾಗಿ ಸ್ವಾಗತಿಸಿದರು. ಅವಿವಾಹಿತಳಾಗಿ ಬ್ರಹ್ಮಚರ್ಯಪಾಲನೆ ಮಾಡುವ ಹೆಣ್ಣು ಶಿಕ್ಷಿತಳಾಗಿದ್ದರೆ ಆಕೆ ಸಮಾಜಕ್ಕೆ ಮತ್ತೂ ಉಪಯುಕ್ತಳೆಂದು ಅವರು ಭಾವಿಸುತ್ತಾರೆ. ಅದರಂತೆಯೇ ವಿಧವೆ ಕೂಡ. ಆಕೆ "ಹಿಂದೂ ಧರ್ಮ ಮಾನವತೆಗೆ ನೀಡಿದ ಕೊಡುಗೆ. ಈ ದೇಶ ನೂರಾರು ಹಿರಿಯ ಕಿರಿಯ ವಿಧವೆಯರ ಸೇವೆಯನ್ನು ಹೇಗೆ ಪಡೆದುಕೊಳ್ಳಲು ಸಾಧ್ಯವೆಂಬುದನ್ನು ಎಚ್ಚರಿಕೆಯಿಂದ ಪರಿಶೀಲಿಸಬೇಕು" ಎನ್ನುತ್ತಾರೆ. ವರದಕ್ಷಿಣೆಯ ಪೀಡೆಯಿಂದ ಮುಕ್ತಹೊಂದುವ ಹಾದಿಯೆಂದರೆ ಜೀವನಪರ್ಯಂತ ಅವಿವಾಹಿತೆಯಾಗಿಯೇ ಉಳಿಯುವುದು ಎಂದು ಅವರ ಅಭಿಪ್ರಾಯ. ವಿಚ್ಛೇದಿತ ಸ್ತ್ರೀಯರೂ ಕೂಡ "ಒಂದು ಕೆಟ್ಟ ಅನುಭವದ ಬಳಿಕ ಮತ್ತೊಮ್ಮೆ ಮದುವೆಯಾಗಲು ಬಯಸುವುದಿಲ್ಲ" ಎಂಬುದು ಗಾಂಧಿಯುವರ ನಂಬಿಕೆ. ವೇಶ್ಯಾ ಸಮಸ್ಯೆಗೂ ಗಾಂಧಿಯುವರು ಶುದ್ಧ ಜೀವನ ಸಂಹಿತೆಯನ್ನೇ ಪರಿಹಾರವಾಗಿ ಸೂಚಿಸುತ್ತಾರೆ. ಒಬ್ಬ ವೇಶ್ಯೆ ನೇರವಾಗಿ ಗಾಂಧಿಗೆ "ನಾವು ಅತ್ಯಲ್ಪ ಕಾಲದಲ್ಲಿ ಈ ವೃತ್ತಿಯಿಂದಾಗಿ ೧೫, ೨೦ ರೂ ಸಂಪಾದಿಸುತ್ತೇವೆ. ನಿಮ್ಮ ಚರಕ ನಮಗೇನು ಕೊಡುತ್ತದೆ" ಎಂಬ ಸವಾಲನ್ನು ಹಾಕಿದಳು. ಇದು ಗಾಂಧಿಯ ಮರ್ಮಕ್ಕೆ ತಾಗಿದ್ದ ಮಾತು. ಇಂಥ ಸ್ತ್ರೀಯರಿಗೆ ಪುನರ್ವಸತಿ ಕೇಂದ್ರಗಳನ್ನು ಸ್ಥಾಪಿಸಬೇಕೆಂದು ಗಾಂಧಿ ಮಹಿಳಾ ಸ್ವಯಂಸೇವಕಿಯರಿಗೆ ಒತ್ತಾಯಿಸಿದರು. ತನ್ನನ್ನು ತಾನು ಶುದ್ಧಿಗೊಳಿಸಿಕೊಳ್ಳದೆ ಪಕ್ಷರಾಜಕೀಯದ ಚಟುವಟಿಕೆಗಳಲ್ಲಿ ಈ ಮಹಿಳೆಯರು ತೊಡಗುವುದನ್ನು ಗಾಂಧಿ ತೀವ್ರವಾಗಿ ಖಂಡಿಸಿದರು. ಪಕ್ಷದ ಪುರುಷ ಕಾರ್ಯಕರ್ತರಿಗೆ ಈ ನಿಟ್ಟಿನಲ್ಲಿ ಕೆಲಸ ಮಾಡಲು ಅವರು ಪ್ರೋತ್ಸಾಹಿಸಲಿಲ್ಲ. ಏಕೆಂದರೆ ಪುರುಷರೊಡಗೂಡಿ ಕೆಲಸ ಮಾಡಬೇಕಾದ ಅನಿವಾರ್ಯ ಸಂದರ್ಭದಲ್ಲಿ ಈ ಪತಿತರೆನಿಸಿಕೊಂಡವರು ಶುದ್ಧಾಂತಃಕರಣ ಹಾಗೂ ಶುದ್ಧ ಹಸ್ತವಿಲ್ಲದೆ ಸ್ವರಾಜ್ಯದ

ವೇದಿಕೆ ಏರುವಂತಿಲ್ಲ. ಮಧು ಕೀಶ್ವಾರ್ ಗಾಂಧಿಯ ಈ ನಿಲುವನ್ನು ಪ್ರಶ್ನಿಸುತ್ತಾರೆ. ವೇಶ್ಯೆಯರನ್ನು ಗಾಂಧಿ ಕಳ್ಳರಿಗೆ ಹೋಲಿಸುತ್ತಾರೆ. ಗಾಂಧಿಯವರ ಈ ಸಾತ್ವಿಕ ಕ್ರೋಧ ಪಕ್ಷಪಾತದ್ದೆಂದು ಅವರ ನಿಲುವು : ಏಕೆಂದರೆ ಅತ್ಯಂತ ಭ್ರಷ್ಟ ವ್ಯಾಪಾರಿಗಳಿಗೆ ಮತ್ತು ಕ್ರೂರ ಜಮೀನ್ದಾರರಿಗೆ ಕೂಡ ಕಾಂಗ್ರೆಸ್ಸಿನ ಬಾಗಿಲುಗಳು ಮುಚ್ಚಿರಲಿಲ್ಲ. ನನಗನಿಸುತ್ತದೆ, ಬಹುಶಃ ಇಂಥ ವ್ಯಕ್ತಿಗಳಿಂದ ತುಂಬಿದ ಪಕ್ಷದ ನೈತಿಕತೆ ಬಗ್ಗೆ ಗಾಂಧಿಗಿದ್ದ ಅಪನಂಬಿಕೆಯೇ ವೇಶ್ಯೆಯರ ರಾಜಕೀಯ ಪ್ರವೇಶವನ್ನು ತಡೆಗಟ್ಟಿತೆನಿಸುತ್ತದೆ. ಸಾಕಷ್ಟು ಆರ್ಥಿಕ ಭದ್ರತೆ ಇಲ್ಲದ ಅವರ ಸ್ಥಿತಿಯನ್ನು ಪುರುಷವರ್ಗ ದುರುಪಯೋಗಪಡಿಸಿಕೊಳ್ಳುವ ಸಾಧ್ಯತೆಯೇ ಹೆಚ್ಚು. ಗಾಂಧಿಯ ನಿಷ್ಠುರತೆಗೆ ಇದು ಪೂರಕ ಸಮರ್ಥನೆಯನ್ನು ನೀಡದಿದ್ದರೂ ವೇಶ್ಯೆಯರ ಬಗೆಗೆ ಗಾಂಧಿಯವರಿಗಿದ್ದ ಮಾನವೀಯ ಅನುಕಂಪವನ್ನು ಮಾತ್ರ ಅಲ್ಲಗಳೆಯಲಾಗುವುದಿಲ್ಲ. ವೇಶ್ಯೆಯರ ಹಾಗೂ ದೇವದಾಸಿಯರ ಸಮಸ್ಯೆಗೆ ಗಾಂಧಿಯವರಲ್ಲಿ ತತ್‌ಕ್ಷಣದ ಪರಿಹಾರವಿರಲಿಲ್ಲ. ಸಮಾಜದ ಉನ್ನತ ಹಾಗೂ ಮಧ್ಯಮ ವರ್ಗ, ಜಾತಿಗಳಿಂದ ಬಂದ ವಿಧವೆ, ವಿವಾಹಿತೆ, ಅವಿವಾಹಿತೆಯರಿಗೆ ರಾಷ್ಟ್ರೀಯ ಸೇವಾ ಯೋಜನೆಯಲ್ಲಿ ತಮ್ಮನ್ನು ತೊಡಗಿಸಲು ಸಾಧ್ಯವಾಯ್ತು. ಕೆಳಜಾತಿ, ವರ್ಗಗಳ ನೆಲೆಯಲ್ಲಿಯೇ ಉಳಿಯುವ ದೇವದಾಸಿ, ವೇಶ್ಯಾ ಸಮಸ್ಯೆಗಳ ಪರಿಹಾರವು ಬದುಕುವ ಪ್ರಾಥಮಿಕ ಅವಶ್ಯಕತೆಗಳಲ್ಲಿ ಸ್ವಾವಲಂಬಿಯಾಗುವುದನ್ನು ಅವಲಂಬಿಸಿವೆ ಎಂಬ ಅರಿವು ಗಾಂಧಿಗೆ ಇತ್ತು. ಈ ಕಾರಣಕ್ಕಾಗಿ ಗ್ರಾಮೀಣ ಬಡ ರೈತ ಹೆಂಗಳೆಯರ ಬದುಕು ಸ್ವಾವಲಂಬಿತವಾಗುವಂತೆ 'ಖಾದಿ' ಚಳುವಳಿಯನ್ನು ರೂಪಿಸಿದ ಗಾಂಧಿ ವೇಶ್ಯಾಸಮಸ್ಯೆಯ ಪರಿಹಾರಕ್ಕೂ ಸ್ವಾವಲಂಬಿ ಜೀವನವಿಧಾನದ ಮಾದರಿಯನ್ನೇ ಉತ್ತರವಾಗಿ ಇಟ್ಟರು.

ಗಾಂಧಿ ರೂಪಿಸಿದ 'ಖಾದಿ' ಚಳುವಳಿಯು ಹೀಗಾಗಿ ಕೇವಲ ಬ್ರಿಟಿಷರ ವಸ್ತುಗಳ ನಿರಾಕರಣೆಗೆ ಮಾತ್ರ ಸಂಬಂಧಿಸಿರಲಿಲ್ಲ. ಯಂತ್ರ ನಾಗರಿಕತೆ ಗ್ರಾಮಗಳ ಬದುಕನ್ನು ಇನ್ನಿಲ್ಲದ ರೀತಿಯಲ್ಲಿ ಬಡತನದ ಅಂಚಿಗೆ ದೂಡುತ್ತದೆಂಬ ಅರಿವು ಅವರಿಗಿತ್ತು. ಅವಕಾಶ ವಂಚಿತ ಜನಸಮುದಾಯಕ್ಕೆ ಸ್ವಯಂ ಉದ್ಯೋಗದ ಅವಕಾಶವನ್ನು ಆ ಸಂದರ್ಭದಲ್ಲಿ 'ಖಾದಿ' ಮಾತ್ರ ನೀಡಬಲ್ಲದೆಂದು ಗಾಂಧಿ ಭಾವಿಸಿದ್ದರು. ಇದು ಅವರ ಅರಿವಿನ ಮಿತಿ ಎಂದು ಹೇಳುವುದು ಸಾಧ್ಯ. ಆದರೆ ವ್ಯಾವಹಾರಿಕ ಜಗತ್ತಿಗೆದುರಾಗಿ ಸರಳ ಜೀವನ ಸಂಹಿತೆಯನ್ನು ಖಾದಿ ಧರಿಸುವವರಿಗೂ ಖಾದಿ ತಯಾರಕರಿಗೂ ಏಕಕಾಲಕ್ಕೆ ಗಾಂಧಿ ಬೋಧಿಸಿದರು. ಭೋಗಜೀವನದ ಆಕರ್ಷಣೆಯನ್ನು ಗೆಲ್ಲದೆ ಚರಕ ಯಜ್ಞ ಯಶಸ್ವಿಯಾಗುವುದಿಲ್ಲವೆಂಬ ನಂಬಿಕೆ ಅವರದು. ಈ ಸಂದರ್ಭದಲ್ಲಿ ಖಾದಿ ಅತ್ಯಲ್ಪ ಆದಾಯ ತರಬಲ್ಲುದಾದರೂ ಸ್ವಾವಲಂಬನೆಯೆಡೆಗೆ ಒಂದು ಹೆಜ್ಜೆ ಮುಂದಿಟ್ಟಂತೆ ಆಗುತ್ತದೆಂಬ ವಿಶ್ವಾಸವನ್ನು ಗಾಂಧಿ ಬಡ ಜನತೆಯಲ್ಲಿ ತುಂಬಿದರು. ಇದಕ್ಕಾಗಿ ಗ್ರಾಹಕ ವರ್ಗವನ್ನೂ ಕೂಡ ತ್ಯಾಗಪೂರ್ಣ ಸರಳಜೀವನದೆಡೆ ಬದಲಾಯಿಸಬೇಕಾಗಿತ್ತು. ಪುರುಷರೂ ಕೂಡ ಚರಕದಿಂದ ನೂಲುವುದನ್ನು ವಿಧಿಯಾಗಿ ಸ್ವೀಕರಿಸಬೇಕೆಂಬ ಗಾಂಧಿಯವರ ನಿಲುವು ಸ್ತ್ರೀ ಪುರುಷ ಸಮಾನತೆಯ ಆಶಯಕ್ಕೆ ಪೂರಕವಾಗಿದೆ. ಏಕೆಂದರೆ

ನೂಲುವುದು ಸ್ತ್ರೀಯ ಪಾರಂಪರಿಕ ಸಾಂಪ್ರದಾಯಿಕ ಕ್ರಿಯೆಯೇ. ಆದರೆ ಹೊರಗಿನ ಕ್ಷೇತ್ರದಲ್ಲಿ ಯಶಸ್ವಿಯಾಗಿ ಬಳಕೆಗೊಳ್ಳಬೇಕಾದ ಪುರುಷಶಕ್ತಿಯ ಅಪವ್ಯಯವಲ್ಲವೇ ಆತನ ಮೇಲೆ ನೂಲುವುದನ್ನು ಹೇರುವುದು -ಎಂಬ ಆಕ್ಷೇಪಣೆಗಳು ಸಹಜವಾಗಿ ಗಾಂಧಿಯವರೆದುರು ಇದ್ದವು.

ಸಾಮಾಜಿಕ ಅಸಮಾನತೆಗೆ ಕಾರಣವಾಗುವ ಲಿಂಗ, ಜಾತಿ, ವೃತ್ತಿ, ವರ್ಗಮೂಲ ಅಹಂಕಾರವನ್ನು ಕ್ರಾಂತಿಯ ಕಠೋರತೆಯು ನಿರ್ಮೂಲನಗೊಳಿಸಿದರೂ ವ್ಯಕ್ತಿ ಸ್ವಾತಂತ್ರ್ಯಕ್ಕೆ ಅದು ಮೂಲಭೂತ ಧಕ್ಕೆಯನ್ನೊದಗಿಸುತ್ತದೆ. ವ್ಯಕ್ತಿಯನ್ನು ಉಳಿಸಿ ಅವನ ಅಹಂಕಾರವನ್ನು ಮಾತ್ರ ಕೊಲ್ಲುವ ಉಪಾಯವನ್ನು ಗಾಂಧಿ 'ಭಕ್ತಿ' ಮಾರ್ಗದ ಮೂಲಕ ಕಂಡುಕೊಳ್ಳುತ್ತಾರೆ. ಹೀಗಾಗಿ ಕೌಟುಂಬಿಕ ನೆಲೆಯ 'ಪರಮ ಪತಿವ್ರತೆಗೆ ಪತಿಯೊಬ್ಬನೇ ದೈವ' ಎಂಬ ನಂಬಿಕೆಯನ್ನು 'ಭಕ್ತನಿಗೆ ಇಷ್ಟದೈವವೊಂದೇ ಪರಮಲಕ್ಷ್ಯ' ಎಂದು ಭಕ್ತನೊಬ್ಬ ವಿಸ್ತರಿಸಿಕೊಳ್ಳುವ ಪರಿಯನ್ನು ಗಾಂಧಿ ರಾಜಕೀಯ, ಸಾಮಾಜಿಕ ಕ್ಷೇತ್ರದಲ್ಲಿ ಬಳಕೆಗೆ ತರುವ ಪ್ರಯತ್ನ ಮಾಡಿದರು. ದೈವದ ಸ್ಥಾನದಲ್ಲಿ ರಾಷ್ಟ್ರ, ಸಮಗ್ರ ಮಾನವತೆಯ ಸ್ಥಾನವನ್ನು ಪಡೆದಾಗ ರಾಷ್ಟ್ರಸೇವೆ ಹಾಗೂ ಸಮಗ್ರ ಮಾನವತೆಯ ಸೇವೆಗ್ಗಾಗಿ ತನ್ನನ್ನು ತಾನು ಭಕ್ತರಂತೆ ಪೂರ್ಣ ಸಮರ್ಪಣೆ ಮಾಡಿಕೊಳ್ಳುವ ಆದರ್ಶವನ್ನು ಗಾಂಧಿವಾದ ನಮ್ಮ ಮುಂದಿಡುತ್ತದೆ. ಇಂಥ ಸಂದರ್ಭದಲ್ಲಿ ಮಹಿಳೆ ನಿರ್ವಹಿಸುವ ಸಾಂಪ್ರದಾಯಿಕ ಕ್ರಿಯೆಯಾದ ನೂಲುವುದನ್ನು ಪುರುಷರೂ ಯಾವುದೇ ಹಮ್ಮುಬಿಮ್ಮುಗಳಿಲ್ಲದೆ ಕೈಗೊಳ್ಳುವುದು ಅತ್ಯಗತ್ಯವೆಂದು ಗಾಂಧಿ ನಿಷ್ಠುರರಾಗಿ ವಿಧಿಸುತ್ತಾರೆ. ಪುರುಷನ ಅಹಂ ನಿರಸನಕ್ಕೆ ಕಾರಣವಾಗುವ ಈ ಖಾದಿ, ಸ್ತ್ರೀ ಸ್ವಾವಲಂಬನೆಯ ಸಾಧನವಾಗಿಯೂ, ಶ್ರೀಮಂತ ವರ್ಗದ ಭೋಗಾಕಾಂಕ್ಷೆಯನ್ನು ತಗ್ಗಿಸುವ ಅಸ್ತ್ರವಾಗಿಯೂ, ವಿದೇಶಿ ಸ್ವಾಮ್ಯವನ್ನು ಒಡೆಯುವ ತಂತ್ರಯೋಜನೆಯಾಗಿಯೂ ಏಕಕಾಲಕ್ಕೆ ಬಳಕೆಯಾಗಬಲ್ಲ ಬಹುಮುಖಿ ಆಯಾಮಗಳನ್ನು ಹೊಂದಿತ್ತು.

ಭಾರತೀಯ ಆಧುನಿಕ ಸ್ತ್ರೀವಾದಕ್ಕೆ ಗಾಂಧಿಯವರ ಈ ವಿಚಾರಗಳು ಅತ್ಯಂತ ಉಪಯುಕ್ತವಾಗಿವೆ. ಮುಂದುವರೆದ ರಾಷ್ಟ್ರಗಳ ಸ್ತ್ರೀವಾದಿ ಚಿಂತನೆಗಳಿಗಿಂತ ಭಿನ್ನವಾಗಿ ತೃತೀಯ, ಅಭಿವೃದ್ಧಿಗೊಳ್ಳುತ್ತಿರುವ ಎಂಬ ಹಣೆಪಟ್ಟಿಯಂಟಿಸಿಕೊಂಡ ರಾಷ್ಟ್ರಗಳ ಸ್ತ್ರೀವಾದ ರೂಪುಗೊಳ್ಳುತ್ತದೆ. ಭಾರತದಂತಹ, ವಸಾಹತುಶಾಹಿ ಆಳ್ವಿಕೆಯ ಪಳೆಯುಳಿಕೆಗಳೇ ಇನ್ನೂ ಜೀವಂತವಾಗಿರುವ ರಾಷ್ಟ್ರಗಳಲ್ಲಿ ಜಾಗತೀಕರಣ ಪರಿಕಲ್ಪನೆಯ ಮೂಲಕ ಇನ್ನೂ ಉಗ್ರವಾಗಿ ಬಂಡವಾಳಶಾಹಿ ಆಳ್ವಿಕೆಯ ದುರಾಕ್ರಮಣ ಅನಿವಾರ್ಯವೆನಿಸುವ ಸಂದರ್ಭದಲ್ಲಿ ಮಹಿಳಾ ಸಮಸ್ಯೆಯು ಇನ್ನೂ ಜಟಿಲಗೊಳ್ಳುತ್ತದೆ. ಹೀಗಾಗಿ ಸ್ತ್ರೀವಾದವು ಆ ಸನ್ನಿವೇಶದ ಅಗತ್ಯಕ್ಕೆ ತಕ್ಕಂತೆ ತನ್ನ ಪ್ರತಿಕ್ರಿಯೆಯನ್ನು, ಪ್ರತಿಭಟನೆಯನ್ನು ತನ್ನ ಸೈದ್ಧಾಂತಿಕ ಚೌಕಟ್ಟಿನಲ್ಲಿ ರೂಪಿಸಿಕೊಳ್ಳಬೇಕಾಗುತ್ತದೆ. ಆಧುನಿಕ ಭಾರತೀಯ ಸ್ತ್ರೀವಾದವು ಜಾಗತೀಕರಣದ ಮೂಲಕ ಭಾರತೀಯ ಸ್ತ್ರೀವರ್ಗ ಎದುರಿಸಬೇಕಾದ ಸಮಸ್ಯೆಗಳ ಕೂಲಂಕಷ ವಿಶ್ಲೇಷಣೆ ಮಾಡುತ್ತದೆ. ಜಾಹಿರಾತುಗಳಂಥ

ಪ್ರಬಲ ಮಾಧ್ಯಮಗಳು ಮಧ್ಯಮ ವರ್ಗದ ಸುರಕ್ಷಿತ ಮಹಿಳೆಯಲ್ಲಿ ಪ್ರಜ್ಞೆಯ ಹೊಸ ಎಚ್ಚರದ ಬದಲಾಗಿ ತನಗೆ ನೀಡಲಾದ ಸಾಂಪ್ರದಾಯಿಕ ಪಾತ್ರವನ್ನೇ ಹೊಸ ಹುಮ್ಮಸ್ಸಿನಿಂದ, ಪೊಳ್ಳು ಪ್ರತಿಷ್ಠೆಯನ್ನು ಬೆಳೆಸಿಕೊಳ್ಳಲು ಅನುವಾಗುವಂತೆ, ನಿರ್ವಹಿಸುವಂತೆ ಮಾಡುತ್ತವೆ. ಅದೇ ತನ್ನ ಸರಕುಗಳ ಮಾರುಕಟ್ಟೆಯ ವಿಸ್ತರಣೆಗಾಗಿ ಅತಿದೊಡ್ಡ ಯಂತ್ರಗಳನ್ನು ಬಳಸುವುದರಿಂದ ದುಡಿಮೆಯಿಂದಲೇ ಬದುಕಬೇಕಾದ ಗ್ರಾಮೀಣ ಜನತೆಯನ್ನು ಇದು ಅವಕಾಶವಂಚಿತರನ್ನಾಗಿಸುತ್ತದೆ. ಕೈಗಾರಿಕೀಕರಣದ ಈ ದುಷ್ಪರಿಣಾಮಗಳು ಗ್ರಾಮೀಣ ಹಾಗೂ ನಗರ ಮಹಿಳೆಯರಿಬ್ಬರನ್ನೂ ಏಕಕಾಲಕ್ಕೆ ಶೋಷಿಸುವಂತಹದು. ಗಾಂಧಿವಾದವು ಈ ವಿಷಯವಾಗಿ ನಡೆಸಿದ ಚಿಂತನೆ ಅತ್ಯಂತ ಸ್ವೋಪಜ್ಞವಾದುದು. ಶೋಷಣೆಯ ಸ್ವರೂಪವನ್ನು ಗಾಂಧಿ ಅತ್ಯಂತ ಖಚಿತವಾಗಿ ನಮ್ಮ ಮುಂದಿಡುತ್ತಾರೆ. ಆರ್ಥಿಕ ಮೂಲದ ಜಾಗತೀಕರಣ ನೀತಿಯನ್ನು ವಿರೋಧಿಸುವಲ್ಲಿ ಆಧುನಿಕ ಸ್ತ್ರೀವಾದಿಗಳು ಈ ನಿಟ್ಟಿನ ಗಾಂಧಿ ಚಿಂತನೆಯಿಂದ ಪ್ರಭಾವಿತರಾಗಿದ್ದಾರೆ.

ಇಷ್ಟಾದರೂ ಆಧುನಿಕ ಸ್ತ್ರೀವಾದಕ್ಕೂ ಗಾಂಧಿವಾದಕ್ಕೂ ಬಹುದೊಡ್ಡ ಕಂದಕವಿದೆ. ಮಹಿಳಾ ವಿಮೋಚನೆಗೆ ಸಂಬಂಧಿಸಿದಂತೆ ಸಾಂಸ್ಕೃತಿಕ ಸ್ತ್ರೀವಾದದ ಮಿತಿಗಳೆಲ್ಲವನ್ನೂ ಗಾಂಧಿವಾದದಲ್ಲಿ ಕಾಣಬಹುದು. ಸಾಂಸ್ಕೃತಿಕ ಸ್ತ್ರೀವಾದವು ಹೆಣ್ಣಿನದೇ ಆದ ಪ್ರತ್ಯೇಕ ಸಂಸ್ಕೃತಿಯನ್ನು ಬೆಳೆಸಿ ಶೋಧಿಸಿ ರಕ್ಷಿಸುವುದೇ ಸ್ತ್ರೀವಿಮೋಚನೆ ಎಂಬ ಅಭಿಪ್ರಾಯವನ್ನಿಟ್ಟುಕೊಂಡಿದೆ. ಸ್ತ್ರೀಯ ವಿಶಿಷ್ಟಗುಣಗಳನ್ನು ವೈಭವೀಕರಿಸುವ ಪ್ರಯತ್ನ ಲಿಂಗತಾರತಮ್ಯದ ನಿವಾರಣೆಗಿಂತ ಅದನ್ನು ಉಳಿಸಿಡುವುದಕ್ಕೆ ಹೆಚ್ಚು ಬದ್ಧವಾಗಿರುತ್ತದೆ ಎಂದೆನಿಸುತ್ತದೆ. ಈ ಹೊತ್ತಿನ ಭಾರತೀಯ ಸ್ತ್ರೀವಾದವು ಜೈವಿಕ ಹಂತದ ಲಿಂಗಭೇದವನ್ನು ಒಪ್ಪಿಕೊಂಡರೂ ಅದೇ ಸಾಮಾಜಿಕ ಹಂತದಲ್ಲಿ ಸ್ತ್ರೀಪುರುಷ ತಾರತಮ್ಯ ಕಲ್ಪನೆಗೆ ಆಧಾರವಾಗಿ ನಿಲ್ಲುವುದನ್ನೂ ಒಪ್ಪುವುದಿಲ್ಲ. ಗಾಂಧಿಯಾದರೋ ಸ್ತ್ರೀ ಸಮಾನತೆಯ ಕಲ್ಪನೆಯನ್ನು ಸ್ತ್ರೀವಾದಿ ಧೋರಣೆಗಿಂತ ಭಿನ್ನವಾಗಿ ರೂಪಿಸಿಕೊಂಡವರು.

ಅವರ ಪ್ರಕಾರ ಸಮಾನತೆ ಎನ್ನುವುದು ಸಮಾನ ಹಕ್ಕುಗಳ ಪಡೆಯುವಿಕೆಯಿಂದುಂಟಾದ ಸ್ಥಿತಿಯಲ್ಲ. ವ್ಯಕ್ತಿ ತನ್ನ ಪಾಲಿನ ಸಾಮಾಜಿಕ ನೈತಿಕ ಕರ್ತವ್ಯಗಳನ್ನು ಪೂರ್ಣವಾಗಿ ಪಾಲಿಸುವುದರಿಂದುಂಟಾದ ಫಲಿತ. ಈ ತರ್ಕದ ಪ್ರಕಾರ ಅಸೀಮ ಸೇವಾ ಮನೋಭಾವವುಳ್ಳ ಸ್ತ್ರೀ ತನ್ನ ಪಾಲಿನ ಕರ್ತವ್ಯ ನಿರ್ವಹಣೆಯಲ್ಲಿ ಪುರುಷನಿಗಿಂತಲೂ ಶ್ರೇಷ್ಠಳು, ಅಧಿಕಳು ಎಂದಾಗುತ್ತದೆ. ಪುರುಷವರ್ಗಕ್ಕೆ ಇದು ಮಾದರಿಯೂ ಆಗುತ್ತದೆ. ಹೀಗೆ ಕರ್ತವ್ಯ ಮೂಲದ ಸಮಾನತೆಯ ಪರಿಕಲ್ಪನೆ ಗೀತೆಯ ಉಪದೇಶ ವಾಕ್ಯದಿಂದ ಪ್ರೇರಿತವಾದುದು.

ಪುರುಷಪ್ರಧಾನ ಸಮಾಜದಲ್ಲಿ ಸ್ತ್ರೀ ಎದುರಿಸುವ ಮಾನಸಿಕ ಹಾಗೂ ದೈಹಿಕ ಶೋಷಣೆಗಳಿಗೆ ಗಾಂಧಿವಾದ ನೀಡುವ ಪರಿಹಾರವೂ ಆಧುನಿಕ ಸ್ತ್ರೀವಾದಿಗಳಿಗೆ

ಒಪ್ಪಿತವಾದುದಲ್ಲ. ಸಾಮಾಜಿಕ 'ಕೆಡುಕಿ' ನ ಬಗೆಗಿನ ಪರಿಕಲ್ಪನೆಯು ಗಾಂಧಿ ಹಾಗೂ ರವೀಂದ್ರರ ಚಿಂತನೆಗಳಲ್ಲಿ ಬಹಳ ವಿಶಿಷ್ಟ ಸ್ವರೂಪವನ್ನು ಹೊಂದಿದೆ. ಜಗತ್ತಿನಲ್ಲಿ ಸೃಷ್ಟಿ ಹಾಗೂ ವಿನಾಶಕಾರಿಯಾದ ಕೆಡುಕು-ಎರಡೂ ದೊಡ್ಡ ಶಕ್ತಿಯೊಂದರ ಸಂಕಲ್ಪ- ಕಾರಣ ಅಸ್ತಿತ್ವದಲ್ಲಿದೆ ಎಂದು ಇಬ್ಬರೂ ನಂಬುತ್ತಾರೆ. ಸಾಮಾಜಿಕ ಕೆಡುಕು, ಅನಿಷ್ಟವನ್ನು ಇವರಿಬ್ಬರೂ ಒಂದು ಸಿದ್ಧ ಸ್ಥಿತಿಯಾಗಿ ಭಾವಿಸುತ್ತಾರೆ. ಆ ಸ್ಥಿತಿಯ ಹಿಂದಣ ಕಾರ್ಯ-ಕಾರಣ ಸಂಬಂಧಗಳ ಅನ್ವೇಷಣೆ ಗಾಂಧಿವಾದಕ್ಕೂ ರವೀಂದ್ರವಾದಕ್ಕೂ ಅಪ್ರಸ್ತುತ. ದೇವರು ಪ್ರಪಂಚದಲ್ಲಿ ಅನಿಷ್ಟ ನೆಲಸುವಂತೆ ಮಾಡಿರುವುದು ಜೀವಿಗಳನ್ನು ಹುರಿದು ತೇಗುವುದಕ್ಕಲ್ಲ. ಅದನ್ನು ಎದುರಿಸುವ ಛಲ ಅವರಿಗೆ ಬರಲಿ ಎಂದು ಮಾತ್ರ-ಎಂದು ಗಾಂಧಿ ಭಾವಿಸಿದ್ದರು. ಆದಕಾರಣ ಅತ್ಯಾಚಾರಕ್ಕೊಳಗಾಗುವ ಸಂದರ್ಭ ಬಂದಾಗಲೂ ಹೆಂಗಸು ತನ್ನನ್ನು ರಕ್ಷಿಸಿಕೊಳ್ಳುವ ಪ್ರಯತ್ನವನ್ನು ದೈಹಿಕವಾಗಿ ಮಾಡಿಕೊಳ್ಳುವುದಕ್ಕಿಂತ ಮುಖ್ಯವಾಗಿ ನೈತಿಕ ಸ್ಥೈರ್ಯ ಧೈರ್ಯಗಳನ್ನು ಆಕೆ ಉದ್ದೀಪಿಸಿಕೊಳ್ಳಬೇಕೆಂದು ಗಾಂಧಿ ವಾದಿಸುತ್ತಾರೆ. ದೈಹಿಕವಾಗಿ ಆಕ್ರಮಣವನ್ನು ತಡೆಗಟ್ಟಲು ಅಸಾಧ್ಯವಾದಾಗ ಪ್ರಾಣಭಯವನ್ನು ತ್ಯಜಿಸಿ ತನ್ನನ್ನು ಕೊನೆಗಾಣಿಸಿಕೊಳ್ಳಬೇಕೆಂದು ಅವರ ಸಲಹೆ. ಆಧುನಿಕ ಸ್ತ್ರೀವಾದದ ದೃಷ್ಟಿಯಿಂದ ನೋಡಿದರಂತೂ ಈ ಸಲಹೆ ಅತ್ಯಂತ ಅಮಾನವೀಯವಾಗಿ ಕಾಣುತ್ತದೆ. ಸ್ತ್ರೀವಾದವು ಪರ್ಯಾಯ ಸಂಸ್ಕೃತಿ ನಿರ್ಮಾಣದ ಅವಿಭಾಜ್ಯ ಅಂಗವೆಂದು ತನ್ನನ್ನು ಗುರುತಿಸಿಕೊಂಡಿದೆ. ಸ್ತ್ರೀಗೆ ಸಂಬಂಧಿಸಿದಂತೆ ಇರುವ ಯಜಮಾನ ಸಂಸ್ಕೃತಿಯ ಮಾದರಿಗಳನ್ನು ಪ್ರಜ್ಞಾಪೂರ್ವಕವಾಗಿ ಒಡೆಯುವುದರ ಮೂಲಕ ಪರ್ಯಾಯ ಮಾದರಿಗಳನ್ನು ಸೃಷ್ಟಿಸುವ ಆಶಯವನ್ನು ಆಧುನಿಕ ಸ್ತ್ರೀವಾದ ಹೊಂದಿದೆ. ಹೀಗೆ ಒಡೆಯಬೇಕೆನ್ನುವ ಮಾದರಿಯಲ್ಲಿ ಹೆಣ್ಣಿನ ಬಗೆಗಿನ 'ಪಾವಿತ್ರ್ಯ'ದ ಕಲ್ಪನೆಯು ಬಹುಮುಖ್ಯವಾದುದು. ಸ್ತ್ರೀವಾದದ ಪಾವಿತ್ರ್ಯನಾಶ ಕಲ್ಪನೆಗೆ ವ್ಯತಿರಿಕ್ತವಾಗಿ ಗಾಂಧಿವಾದ ಪಾವಿತ್ರ್ಯರಕ್ಷಣೆಯನ್ನು ಹೆಣ್ಣಿನ ಆದ್ಯ ಕರ್ತವ್ಯವನ್ನಾಗಿಸುತ್ತದೆ. ಈ ನಿಟ್ಟಿನಲ್ಲಿ ಗಾಂಧಿವಾದವು ಸ್ಪಷ್ಟವಾಗಿ ಪಿತೃಪ್ರಧಾನ ಆಲೋಚನೆಗಳನ್ನುಳ್ಳದ್ದು.

ಗಾಂಧಿ ಪ್ರತಿಪಾದಿಸುವ ಸರ್ವೋದಯ ವ್ಯವಸ್ಥೆಯ ಕೇಂದ್ರಬಿಂದು ವ್ಯಕ್ತಿಸ್ವಾತಂತ್ರ. ಹೊರಗೆ ದುಡಿದು ಕುಟುಂಬವನ್ನು ರಕ್ಷಿಸುವುದು ಪುರುಷನ ಕರ್ತವ್ಯವೆಂದು ಗಾಂಧಿ ಹೇಳುತ್ತಾರೆ. ಪುರುಷನಿಗೆ ಸಿದ್ಧಪಡಿಸಿದ ಈ ಹೊರ ಜಗತ್ತಿನಲ್ಲಿ ಮಹಿಳೆಯ ಪ್ರವೇಶವನ್ನು ಗಾಂಧಿ ನಿರಾಕರಿಸುತ್ತಾರೆ. ಗಂಡಿನೊಡನೆ ತಾನೂ ಕುದುರೆ ಏರಲು ಹೆಣ್ಣು ಪ್ರಯತ್ನಿಸಿದರೂ ಆತನನ್ನು ಬೀಳಿಸಿ ತಾನೂ ಬೀಳುತ್ತಾಳೆ ಎಂಬ ಅಲೌಕಿಕ ಅಸಮಂಜಸ ಹೋಲಿಕೆಯನ್ನು ಗಾಂಧಿ ನೀಡುತ್ತಾರೆ. ಆಧುನಿಕ ಸ್ತ್ರೀವಾದವು ಗಾಂಧಿವಾದದ ಈ ವಿಚಾರವನ್ನು ಒಪ್ಪುವುದಿಲ್ಲ. ಪರಿಸರದಲ್ಲಿ ಕಲ್ಪಿತಗೊಳ್ಳುವ ಅವಕಾಶಗಳಿಗೆ ಅನುಗುಣವಾಗಿ ಹೆಣ್ಣು ಗಂಡುಗಳ ಕಾರ್ಯ ಕ್ಷಮತೆ ನಿರ್ಧರಿತವಾಗುತ್ತಾದ್ದರಿಂದ, ಪುರುಷನಿಗೆ ದಕ್ಕುವ ಹೊರಜಗದ ಅವಕಾಶಗಳ ವಿಸ್ತರಣೆ ಹೆಣ್ಣಿಗೂ ಅತ್ಯಗತ್ಯವಾಗಿ ಆಗಬೇಕಾದುದು ನ್ಯಾಯಯುತವೆಂದು ಸ್ತ್ರೀವಾದಿಗಳು ವಾದಿಸುತ್ತಾರೆ. ಆದರೆ ಗಾಂಧಿವಾದದ ನೈಜ ಯಶಸ್ಸಿರುವುದು, ನಾಗರಿಕ ಜಗದಲ್ಲಿನ, ಅವಕಾಶ ಮೂಲಕ

ದಕ್ಕುವ ಕೀರ್ತಿ, ಪ್ರತಿಷ್ಠೆ, ಹಣಗಳು ಹುಟ್ಟುಹಾಕುವ ಕ್ಷುದ್ರ ಆಮಿಷವನ್ನು ನಿರಾಕರಿಸುವುದರಿಂದ. ಆಧುನಿಕ ಸ್ತ್ರೀವಾದ ಗಾಂಧಿಯು ಈ ವಿಚಾರದಿಂದ ತಿಳಿದುಕೊಳ್ಳುವುದು ಬಹಳ ಇದೆ. ಕಲಿತ ಹೆಣ್ಣಿನ ಸಮಸ್ಯೆಯು ನಮ್ಮ ಅನೇಕ ಪ್ರಗತಿಪರ ಲೇಖಕಿಯರಲ್ಲಿ ಕಾಣಿಸುತ್ತದೆ. ತುಂಬಲಾರದ ಶೂನ್ಯತೆಯ ಸಮಸ್ಯೆ ಸಮಸ್ಯೆಯಾಗೇ ಪರಿಹಾರಕಾಣದೆ ಉಳಿದುಬಿಡುತ್ತದೆ.

ಆ ಶೂನ್ಯತೆಗೆ ಪರಿಹಾರವಾಗಿ ಮನುಷ್ಯ ಜೀವನಕ್ಕೆ ಘನತೆಯುನ್ನು ಕೊಡಬಲ್ಲ ಸೇವಾಮನೋಭಾವನೆಯನ್ನು ಗಾಂಧಿವಾದ ವೈಭವೀಕರಿಸುತ್ತದೆ. ಏಕೆಂದರೆ 'ಹಕ್ಕ'ನ್ನು ಮಾತ್ರ ಸಮಾನನೆಲೆಯಲ್ಲಿ ಪಡೆಯುವ ಹೋರಾಟದಲ್ಲಿ 'ಮಾರ್ಗ' ಅಮುಖ್ಯವಾದಾಗ ಅದು ಕೊನೆಗಾಣದ ಹೋರಾಟವಾಗುತ್ತದೆ. ಗಾಂಧಿ ಹೇಳುವ 'ಕರ್ತವ್ಯ' ಪ್ರಜ್ಞೆಯ ನೆಲೆಯ ಸತ್ಯಾಗ್ರಹ ಹೋರಾಟವು ಅಧಿಕಾರದ ಎಲ್ಲ ಸ್ತರಗಳನ್ನು ನಿರಾಕರಿಸುತ್ತದೆ. ಹೀಗಾಗಿ ಮಾರ್ಕ್ಸ್‌ವಾದದ ಮಿತಿಯುನ್ನು ನೀಗಿಕೊಂಡ ಗಾಂಧಿಯು ಚಿಂತನೆ-ಸ್ತ್ರೀವಾದವನ್ನು ಹೆಚ್ಚು ಅರ್ಥಪೂರ್ಣವಾಗಿಸಿಕೊಳ್ಳಲು ಸಹಾಯಕವಾದೀತು.

ಗಾಂಧಿಯವರ ಉದಾರವಾದಿ ಮಾನವತಾವಾದವು ಅಸ್ಪೃಶ್ಯನೊಬ್ಬನ ವ್ಯಕ್ತಿತ್ವವು ಅವನ ಜನಾಂಗ ಪ್ರತಿನಿಧಿಸುವ ವಿಚಾರಧಾರೆ ಎಂದು ಗುರುತಿಸುವಲ್ಲಿ ಸೋಲುತ್ತದೆ. ಅಸ್ಪೃಶ್ಯ ವ್ಯಕ್ತಿಯೊಬ್ಬನ ಅನುಭವಲೋಕದೊಳಗೆ ಗಾಂಧಿಗೆ ವೈಯುಕ್ತಿಕವಾಗಿ ಪ್ರವೇಶ ಸಾಧ್ಯವಾಗಲಿಲ್ಲ. ಇಲ್ಲಿ ಸೋತ ಗಾಂಧಿ ಮಹಿಳೆಯೊಬ್ಬಳ ವ್ಯಕ್ತಿತ್ವವನ್ನು ಒಂದು ವಿಚಾರಧಾರೆಯ ಸಮಗ್ರ ಅಭಿವ್ಯಕ್ತಿಯಾಗಿ ಯಶಸ್ವಿಯಾಗಿ ಗುರುತಿಸುತ್ತಾರೆ. ತಮ್ಮ ಪತ್ನಿ, ತಾಯಿ, ಜೊತೆಯ ಕಾರ್ಯಕರ್ತೆಯರು, -ಇವರೊಡನಾಟವು ಗಾಂಧಿಗೆ ಈ ಸಾಮರ್ಥ್ಯವನ್ನು ದಕ್ಕಿಸಿತು. ಗಾಂಧೀ ಹೀಗಾಗಿ ಸುಲಭವಾಗಿ ತನ್ನನ್ನು ಹೆಣ್ಣಾಗಿಸಿಕೊಳ್ಳಬಲ್ಲಷ್ಟೇ ಸಲೀಸಾಗಿ ಅಸ್ಪೃಶ್ಯನ ನಿಜತ್ವವನ್ನು ಅನುಭವಿಸಲಾಗಲಿಲ್ಲ. ಸಾಮಾಜಿಕ ಶ್ರೇಣೀಕರಣದ ಬಗೆಗಿನ ಈ ಮಿತಿಯೊಂದಿಗೇ ಸ್ತ್ರೀಯ ವೈಯಕ್ತಿಕ ಸಂವೇದನೆಯ ಬಗೆಗಿನ ನಿರ್ಲಕ್ಷ್ಯವೂ ಗಾಂಧಿವಾದದ ಮಿತಿಯಾಗಿದೆ. ಹೀಗಾಗಿ ಸ್ವಾಯತ್ತ ಮಹಿಳಾ ವಿಮೋಚನಾ ಚಳುವಳಿಯ ಪರಿಕಲ್ಪನೆಗೆ ಗಾಂಧಿವಾದದಲ್ಲಿ ಸ್ಥಾನವಿಲ್ಲ. ಹೀಗಾಗಿ ಗಾಂಧಿಯ ವಿಚಾರಗಳು ಮಹಿಳೆಯ ವಿಷಯಕ್ಕೆ ಸಂಬಂಧಿಸಿದಂತೆ ಏಕಕಾಲಕ್ಕೆ ಪ್ರತಿಬಂಧಾತ್ಮಕವೂ ವಿಮೋಚನಾತ್ಮಕವೂ ಆಗಿವೆ.

## II

## ಹೊಸಗನ್ನಡ ಸಾಹಿತ್ಯದಲ್ಲಿ ಮಹಿಳಾ ವಸ್ತು ನಿರ್ವಹಣೆ

ತೊಂಬತ್ತರ ದಶಕದ ಮಧ್ಯಭಾಗದಲ್ಲಿ ನಿಂತು ಎಂಬತ್ತರ ದಶಕದೆಡೆ ಕಣ್ಣು ಹಾಯಿಸಿದಾಗ ಬಹಳ ವಿಶಿಷ್ಟವಾದ ಸಾಹಿತ್ಯಕ ಸಂದರ್ಭವೊಂದು ನಮ್ಮೆದುರು ನಿಲ್ಲುತ್ತದೆ. ನಡೆದು ಬಂದ ದಾರಿಯೆಡೆ ಕಣ್ಣು ತಿರುಗಿಸಬೇಡೆಂದು ಬೇರೆಡೆ ಹೊರಳಿಕೊಂಡ ನವ್ಯಕಾವ್ಯ ಒಂದೆಡೆ. ನವ್ಯಕಾವ್ಯದ ಅಕೆಡಮಿಕ್ ರೀತಿಗೂ ನವೋದಯದ ಆದರ್ಶವಾದಿ

ಭಾವುಕತೆಗೂ ಭಿನ್ನವಾಗಿ ತನ್ನನ್ನು ಪ್ರತ್ಯೇಕವಾಗಿ ಗುರುತಿಸಿಕೊಂಡ ಬಂಡಾಯ ದಲಿತ ಸಾಹಿತ್ಯ ಮತ್ತೊಂದೆಡೆ. ಈ ಮೂರೂ ಸಾಹಿತ್ಯ ಪಂಥಗಳು ಮಹಿಳಾ ವಸ್ತುವನ್ನು ಸ್ವೀಕರಿಸಿ ನಿರ್ವಹಿಸಿರುವ ಕ್ರಮವು ಆಯಾ ಪಂಥಗಳ ತಾತ್ವಿಕತೆಗೆ ಬದ್ಧವಾಗುಳಿದಿರುವುದನ್ನು ನೋಡಬಹುದು.

ನವೋದಯ ಸಾಹಿತ್ಯದಲ್ಲಿನ 'ಮಹಿಳೆ'ಯನ್ನು ಕುರಿತ ವಸ್ತುನಿರ್ವಹಣೆಯು ಗಾಂಧಿವಾದದ ವಿಚಾರಧಾರೆಯಿಂದ ಪ್ರಧಾನವಾಗಿ ಪ್ರೇರಿತವಾಗಿದೆ. ಸಾಮಾಜಿಕ ರಾಜಕೀಯ ಜೀವನದಲ್ಲಿ ಆತ್ಮ ಕೇಂದ್ರಿತ ನೈತಿಕ ಚೌಕಟ್ಟನ್ನು ಆದರ್ಶವಾಗಿ ರೂಪಿಸುವಲ್ಲಿ ಗಾಂಧಿವಾದವು 'ಮಹಿಳೆ' ವಸ್ತುವನ್ನುಬಳಸಿಕೊಳ್ಳುತ್ತದೆ. ಕುಟುಂಬದ ಪಾಲನೆಯು ಹೆಣ್ಣಿನ ಬಹುಮುಖ್ಯ ಕರ್ತವ್ಯವೆಂದು ಅಪೇಕ್ಷಿಸುವ ಗಾಂಧಿ, ಗಂಡು ಹೊಂಚಿ ತಂದ ಆಹಾರವನ್ನು ಹಂಚುವ ಕಾಯಕದವಳೆಂಬ ಹೆಣ್ಣಿನ ಸಾಂಪ್ರದಾಯಿಕ ಚಿತ್ರಣವನ್ನು ಬಳಸಿಕೊಳ್ಳುತ್ತಾರೆ. ಮಹಿಳೆಯನ್ನು ಇಂಥ ಸೀಮಿತತೆಯಲ್ಲಿ ಇರಿಸುವ ಗಾಂಧಿ ಆ ಸಿಮೀತ ಕ್ಷೇತ್ರವನ್ನೇ ಮಹಿಳೆಯ ವಿಶೇಷ ಮೌಲ್ಯ ಪ್ರಕಟನೆಯ ಕಾರ್ಯಕ್ಷೇತ್ರವಾಗಿ ಕಂಡರು. ವಸಾಹತುಶಾಹಿ ನಾಗರಿಕತೆ, ಕೈಗಾರಿಕೀಕರಣ ಹುಟ್ಟುಹಾಕುವ ಅತಿ ಭೋಗಾಕಾಂಕ್ಷೆಯ ಅನಾರೋಗ್ಯಕಾರಿ ಸ್ಪರ್ಧಾತ್ಮಕ ಜಗತ್ತಿನೆದುರಿಗೆ ಉನ್ನತ ಮೌಲ್ಯಗಳಾಳುವ ಮಹಿಳೆಯ ಕೌಟುಂಬಿಕ ನೆಲೆಯನ್ನು ಗಾಂಧಿ ಇರಿಸುತ್ತಾರೆ. ಈ ಪ್ರಯತ್ನದಲ್ಲಿ, ಮಹಿಳೆಯ ಸ್ಥಾನವನ್ನು ಎತ್ತರಕ್ಕೇರಿಸುತ್ತ ಪುರುಷ ಪ್ರಧಾನ ಜಗತ್ತಿನ ಅಪಮೌಲ್ಯೀಕೃತ ವ್ಯವಸ್ಥೆಯನ್ನು ಅವರು ತಿರಸ್ಕರಿಸುತ್ತಾರೆ. ಯಾವುದೇ ಸಾಮಾಜಿಕ ಅನ್ಯಾಯದ ವಿರುದ್ಧದ ಸತ್ಯಾಗ್ರಹ ಹೋರಾಟಕ್ಕೆ ಮಾರ್ಗವಾಗಿ ಅಹಿಂಸೆಯನ್ನು ಗಾಂಧಿ ರೂಪಿಸಿಕೊಳ್ಳುವಲ್ಲಿ ಬಹಳ ಸೂಕ್ಷ್ಮವಾಗಿ 'ಮಹಿಳೆ'ಯನ್ನು ಕುರಿತ ಅವರ ಪರಿಕಲ್ಪನೆಗಳು ಕೆಲಸಮಾಡಿವೆ. ಸತ್ಯಾಗ್ರಹದ ಮಾರ್ಗವಾದ ಅಹಿಂಸೆಯು ಮಹಿಳೆಯು ಸಹಜಗುಣವಾಗಿ ಹೊಂದಿರುವ ಅತೀವ ಶ್ರಮ, ಸಹನೆ, ತ್ಯಾಗ ಪ್ರೇಮಗಳನ್ನು ಒಳಗೊಳ್ಳುವ ವ್ಯಾಪ್ತಿಯುಳ್ಳದ್ದಾಗಿ ಗಾಂಧಿ ಭಾವಿಸುತ್ತಾರೆ.

ಹೀಗಾಗಿ ನವೋದಯ ಸಾಹಿತ್ಯದ ಬಹಳಷ್ಟು ಸ್ತ್ರೀಪಾತ್ರಗಳು ಗಾಂಧಿಯ ಸ್ತ್ರೀ ಪರಿಕಲ್ಪನೆಯ ಮೂಸೆಯೊಳಗಿನಿಂದ ಇಳಿದು ಬಂದ ಪಾತ್ರಗಳೇ ಆಗಿವೆ. ಕಾರಂತರ ಕಾದಂಬರಿಗಳ ಗ್ರಾಮೀಣ ಸ್ತ್ರೀಪಾತ್ರಗಳು, ರಾಜರತ್ನಂರವರ ಮಲ್ಲಿ, ಪುಟ್ನಂಜಿಯರು, ಬೇಂದ್ರೆಯವರ ಸಖೀಗೀತದ ಸಖಿ, ಕುವೆಂಪು 'ರಾಮಾಯಣದರ್ಶನಂ'ನ ಸೀತೆ -ಎಲ್ಲರೂ ಶುದ್ಧ ಜೀವನ ಸಂಹಿತೆಯನ್ನು ಪ್ರತಿನಿಧಿಸುವವರು. ಗಾಂಧಿಯವರ ಮಹಿಳೆಯನ್ನು ಕುರಿತ ವಿಚಾರಗಳು ಸಾಂಪ್ರದಾಯಿಕ, ಅಮೂರ್ತವೆನಿಸಿದರೂ ಸಾಂದರ್ಭಿಕ ಒತ್ತಾಸೆಗಳ ಹಿನ್ನೆಲೆಯಲ್ಲಿ ನೋಡಿದರೆ ಅವರ ವಿಚಾರಗಳ ಪ್ರಾಮಾಣಿಕತೆ ಪ್ರಶ್ನಾತೀತವೆನಿಸುತ್ತದೆ. ಬದಲಾವಣೆ ತರಲಸಾಧ್ಯವಾದ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಪುರುಷ ನಿರ್ವಹಿಸುವ ಅಪಮೌಲ್ಯೀಕೃತ ಪಾತ್ರವನ್ನು ಗಮನದಲ್ಲಿಟುಕೊಂಡು, ಮಹಿಳೆಯ ಘನತೆಯನ್ನು ಎತ್ತಿ ಹಿಡಿವಲ್ಲಿ ಗಾಂಧಿ ವಿಚಾರಗಳ ಯಶಸ್ಸು ಇದೆ.

ಸಾಮರಸ್ಯವಿಲ್ಲದ ದಾಂಪತ್ಯ, ವೈಧವ್ಯ, ಅವಿವಾಹಿತ ಸ್ಥಿತಿ, ವೇಶ್ಯಾಸಮಸ್ಯೆ, ವರದಕ್ಷಿಣೆ ಸಮಸ್ಯೆಗಳಿಗೆ ಗಾಂಧಿಯವರಲ್ಲಿದ್ದ ಪರಿಹಾರ ಒಂದೇ -ಬ್ರಹ್ಮಚರ್ಯ. ಉತ್ತಮತ್ಯಾಗ, ಸಹನೆ, ಅಪರಿಗ್ರಹ, ಅಹಿಂಸೆಗಳನ್ನು ಬ್ರಹ್ಮಚರ್ಯದ ನಡಾವಳಿಗಳೊಳಗೆ ಸ್ಥಾಪಿಸುವ ಗಾಂಧಿಯವರ ವಿಚಾರಗಳು ಸಾಮಾಜಿಕ ಬದಲಾವಣೆಯನ್ನು ವಾಸ್ತವ್ಯದಲ್ಲಿ ಅಪೇಕ್ಷಿಸುವ ವಸ್ತುಮೂಲವಾದಿ ಧೋರಣೆಗಿಂತ ಭಿನ್ನವಾದುವು. ಹೀಗಾಗಿ ವಿಚಾರಮೂಲವಾದಿ ನೆಲೆಯಿಂದ ಹೊರಡುವ ನವೋದಯರ 'ಮಹಿಳೆಯ ಬಿಡುಗಡೆ'ಯ ಆಶಯವು ಸಾಮಾಜಿಕ ಬದಲಾವಣೆಯ ತತ್‌ಕ್ಷಣದ ತುರ್ತಾಗಿ ಕೆಲಸ ಮಾಡಲಿಲ್ಲ. ಏಕೆಂದರೆ ವ್ಯಕ್ತಿತ್ವ ವಿಕಸನದ ನೆಲೆಯೇ ಪ್ರಧಾನವಾದಾಗ ಮಹಿಳೆಯ ಸಾಮಾಜಿಕ ಪಾತ್ರದ ವಿಸ್ತರಣೆ ಹಿನ್ನೆಲೆಗೆ ಸರಿಯುತ್ತದೆ. ರಾಜಕೀಯ ಕ್ಷೇತ್ರದಲ್ಲಿ ಪುರುಷರಿಗೆ ಅತ್ಯುತ್ತಮ ನೈತಿಕ ಮಾದರಿಯಾಗಿ ನಿಲ್ಲಬಲ್ಲ ಕಾರಣಕ್ಕಾಗಿ ಮಹಿಳೆಯ ರಾಜಕೀಯ ಪ್ರವೇಶವನ್ನು ಗಾಂಧಿ ಮಾನ್ಯ ಮಾಡಿದ್ದರು. ಹೀಗೆ ಮಾನವ್ಯದ ಸೇವೆಯ ಅಂಗವಾದ ಮಹಿಳೆಯ ಸಾರ್ವಜನಿಕ ಕ್ಷೇತ್ರದ ಪ್ರವೇಶವನ್ನು ಪ್ರಧಾನ ಕಥಾವಸ್ತುವಾಗಿ ಕೂಡ ನವೋದಯದ ಪ್ರಮುಖ ಕಾದಂಬರಿಕಾರರು ಸ್ವೀಕರಿಸಲಿಲ್ಲ. ಇನ್ನು, ಜನಪ್ರಿಯ ಸಾಹಿತ್ಯವಾದರೋ ಮಹಿಳೆಯ ಬಂಧನದ ಮಾದರಿಯನ್ನೇ ಸ್ಥಿರೀಕರಿಸಿದ್ದು ವಿಷಾದಕರ. ವಸ್ತುಮೂಲವಾದಿ ಪ್ರಗತಿಶೀಲ ಸಾಹಿತ್ಯ ಚಳುವಳಿಯು ಸಮಸ್ತ ಶೋಷಿತರ ಬಿಡುಗಡೆಯೊಳಗೆ ಮಹಿಳೆಯ ವಿಮೋಚನೆಯನ್ನು ಪ್ರಧಾನ ಆಶಯವಾಗಿ ಸ್ವೀಕರಿಸಿದರೂ ಅದರ ಸಾಹಿತ್ಯಕ ನಿರ್ವಹಣೆಯಲ್ಲಿ ಯಶಸ್ವಿಯಾಗಲಿಲ್ಲ. ಈ ಸೋಲು ಕೇವಲ ಕಲಾತ್ಮಕತೆಯಲ್ಲಿನ ಸೋಲಲ್ಲ. ನಂಬಿದ ಆದರ್ಶಗಳ ನೈಜ ಬದುಕಿನ ಅನುಷ್ಠಾನವಾಗದ ಹೊರತು ಏನನ್ನೂ ಸಾಧಿಸಲಾಗುವುದಿಲ್ಲ. ಪ್ರಗತಿಶೀಲರ ಈ ಸೋಲಿನ ಎದುರು ಗಾಂಧಿವಾದದ ಯಶಸ್ಸು ಎದ್ದು ಕಾಣುವಂತಹದು. ಅತೀತದ ಆದರ್ಶವನ್ನು ಎದುರಿಗಿಟ್ಟುಕೊಂಡೇ ಅದನ್ನು ಸಾಧಿಸಲು ನಡೆಸುವ ಪ್ರಾಮಾಣಿಕ ಪ್ರಯತ್ನವು ಬದುಕನ್ನು ಕಲೆಯ ಹಂತಕ್ಕೇರಿಸುತ್ತದೆ. ಅದಿಲ್ಲದಿದ್ದಾಗ ಬಡತನ, ಅಸ್ಪೃಶ್ಯತೆಗಳ ಜೊತೆ ಮಹಿಳಾ ಸಮಸ್ಯೆಯೂ ಗಾಢ ತಲ್ಲಣಗಳನ್ನು ಉಂಟುಮಾಡದ ಅತಿರಂಜಿತ ನಿರೂಪಣೆಯಲ್ಲಿ ಕೊನೆಗೊಳ್ಳುತ್ತದೆ. ಸ್ತ್ರೀ ಶೋಷಣೆಯ ಸ್ವರೂಪವನ್ನು ವಸ್ತುವಾಗಿ ಎತ್ತಿಕೊಂಡಾಗಲೂ ನಿರೂಪಣೆಯಲ್ಲಿ ಸ್ತ್ರೀದೇಹದ ಭೌತಿಕ ಆಕರ್ಷಣೆಯನ್ನು ಮೀರಲಾಗದುದನ್ನು ಕೆಲವು ಪ್ರಗತಿಶೀಲ ಕಾದಂಬರಿಗಳಲ್ಲಿ ಕಾಣಬಹುದು.

ನವ್ಯಸಾಹಿತ್ಯ ಪಂಥವು ಅನುಭವದ ಶೋಧನೆಯನ್ನು ಭಾಷೆಯ ಮೂಲಕ ಕೈಗೊಳ್ಳುವ ಕಸಬುದಾರಿಕೆಗೆ ಪ್ರಾಧಾನ್ಯ ನೀಡಿತು. ಸ್ತ್ರೀ-ಪುರುಷ ಸಂಬಂಧದ ನಿರ್ವಚನವನ್ನು ನವ್ಯ ಸಾಹಿತ್ಯ ಬಹಳ ವಿಲಕ್ಷಣ ರೀತಿಯಲ್ಲಿ ಮಾಡುತ್ತದೆ. ಅತ್ಯುತ್ತಮ ಗುಣಗಳ ಮೂರ್ತರೂಪವಾದ ಮಹಿಳೆಯು ಪುರುಷನ ವ್ಯಕ್ತಿತ್ವ ವಿಕಸನಕ್ಕೆ ಸ್ಫೂರ್ತಿ ಚೇತನಗಳ ಮಾದರಿಯೂ ಆಗಬಲ್ಲಳು, ಆಗಿದ್ದಾಳೆ, ಆಗಬೇಕು ಎಂಬುದು ಗಾಂಧಿಯ ಅಪೇಕ್ಷೆ ಹಾಗೂ ದೃಢ ನಂಬಿಕೆ. ಈ ಅಪೇಕ್ಷೆ ಹಾಗೂ ನಂಬಿಕೆಗಳ ತಿರುಗು ರೂಪದ

ಮಾದರಿಯನ್ನು ನವ್ಯಸಾಹಿತ್ಯ ನಮ್ಮ ಮುಂದಿಡುತ್ತದೆ.

ಮನುಷ್ಯನ ಸಮಗ್ರ ವ್ಯಕ್ತಿತ್ವದ ಶೋಧನಾತ್ಮಕ ಅಭಿವ್ಯಕ್ತಿಯನ್ನು ನವ್ಯಸಾಹಿತ್ಯ ಪ್ರಧಾನ ಆಸಕ್ತಿಯಾಗಿಟ್ಟುಕೊಂಡಿತು. ಹಾಗಾಗಿ ಇದುವರೆಗೂ ಸಾಹಿತ್ಯ ಪರಂಪರೆಯಲ್ಲಿ ಅಲಕ್ಷಿತವಾಗಿದ್ದ, ಹಿನ್ನೆಲೆಗೆ ಸರಿದು ಹೋಗಿದ್ದ ಬದುಕಿನ ಅನುಭವಲೋಕವನ್ನು ವಸ್ತುನಿಷ್ಠವಾಗಿ ಅನಾವರಣಗೊಳಿಸುವ ಹುಮ್ಮಸ್ಸು ಕಂಡುಬಂತು. ಬಂಡವಾಳಶಾಹಿ ನಾಗರಿಕ ಸಮಾಜದ ಕತ್ತುಹಿಸುಕುವ ಕ್ರೌರ್ಯ ಹಾಗೂ ಮನುಷ್ಯನ ಮೂಲಭೂತ ಪ್ರವೃತ್ತಿಯಾದ ಕಾಮ-ಎರಡೂ ನವ್ಯಕಾವ್ಯ ಹಾಗೂ ಕಥಾಸಾಹಿತ್ಯದ ಪ್ರಧಾನ ವಸ್ತುಗಳಾದವು. ನವೋದಯರ ವ್ಯಕ್ತಿ ವಿಕಸನಕ್ಕೆ ಆದರ್ಶಕ್ಕೆ ಬದಲಾಗಿ ವ್ಯಕ್ತಿತ್ವ ವಿಘಟನೆಯ ದುರಂತವನ್ನು ಶೋಧಿಸುವ ಪ್ರಕ್ರಿಯೆ ಪ್ರಾಧಾನ್ಯವನ್ನು ಪಡೆಯಿತು. ಇಂಥ ಸಂದರ್ಭದಲ್ಲಿ ಸ್ತ್ರೀ-ಪುರುಷ ಸಂಬಂಧದ ನಿರ್ವಚನವು ಅಸ್ತಿತ್ವವಾದಿ ಚಿಂತನೆಯ ಗಾಢ ಪ್ರಭಾವದಿಂದ ರೂಪಿತಗೊಂಡಿತು.

ನವ್ಯರ 'ಕಾಮ'ದ ಕಲ್ಪನೆ, ನವೋದಯರ ಚಿಂತನೆಯಂತೆ ಆಧ್ಯಾತ್ಮಿಕ ವಿಕಾಸದಲ್ಲಿ ಕೊನೆಗೊಳ್ಳುವಂತಹುದಲ್ಲ. ವ್ಯಕ್ತಿತ್ವದ ಶೋಧಕ್ಕೆ 'ಕಾಮ' ವಸ್ತುನಿರ್ವಹಣೆ ಬಳಕೆಗೊಳ್ಳುತ್ತದೆ. ಒಬ್ಬೊಬ್ಬ ಲೇಖಕರಲ್ಲಿ ಒಂದೊಂದು ಮಾದರಿಯಾಗಿ ಇದು ಪ್ರಕಟಗೊಂಡಿದೆ. ನಗರೀಕರಣದ ಪ್ರಕ್ರಿಯೆಯಲ್ಲಿ ವ್ಯಕ್ತಿ ಹೆಚ್ಚೆಚ್ಚು 'ಅಸಾಮಾಜಿಕ'ನಾಗುತ್ತ ಹೋದಂತೆಲ್ಲ ಪುರುಷನಿಷ್ಠ 'ಅಹಂ'ನ ಮೇಲಾಗುವ ಹೊಡೆತಗಳಿಂದ ಪಾರಾಗಲು ಬಳಕೆಯಾಗುವ ಆಮೆಯ ಚಿಪ್ಪಾಗಿ 'ಕಾಮ' ಬಳಕೆಯಾಗುತ್ತದೆ. ಅನಂತಮೂರ್ತಿಯವರ ಕಥೆ ಕಾದಂಬರಿಗಳಲ್ಲಿ, 'ಕಾಮ' ಸತ್ವದ ಮೂರ್ತ ರೂಪವಾದ ಸ್ತ್ರೀಯು ಪಾಲನೆಯ, ಆಸರೆಯ, ಜೀವದಾಯಕ ಕೇಂದ್ರವಾಗಿ ಕಂಡುಬರುತ್ತಾಳೆ. ಕಾಮದಂತಹ ಬದುಕಿನ ಅತ್ಯಂತ ಖಾಸಗಿ ಸಂದರ್ಭದಲ್ಲಿ ಮಾತ್ರ ಪುರುಷ ಹೊರಜಗತ್ತಿನ ನಿರ್ದಯಿ ಆಘಾತಗಳಿಂದ ಸಂರಕ್ಷಣೆ ಪಡೆಯಬಲ್ಲವನಾಗುತ್ತಾನೆ. ಇಂಥ ರಕ್ಷಣಾ ಕಾರ್ಯವನ್ನು ನಿರ್ವಹಿಸುವ ಚೇತನವಾಗಿ ಸ್ತ್ರೀ ನವ್ಯರಿಗೆ ಮುಖ್ಯಳಾಗುತ್ತಾಳೆ. ಅನಂತಮೂರ್ತಿ, ಆಲನಹಳ್ಳಿ ಕೃಷ್ಣ, ಚನ್ನಯ್ಯ ಎಚ್. ಎಂ. ಮುಂತಾದವರ ಸಾಹಿತ್ಯಕ ನಿರೂಪಣೆಯಲ್ಲಿ 'ಕಾಮ' ದ ವಸ್ತುವು ವ್ಯಕ್ತಿಕೇಂದ್ರಿತವಾಗಿದ್ದು ಪಾಕ್ಷಿಕವಾಗಿದೆ. ಸ್ತ್ರೀ ಮನೋಲೋಕದ ಯಾವುದೇ ಒಳಹೊರಗಿನ ಅಗತ್ಯಗಳನ್ನು ನಿರ್ಲಕ್ಷಿಸುವ ಈ ರೀತಿ ನಿರೂಪಣೆಯು 'ಕಾಮ' ವಸ್ತುವಿನ ಶೋಧವನ್ನು ಅಪೂರ್ಣವಾಗಿಯೇ ಉಳಿಸುತ್ತದೆ.

ಇಷ್ಟಾದರೂ 'ಕಾಮ'ದ ಬಗೆಗೆ ಮುಕ್ತವಾಗಿ ತೊಡಗಿಸಿಕೊಳ್ಳುವುದೇ ಹೆಣ್ಣಿನ ಬಹುದೊಡ್ಡ ಸವಾಲಾಗಿರುವ ಸಾಮಾಜಿಕ ಸಂದರ್ಭಗಳ ಶೋಧವನ್ನು ಕೈಗೊಂಡ ಪ್ರಯತ್ನಗಳು ಇಲ್ಲದಿಲ್ಲ. ಡಾ॥ ಶಾಂತಿನಾಥ ದೇಸಾಯಿಯರ ಕತೆ, 'ಕ್ಷಿತಿಜ'ದ ನಾಯಿಕೆ, ಯಶವಂತ ಚಿತ್ತಾಲರ 'ಮೂರು ದಾರಿಗಳು' ಕಾದಂಬರಿಯ ನಾಯಿಕೆ ಇಂಥ ಸವಾಲನ್ನು ಎದುರಿಸುವ ಸತ್ವಪೂರ್ಣ ಪಾತ್ರಗಳು. ಇದೇ ನಿಟ್ಟಿನಲ್ಲಿ ರಾಜಲಕ್ಷ್ಮಿ ಎನ್. ರಾವ್ ಹಾಗೂ

ವೀಣಾ ಶಾಂತೇಶ್ವರರ ಕಥಾ ಸಾಹಿತ್ಯವು ಅಸ್ತಿತ್ವವಾದಿ ಹುಡುಕಾಟದ ನೆಲೆಯಲ್ಲಿ ಮಹಿಳೆಯ ಬಿಡುಗಡೆಯ ಆಶಯ ವಸ್ತುವನ್ನು ಹೊಸ ರೀತಿಯಲ್ಲಿ ಶೋಧಿಸುತ್ತದೆ. ಪುರುಷನಿರ್ಮಿತ ಮಾದರಿಯಾಚೆಗೆ ನಿಲ್ಲಬಲ್ಲ ಮಹಿಳಾ ಸಂವೇದನೆಯ ಪ್ರತ್ಯೇಕತೆಯನ್ನು ಇವರಿಬ್ಬರಲ್ಲಿ ನಾವು ಗುರುತಿಸಬಹುದು. ಏಕೆಂದರೆ, ನವ್ಯರ 'ಕಾಮ'ದ ಪರಿಕಲ್ಪನೆಯು ಬದುಕಿನ ಸಹಜತೆ, ಸ್ವಚ್ಛಂದತೆ, ಲವಲವಿಕೆ, ಜೀವಂತಿಕೆಗಳ ಅಮೂರ್ತ ಸಂಕೇತವಾಗಿ ಪುರುಷ ಲೇಖಕರಲ್ಲಿ ಕಾಣಿಸಿಕೊಂಡಿದೆ. ಆದರೆ 'ಕಾಮ'ವು ಸ್ತ್ರೀಯ ಸಾಮಾಜಿಕ ಬದುಕಿನ ವಾಸ್ತವ ಭೂಮಿಕೆಯಲ್ಲಿ ಪುರುಷ ಸಾಹಿತಿಗಳು ಸೃಷ್ಟಿಸಿಕೊಂಡ ಸಂಕೇತದ ವಿರುದ್ಧ ಸ್ಥಿತಿಯನ್ನು ಹೊಂದಿದೆ. ಶಾಂತಿನಾಥ ದೇಸಾಯಿ, ಚಿತ್ತಾಲರಂಥ ಲೇಖಕರು ಈ ವೈರುಧ್ಯವನ್ನು ಗಮನಿಸಿದರೂ ಬಹಳಷ್ಟು ನವ್ಯಸಾಹಿತ್ಯದಲ್ಲಿ ಸ್ತ್ರೀಕೇಂದ್ರದಿಂದ ಬದುಕನ್ನು ಗ್ರಹಿಸುವ ರೀತಿ ಯಶಸ್ವಿಯಾಗುವುದಿಲ್ಲ. ಉದಾಹರಣೆಗಾಗಿ, ಲಂಕೇಶರ 'ಸಂಕ್ರಾಂತಿ' ನಾಟಕದ ಮುಖ್ಯ ಪಾತ್ರವಾದ ಉಷಾ ಶೂದ್ರ ರುದ್ರನ ತಲೆದಂಡಕ್ಕೆ ಕಾರಣಳಾಗುವ ಸಂದರ್ಭವನ್ನು ನೋಡಬಹುದು. ಅನಿರ್ಬಂಧಿತ ಸ್ವಚ್ಛಂದ ಬದುಕಿನ ಜೀವ ಚೈತನ್ಯವನ್ನು ಸಂಕೇತಿಸುವ ಶೂದ್ರತ್ವದ ಸಂಸ್ಕೃತೀಕರಣ ಮಾಡುವ ಬಸವಣ್ಣನ ಪ್ರಯತ್ನವನ್ನು ಲಂಕೇಶರು ಬಿಜ್ಜಳ, ಉಜ್ಜ, ಹಾಗೂ ಉಷಾ ಪಾತ್ರದ ಮೂಲಕ ನಿರಾಕರಿಸುತ್ತಾರೆ. ಉಕ್ಕುವ ಜೀವಚೈತನ್ಯದ ಸೆಲೆಯನ್ನು ರುದ್ರನಲ್ಲಿ ಕಂಡುಕೊಂಡ ಉಷಾ ಅದಕ್ಕೆ ಕಾರಣವಾದ 'ಶೂದ್ರ'ತ್ವದ ಮಣ್ಣಿನ ವಾಸನೆಗೆ ಮಾರುಹೋದವಳು. ಬಸವಣ್ಣನಿಂದ ಸಂಸ್ಕೃತೀಕರಣಗೊಳ್ಳುವ ರುದ್ರನನ್ನು ಈ ಕಾರಣಕ್ಕಾಗಿ ಲೈಂಗಿಕವಾಗಿ ಪ್ರಚೋದಿಸಿ 'ಶೂದ್ರ ರುದ್ರ'ನನ್ನು ದಕ್ಕಿಸಿಕೊಳ್ಳುವಲ್ಲಿ ಆಕೆ ತಾತ್ಕಾಲಿಕ ಯಶ ಪಡೆಯುತ್ತಾಳೆ. ಅದೇ, ಬಸವಣ್ಣನಿಂದ ಪ್ರೇರಿತನಾಗಿ ತನ್ನ ಜನಾಂಗದ ಉಳಿದ ಜನರನ್ನು ಬಾಹ್ಯ ಆಚರಣೆಯ ಮೂಲಕ ಬದಲಾಯಿಸಲೆತ್ನಿಸುವ ಶರಣರುದ್ರನನ್ನು ಆಕೆ ತಿರಸ್ಕರಿಸುತ್ತಾಳೆ. ಹೀಗಾಗಿ 'ಮಣ್ಣಿನ ವಾಸನೆ'ಯನ್ನು ಅಪೇಕ್ಷೆಯಾಗಿಟ್ಟುಕೊಂಡ 'ಶೂದ್ರ ಪ್ರಜ್ಞೆ'ಯ ವೈಭವೀಕರಣದ ನೆಲೆಯಲ್ಲಿ ನವ್ಯ ಪಂಥದ ಲೇಖಕನೊಬ್ಬನ ಮುಖವಾಣಿಯಾಗಿ ಮಾತ್ರ 'ಉಷಾ'ಳಂತಹ ಸ್ತ್ರೀಪಾತ್ರ ನಿರ್ಮಾಣಗೊಂಡಿದೆ. ಸಂಗಾತಿಯನ್ನು ಸ್ವೀಕರಿಸುವ ತಿರಸ್ಕರಿಸುವ ಲೆಕ್ಕಾಚಾರದ ಆಚೆಗೆ ಯಾವುದೇ ರೀತಿಯ ಸ್ತ್ರೀ ಪ್ರೇಮದ ಆಳ ಭಾವನಾನುಭವಗಳ ಪ್ರಕಟಣೆಗೆ ಇಲ್ಲಿ ಅವಕಾಶವಿಲ್ಲ.

ಹೀಗೆ ನಗರೀಕರಣ, ಯಂತ್ರ ನಾಗರಿಕತೆ ಹುಟ್ಟುಹಾಕುವ ಅತಿ ಬೌದ್ಧಿಕತೆಯ ನಿಮಿತ್ತದಿಂದುಂಟಾಗುವ ಬರಡುತನವನ್ನು ಪ್ರಜ್ಞಾಪೂರ್ವಕವಾಗಿ ನೀಗಿಕೊಳ್ಳುವ ಸಾಧನವಾಗಿ 'ಶೂದ್ರಪ್ರಜ್ಞೆ', 'ಸ್ತ್ರೀದೇಹ'ದ ವೈಭವೀಕರಣ ನವ್ಯರಲ್ಲಿ ಕಂಡುಬರುತ್ತದೆ. ನವ್ಯರ ಈ ಮಿತಿಯನ್ನು ಮೀರುವ ಪ್ರಯತ್ನವಾಗಿ ಬಂಡಾಯ ಸಾಹಿತ್ಯ ಸಂಘಟನೆಯು ಬಹಳ ಸ್ಪಷ್ಟವಾಗಿ ಪರ್ಯಾಯ ಸಂಸ್ಕೃತಿ ನಿರ್ಮಾಣದ ಉದ್ದೇಶವನ್ನು ಹೊಂದಿತು. ಬಂಡವಾಳಶಾಹಿ ನಾಗರಿಕತೆಯ ನಿರ್ನಿಮಿತ್ತ ಕ್ರೌರ್ಯಕ್ಕೆ 'ಶಿಕಾರಿ'ಯಾಗುವ ಆಧುನಿಕ ಮಾನವನ ದುರಂತವನ್ನು ನವ್ಯ ಸಾಹಿತ್ಯ ಪ್ರಧಾನವಾಗಿಟ್ಟುಕೊಂಡರೂ ಸಮಾಜದ ಎಲ್ಲ

ಸ್ತರದ ಜನರ ಬದುಕನ್ನೂ ಒಳಗೊಳ್ಳುವಷ್ಟು ವಿಶಾಲವ್ಯಾಪ್ತಿ ಅದಕ್ಕೆ ಒದಗಲಿಲ್ಲ. ನವ್ಯ ಸಾಹಿತ್ಯಕ್ಕೆ ತಾತ್ವಿಕ ಪ್ರೇರಣೆಯನ್ನು ನೀಡಿದ ಫ್ರಾಯ್ಡ್, ಕಾನ್ರಾಡ್, ಸಾರ್ತ್ರ್, ಕಮೂರ ವಿಚಾರಗಳು ವ್ಯಕ್ತಿಯೊಬ್ಬನ ವ್ಯಕ್ತಿತ್ವದ ಮೂಲಭೂತ ಪ್ರವೃತ್ತಿಗಳನ್ನು ಪ್ರಧಾನವಾಗಿ ವಿಶ್ಲೇಷಿಸುತ್ತವೆ. ವ್ಯಕ್ತಿಯ ಮೂಲಭೂತ ಪ್ರವೃತ್ತಿಗಳ ಬಗೆಗಿನ ಈ ತತ್ವಗಳು ಯುದ್ಧನಾಗರಿಕತೆಯಿಂದ ತತ್ತರಿಸಿಹೋದ ಮನುಷ್ಯನನ್ನು ಕಾಡುವ ಅನಾಥ ಪ್ರಜ್ಞೆಯನ್ನು ಅರ್ಥೈಸಿಕೊಳ್ಳುವ ಪ್ರಯತ್ನಗಳಾಗಿ ಮೂಡಿದುವು.

ಭಾರತದಂತಹ ಸಂದರ್ಭದಲ್ಲಿ ನಗರೀಕರಣದಿಂದಾದ ಒಂಟಿತನದ ನೋವಿಗಿಂತ ಬದುಕುವ ಮೂಲಭೂತ ಅವಶ್ಯಕತೆಗಳಿಂದ ವಂಚಿತವಾಗಿರುವ ದಲಿತ ಹಾಗೂ ಸ್ತ್ರೀವರ್ಗದ ಶೋಷಣೆ ಹೆಚ್ಚು ಭಯಾನಕವಾದರೂ ಸತ್ಯ. ಹೀಗಾಗಿ ನವ್ಯರ ಸಾಹಿತ್ಯದಲ್ಲಿನ ಹತಾಶೆ, ನೋವುಗಳು ಶೋಷಣೆಯ ತುದಿ ಮುಟ್ಟಿದ ವ್ಯಕ್ತಿಗಳನ್ನು ಗಮನದಲ್ಲಿಟ್ಟುಕೊಂಡಾಗ 'ಆತ್ಮರತಿ' ಎನಿಸದಿರದು. ನವ್ಯರ ಈ 'ನಾನು'ಕೇಂದ್ರುವನ್ನು ಕೈಬಿಟ್ಟು ವ್ಯಕ್ತಿಗತ ದುರಂತವನ್ನು ಇಡೀ ಸಮುದಾಯದ ಶೋಷಣೆಯ ಭಾಗವಾಗಿ ಸ್ವೀಕರಿಸಿ, ಅರ್ಥೈಸಿಕೊಳ್ಳುವ ಕ್ರಮ ಬಂಡಾಯ ಹಾಗೂ ದಲಿತ ಸಾಹಿತ್ಯದಲ್ಲಿ ಕಂಡುಬರುತ್ತದೆ. ೭೦-೮೦ರ ದಶಕದ ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಶೋಷಿತ ವರ್ಗದ ದನಿಗೆ ಪ್ರಾಧಾನ್ಯ ಕೊಡಲಾಯ್ತು. ಶೂದ್ರ ಹಾಗೂ ದಲಿತ ವರ್ಗದೊಂದಿಗೆ ಸ್ತ್ರೀವರ್ಗವೂ ಶೋಷಿತವೆಂದು ಪರಿಗಣಿತವಾಯಿತು. ಹೀಗಾಗಿ ಸಹಜವಾಗಿಯೇ ಮಹಿಳಾ ಅಭಿವ್ಯಕ್ತಿಗೂ ಆ ಪಂಥದಲ್ಲಿ ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಡಲಾಯಿತು

ಮಹಿಳಾ ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಒಂದು ಅಂಶವನ್ನು ಗಮನಿಸಬೇಕು. ಆ ದಶಕದಲ್ಲಿ ಬರೆಯಲಾರಂಭಿಸಿದ ಸಮಕಾಲೀನ ಮಹಿಳಾ ಕವಿಯರನ್ನು ಬಂಡಾಯದ ಪ್ರವಾಹದಲ್ಲಿ ಗುರುತಿಸಲಾಯ್ತು. ಶೋಷಣೆಯ ವಿರುದ್ಧದ ನೇರ ಕೂಗಾಗಿ ನಿಲ್ಲುವ ದಲಿತ ಹಾಗೂ ಮಹಿಳಾ ಅಭಿವ್ಯಕ್ತಿಗೆ ಹೀಗಾಗಿ ಚಾರಿತ್ರಿಕ ಮಹತ್ವವಿದೆ. ಆದರೆ ಹೊಸಗನ್ನಡ ಮಹಿಳಾ ಸಾಹಿತ್ಯ ಪರಂಪರೆಯ ಆದ್ಯ ಪ್ರವರ್ತಕಿಯರಾದ ತಿರುಮಲೆ ರಾಜಮ್ಮ, ಆರ್. ಕಲ್ಯಾಣಮ್ಮ, ಬೆಳಗರೆ ಜಾನಕಮ್ಮ, ಸರಸ್ವತಿಬಾಯಿ ರಾಜವಾಡೆ ಮುಂತಾದವರ ಸಾಹಿತ್ಯಕ ಸಾಧನೆಯ ಬಗೆಗೆ ಮೌನ ಕಂಡುಬರುತ್ತದೆ. ಆದರೂ ಮಹಿಳಾ ವಸ್ತು ನಿರ್ವಹಣೆಯು ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಹೊಸ ರೀತಿಯ ತಿರುವನ್ನು ಪಡೆದುಕೊಂಡಿತು. ಯಾವುದೇ ಪೂರ್ವಾಗ್ರಹಗಳಿಲ್ಲದ, ಶೋಷಣೆಯ ಬೇರುಗಳ ಸಂಕೀರ್ಣ ಲೋಕವನ್ನು ಓದುಗರೆದುರು ಇಡುವಲ್ಲಿ ಬಂಡಾಯ ಸಾಹಿತ್ಯ ಯಶಸ್ವಿಯಾಯಿತೆನ್ನಬಹುದು.

ಸ್ತ್ರೀ ಶೋಷಣೆಯ ವಸ್ತುವನ್ನು ದೇವನೂರು ಮಹಾದೇವ, ಬರಗೂರು ರಾಮಚಂದ್ರಪ್ಪ, ಮನಜ, ಚದುರಂಗ ಮುಂತಾದವರ ಕಾದಂಬರಿಗಳು ಅತ್ಯಂತ ವಸ್ತುನಿಷ್ಠವಾಗಿ ನಿರ್ವಹಿಸುತ್ತವೆ. ಸ್ತ್ರೀ ಶೋಷಣೆಯ ಸಮಸ್ಯೆಯನ್ನೇ ಕೇಂದ್ರವಾಗಿಟ್ಟುಕೊಂಡು ಅದರ ಸುತ್ತ ದಲಿತ ಹಾಗೂ ಶೂದ್ರವರ್ಗದ ಪುರುಷ ಜಗತ್ತಿನ

# ವಚನಸಾಹಿತ್ಯ ಮತ್ತು ಕನ್ನಡ ವಿಮರ್ಶೆಯ ಸ್ತ್ರೀವಾದಿ ನಿಲುವುಗಳು

ಡಾ. ಎಂ. ಉಷಾ

ಪ್ರಾಚೀನ ಕೃತಿಗಳ ಸಂಪಾದನೆ ಮತ್ತು ಪ್ರಕಟಣೆಗಳೊಂದಿಗೆ ಅವುಗಳ ಕುರಿತ ಮುನ್ನುಡಿಗಳ ರೂಪದಲ್ಲಿ ಹಾಗು ಸಾಹಿತ್ಯ ಚರಿತ್ರೆಯ ರಚನೆಯ ಸಂದರ್ಭದಲ್ಲಿ ಆರಂಭಗೊಂಡ ಕನ್ನಡ ಸಾಹಿತ್ಯ ವಿಮರ್ಶೆಯು ಅಂದಿನಿಂದಲೂ ಮಹಿಳಾ ಸಾಹಿತ್ಯದ ಬಗ್ಗೆ ತನ್ನ ಕುತೂಹಲ, ಕಾಳಜಿಗಳನ್ನು ತಕ್ಕಮಟ್ಟಿಗೆ ತೋರಿಸುತ್ತಲೇ ಬಂದಿದೆ. ಸರಿಸುಮಾರು ೧೯೨೫-೩೦ ರ ಹೊತ್ತಿಗೆ ಆರಂಭಗೊಂಡ ಜನಪದ ಸಾಹಿತ್ಯ ಕುರಿತ ಬರವಣಿಗೆಗಳೂ ಗರತಿಯ ಹಾಡು ಎಂಬರ್ಥದಲ್ಲಿ ಜನಪದ ಸಾಹಿತ್ಯವನ್ನು ಮಹಿಳೆಯ ಅಭಿವ್ಯಕ್ತಿಯಾಗಿ ಎತ್ತಿ ಹಿಡಿಯಿತು. ಹಾಗು ಎಲ್ಲ ಸಾಹಿತ್ಯಾಭಿವ್ಯಕ್ತಿಗಳ ಮೂಲ ಜನಪದ ಸಾಹಿತ್ಯವೆಂದೇ ಸ್ಥಾಪಿಸುವ ಮೂಲಕ ಮಹಿಳೆಯ ಅಭಿವ್ಯಕ್ತಿ ಎಂಬುದನ್ನು ಅಪಾರ ಮೆಚ್ಚುಗೆಯೊಂದಿಗೆ ಸ್ವೀಕರಿಸಿತು. [1]

ಹೀಗೆ ಆರಂಭಗೊಂಡ ಮಹಿಳಾ ಸಾಹಿತ್ಯ ಕುರಿತಾದ ಕಾಳಜಿ, ಕುತೂಹಲಗಳು ಇಂದು ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯಾಗಿ ಬೆಳೆದು ನಿಂತಿರುವುದು ಅತ್ಯಂತ ಕುತೂಹಲಕಾರಿಯಾದ ವಿಚಾರವಾಗಿದೆ. ಅದರಲ್ಲಿಯೂ ಲಿಖಿತಾಧಾರಗಳೊಂದಿಗೆ ರೂಪುಗೊಂಡ ಅಕ್ಕಮಹಾದೇವಿಯನ್ನು ಕುರಿತ ಅಧ್ಯಯನಗಳು ನಡೆದು ಬಂದ ದಾರಿ ಕನ್ನಡದ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯಲ್ಲೊಂದು ಮೈಲಿಗಲ್ಲಾಗಿದೆ. ಕನ್ನಡ ವಿಮರ್ಶೆಯು ಕಾವ್ಯತತ್ವದ ವಿಚಾರದಲ್ಲಿ ಯಾವುದೇ ಪಂಥಕ್ಕೆ ಒಲಿಯಲಿ, ತಾತ್ವಿಕವಾಗಿ ಯಾವುದೇ ಸಿದ್ಧಾಂತಕ್ಕೆ ಬದ್ಧವಾಗಲಿ ಅದರಿಂದ ವಚನ ಸಾಹಿತ್ಯಕ್ಕಾಗಲಿ, ಅಕ್ಕಮಹಾದೇವಿಯ ಸ್ಥಾನಕ್ಕಾಗಲಿ ಕಿಂಚಿತ್ತು ಚ್ಯುತಿ ಬಂದಿಲ್ಲ. ಹಾಗೆಯೇ ಸ್ತ್ರೀವಾದಿ ಚಿಂತನೆಯು ತನ್ನನ್ನು ಹೋರಾಟದ ನೆಲೆಯಲ್ಲಿ ಗುರುತಿಸಿಕೊಳ್ಳಲಿ ಅಥವಾ ತಾತ್ವಿಕ ಪ್ರಣಾಳಿಯಾಗಿ ನಿರ್ವಚಿಸಿಕೊಳ್ಳಲಿ ಅಲ್ಲಿಯೂ ಕೂಡ ಅಕ್ಕಮಹಾದೇವಿಯ ಸ್ಥಾನ ಸುರಕ್ಷಿತವೇ ಆಗಿದೆ. ಕೊನೆಗೆ ಕನ್ನಡದ ಪ್ರಧಾನ ಸಾಹಿತ್ಯ ವಿಮರ್ಶೆ ಮತ್ತು ಸ್ತ್ರೀವಾದಿ ಸಾಹಿತ್ಯ ವಿಮರ್ಶೆಗಳ ಮುಖಾಮುಖಿಯ ಸಂದರ್ಭದಲ್ಲಿ ಕೂಡ ಅಕ್ಕಮಹಾದೇವಿ ಎರಡನ್ನೂ ಸರಿದೂಗಿಸಿಕೊಂಡವಳಾಗಿ ಕಂಡುಬರುತ್ತಾಳೆ. ಆದ್ದರಿಂದಲೇ ಅಕ್ಕಮಹಾದೇವಿ ಕುರಿತ ವಿಮರ್ಶೆಗಳ ಅಧ್ಯಯನ ಕನ್ನಡ ಸಾಹಿತ್ಯ ವಿಮರ್ಶೆ ಹಾಗು ಸ್ತ್ರೀವಾದಿ ಸಾಹಿತ್ಯ ವಿಮರ್ಶೆಗಳೆರಡರ ನೆಲೆಯಲ್ಲಿಯೂ ಬಹುಮಹತ್ವದ್ದಾಗುತ್ತದೆ.

ಕನ್ನಡ ಸಾಹಿತ್ಯದ ಪ್ರಧಾನ ವಿಮರ್ಶಾಧಾರೆಯನ್ನು ಕುರಿತು ಮಾತನಾಡುವುದಾದರೆ,

ಅದು ಕನ್ನಡ ಸಾಹಿತ್ಯ ಪಡೆದುಕೊಂಡ ತಿರುವುಗಳೊಂದಿಗೆ ಅತ್ಯಂತ ನಿಕಟವಾದ ಸಂಪರ್ಕವನ್ನು ಇಟ್ಟುಕೊಳ್ಳುತ್ತಲೇ ಬೆಳೆದು ಬಂದಿದ್ದು, ಹಲವಾರು ಪಂಥಗಳ ವಿಮರ್ಶೆಯಾಗಿಯೇ ರೂಪುಗೊಂಡಿದೆ. ಹಾಗೆ ಪಂಥ ಪರವಾಗಿ ತನ್ನನ್ನು ಗುರುತಿಸಿಕೊಳ್ಳುವುದರಲ್ಲಿ ಕನ್ನಡ ವಿಮರ್ಶೆ ಎಂದೂ ಸಂಕೋಚಿಸಿದ್ದೂ ಇಲ್ಲ. ಹಾಗಾಗಿ ನಾವಿಂದು ಕನ್ನಡ ವಿಮರ್ಶೆಗಳನ್ನು ನಿರ್ಲಿಪ್ತ ವಿಮರ್ಶೆಗಳೆಂದು ಗಮನಿಸಬೇಕಾದ ಅಗತ್ಯವೂ ಇಲ್ಲ. ಅದರಂತೆ ಪ್ರಾಚೀನ ಸಾಹಿತ್ಯ ಕುರಿತ ಕನ್ನಡ ವಿಮರ್ಶೆಗಳು ಹಲವಾರು ಸಾಹಿತ್ಯಿಕ ಮತ್ತು ತಾತ್ವಿಕ ಸಿದ್ಧಾಂತಗಳಿಂದ ಪ್ರಭಾವಿತವಾಗಿ/ಬದ್ಧವಾಗಿ ಬೆಳೆದು ಬಂದಿದ್ದಾದರೂ ಆಂತರ್ಯದಲ್ಲಿ ಅದು ಎರಡು ಪ್ರಧಾನ ನಿಲವುಗಳನ್ನು ತನ್ನೊಳಗೆ ಪ್ರತಿಪಾದಿಸಿಕೊಂಡಿದೆ. ಒಂದು, ಧರ್ಮ ಸಾಪೇಕ್ಷವಾದ ತಾತ್ವಿಕ ನಿಲವು. ಎರಡು, ಧರ್ಮ ನಿರಪೇಕ್ಷವಾದ ತಾತ್ವಿಕ ನಿಲವು. ಅಂತೆಯೇ ವಚನ ಸಾಹಿತ್ಯ ಕುರಿತ ತೀರ್ಮಾನಗಳೂ ಕೂಡ ಈ ಎರಡು ನೆಲೆಯಲ್ಲಿ ರೂಪುಗೊಳ್ಳುತ್ತಾ ಬಂದಿದೆ. ಧರ್ಮ ಸಾಪೇಕ್ಷವಾದ ವಿಮರ್ಶೆಗಳು ವಚನಕಾರರ ತಾತ್ವಿಕತೆಯನ್ನು ವಿಶ್ವಧರ್ಮವೆಂಬ ಅತ್ಯಂತ ವಿಸ್ತಾರವಾದ ನೆಲೆಯಲ್ಲಿ ಅರ್ಥೈಸುತ್ತ ಅವುಗಳ ಕಾವ್ಯಸ್ವರೂಪ, ಸೌಂದರ್ಯ ಇತ್ಯಾದಿ ನೆಲೆಯ ಚರ್ಚೆಗೆ ತೊಡಗಿದ್ದರೆ, ಧರ್ಮ ನಿರಪೇಕ್ಷವಾದ ವಿಮರ್ಶೆಗಳು ಅವುಗಳ ತಾತ್ವಿಕತೆಯನ್ನು ಧರ್ಮಾತೀತವಾದ ನೆಲೆಯಲ್ಲಿ ಅರ್ಥೈಸುತ್ತ ವಚನಗಳಲ್ಲಿನ ಬಂಡಾಯ ಧೋರಣೆ, ಸಮಾನತೆ, ಪ್ರತಿಭಟನೆ ಇತ್ಯಾದಿ ನೆಲೆಯ ಚರ್ಚೆಗೆ ತೊಡಗಿವೆ. 'ದಯೆಯೇ ಧರ್ಮದ ಮೂಲವಯ್ಯ' ಎಂಬ ಹೇಳಿಕೆಯನ್ನು ಎರಡೂ ಪ್ರಧಾನವಾಗಿ ಭಾವಿಸುತ್ತ, ಸಾಪೇಕ್ಷವಾದವು 'ದಯೆ' ಎಂಬುದರವರೆಗೆ ಧರ್ಮವನ್ನು ವಿಸ್ತರಿಸಿದರೆ, ನಿರಪೇಕ್ಷವಾದವು 'ದಯೆ' ಎಂಬುದನ್ನು ಧರ್ಮದಾಚೆಗೆ ವಿಸ್ತರಿಸಿ ಅರ್ಥೈಸಿಕೊಂಡಿದೆ.

ಆಧುನಿಕ ಪೂರ್ವದಲ್ಲಿಯೇ ವೀರಶೈವ ಧರ್ಮದ ಸಂಘಟನೆಯ ಕಾರಣಕ್ಕಾಗಿ ನಡೆದು ಬಂದಿದ್ದ ವಚನಗಳ ಸಂಗ್ರಹ ಕಾರ್ಯವು [2] ಆಧುನಿಕ ಕಾಲದಲ್ಲಿ ಕನ್ನಡ ಪರಂಪರೆಯ ನಿರ್ಮಾಣದ ಪ್ರಮುಖ ಸಾಮಗ್ರಿಯಾಗಿ ಅರ್ಥೈಸಲ್ಪಟ್ಟಿತು. ಫ. ಗು ಹಳಕಟ್ಟಿಯವರು ಮೊದಲ ಬಾರಿಗೆ ವಚನ ಸಂಗ್ರಹ ಮತ್ತು ಪ್ರಕಟಣೆಯ ಕಾರ್ಯವನ್ನು ಆರಂಭಿಸಿದರು [3]. ಇದರಿಂದಾಗಿ ಅದುವರೆಗೂ ಮಠ ಮಠಗಳಲ್ಲಿ ಆ ಧರ್ಮದ ಜನಗಳಲ್ಲಿ ಮಾತ್ರ ಸಂವಹನಗೊಳ್ಳುತ್ತಿದ್ದ ವಚನಗಳು ಮೊದಲ ಬಾರಿಗೆ 'ವಚನಶಾಸ್ತ್ರಸಾರ' ಎಂಬ ಹೆಸರಿನಲ್ಲಿ ಸಾರ್ವತ್ರಿಕಗೊಂಡಿತು. ಹಳಕಟ್ಟಿಯವರು ತಮ್ಮ ಕೃತಿಯನ್ನು ಶಾಸ್ತ್ರಸಾರವೆಂದು ಕರೆದುಕೊಂಡರೂ, ಅದರಲ್ಲಿನ ಕಾವ್ಯ ಸೌಂದರ್ಯವನ್ನು ಕುರಿತೂ ಪ್ರಸ್ತಾಪಿಸಿದರು[4]. ೧೯೦೭ ರಲ್ಲಿ ಆರ್. ನರಸಿಂಹಾಚಾರ್ಯರು ತಮ್ಮ ಕರ್ನಾಟಕ ಕವಿ ಚರಿತೆಯ ಪ್ರಥಮ ಸಂಪುಟದಲ್ಲಿ ಕೂಡ ವಚನಕಾರರನ್ನು ಉಲ್ಲೇಖಿಸಿದರು[5]. ಅಲ್ಲಿಂದ ಮುಂದಕ್ಕೆ ಹಲವಾರು ವೀರಶೈವ ಸಂಘಟನೆಗಳು ವಚನಗಳ ಸಂಗ್ರಹ ಮತ್ತು ಪ್ರಕಟಣಾ ಕಾರ್ಯಕ್ಕೆ ದೊಡ್ಡ ಪ್ರಮಾಣದಲ್ಲಿ ಕೈ ಹಾಕಿದವು. ಆ ಯೋಜನೆಗಳ ಸಂಪಾದಕತ್ವದ ಹೊಣೆ ಹೊತ್ತ ಸಾಹಿತ್ಯ ಕ್ಷೇತ್ರದ ವಿದ್ವಾಂಸರು ಸಂಪಾದನಾ ಕಾರ್ಯದ ಜೊತೆಗೇ ಅವುಗಳ ಕುರಿತ ಸಾಹಿತ್ಯಿಕ ವಿಶ್ಲೇಷಣೆಯನ್ನು ಕೈಗೊಂಡರು.

ವಚನ ಸಾಹಿತ್ಯದ ಸಂಪಾದನಾ ಕಾರ್ಯವು ವಿಸ್ತಾರಗೊಂಡಂತೆ ವಚನಶಾಸ್ತ್ರಸಾರ ಎಂಬ ಪರಿಕಲ್ಪನೆಯು ವಚನ ಧರ್ಮಸಾರವಾಗಿ ನಿರ್ವಚಿಸಲ್ಪಟ್ಟಿತು. ಏಕೆಂದರೆ ಶಾಸ್ತ್ರ ಎಂಬುದು ಸಾಹಿತ್ಯ ಮತ್ತು ಧರ್ಮ ಎರಡೂ ಕ್ಷೇತ್ರದಲ್ಲಿಯೂ ಸೃಜನಾತ್ಮಕವಲ್ಲದ್ದು ಎಂಬುದು ಅಂದಿನ ಪರಿಭಾಷೆಯಾಗಿತ್ತು. ಧರ್ಮ ಸಾಪೇಕ್ಷವಾದ ನಿಲುವುಗಳನ್ನು ಹೊಂದಿದ್ದ ವಿದ್ವಾಂಸರು ವಚನಶಾಸ್ತ್ರವನ್ನು 'ಧರ್ಮ' ಎಂದು ಪರಿಭಾವಿಸುವ ಮೂಲಕ ತಮ್ಮ ಅಗತ್ಯಕ್ಕೆ ತಕ್ಕಂತೆ ಅದನ್ನು ವಿಶ್ವಧರ್ಮವಾಗಿ ವಿಸ್ತರಿಸಿಕೊಂಡು ವಿಮರ್ಶೆ ಬರೆಯಲಾರಂಭಿಸಿದರು. 'ಮತಕ್ಕಿಂತಲೂ ಧರ್ಮ ದೊಡ್ಡ ಮಾತು. ಮತ ವಾದ ಮಾಡಿದರೆ, ಧರ್ಮ ಕೂಡಿಸಿ ಬದುಕಿಸುತ್ತದ'[7] ಎನ್ನುವಂತಹ ಅರ್ಥೈಸುವಿಕೆಯೊಂದಿಗೆ ಬಿ. ಎಂ. ಶ್ರೀಯವರು ವಚನವು ಶಾಸ್ತ್ರವೇ ಸಾಹಿತ್ಯವೇ ಎಂಬ ಪ್ರಶ್ನೆಯೊಂದನ್ನು ಎತ್ತಿಕೊಂಡು ವಚನಗಳು ಶಾಸ್ತ್ರವಾದರೂ ಅವು ಕನ್ನಡ ಸಾಹಿತ್ಯದ ಜೀವರತ್ನಗಳು, ಕನ್ನಡ ನುಡಿಯ ಚೆಲುವು[8] ಎಂದು ವಿಶ್ಲೇಷಿಸಿದರು. ಆ ಮಾತುಗಳಿಗೆ ಆಧಾರವೆಂಬಂತೆ ಎಂ. ಆರ್. ಶ್ರೀಯವರು ತಮ್ಮ ಅಧ್ಯಯನದಲ್ಲಿ ವಚನಗಳ ಧರ್ಮ ಸಾಪೇಕ್ಷ ನಿಲುವುಗಳ ವಿಶ್ಲೇಷಣೆಯೊಂದಿಗೆ 'ವಚನಗಳಲ್ಲಿ ಕಾವ್ಯ ಲಕ್ಷಣಗಳು' ಎಂಬ ಅಧ್ಯಾಯವೊಂದನ್ನು ರಚಿಸಿದ್ದರು[9]. ಅದರಂತೆ ಅಂದಿನಿಂದ ಇಂದಿನವರೆಗೂ ವಚನಗಳಲ್ಲಿನ ಕಾವ್ಯಗುಣ, ಕಾವ್ಯತತ್ವ ಇತ್ಯಾದಿಯಾದ ಅಧ್ಯಯನಗಳು ನಿರಂತರವಾಗಿ ನಡೆದಿವೆ. ಎಲ್ಲ ಪಂಥಪರವಾದ ವಿಮರ್ಶೆಗಳೂ ತಮ್ಮ ತಮ್ಮ ಅಗತ್ಯಕ್ಕೆ ತಕ್ಕಂತೆ ವಚನಗಳ ಕಾವ್ಯ ಲಕ್ಷಣಗಳನ್ನು ಅರ್ಥೈಸಿಕೊಂಡು ಅವುಗಳ ಕುರಿತ ಸಾಹಿತ್ಯಿಕ ಅಧ್ಯಯನವನ್ನು ನಡೆಸಿವೆ.

ವಸಾಹತುಶಾಹಿ ಶಿಕ್ಷಣದ ಅಂಗವಾಗಿ ಇಂಗ್ಲೀಷ್ ಸಾಹಿತ್ಯದ ಪರಿಚಯ ಪಡೆದು ಸರಳ ಭಾಷೆ, ಲಯಾನ್ವಿತ ಛಂದಸ್ಸುಗಳನ್ನೊಳಗೊಂಡ ಭಾವಗೀತದ ಕುರಿತ ಅಪಾರವಾದ ಆಸಕ್ತಿಯನ್ನು ಬೆಳಸಿಕೊಂಡಿದ್ದ ಇಂಗ್ಲೀಷ್ ಸಾಹಿತ್ಯ ಓದಿದ ಅಂದಿನ ಮೇಲ್ವರ್ಗದ ಕನ್ನಡ ಸಾಹಿತ್ಯ ಪ್ರೇಮಿಗಳಿಗೆ ಮಾರ್ಗೀ ಕಾವ್ಯಕ್ಕಿಂತ ಭಿನ್ನವಾದ ಈ ವಚನಗಳು ಪುಳಕವನ್ನುಂಟು ಮಾಡಿದವು. ಅವರ ಆಧುನಿಕ ಉದಾರವಾದಿ ವೈಚಾರಿಕತೆಗೆ ವಚನಗಳ ತಾತ್ವಿಕಾಂಶಗಳು ಅನನ್ಯವೆನಿಸಿದವು. ಧರ್ಮದ ಉದಾರವಾದಿ ವ್ಯಾಖ್ಯಾನಕ್ಕೆ ವಚನಧರ್ಮ ಮಾದರಿ ಎನಿಸಿತು. ಅಚ್ಚಗನ್ನಡ, ಆಡುನುಡಿ ಮತ್ತು ಗೀತಾತ್ಮಕ ಗುಣದ ವಚನಗಳು ಅಚ್ಚಗನ್ನಡದ ಬೇಸಾಯವಾಗಿ ಕಾಣಿಸಿತು. ಪರಿಣಾಮವಾಗಿ ಯಾವುದೋ ಒಂದು ನಿಶ್ಚಿತ ಸಮಾಜದಲ್ಲಿ ಸ್ಮೃತಿಯಾಗಿ ಉಳಿದುಹೋಗಿದ್ದ ಬರಹವು[10] ಹತ್ತೊಂಬತ್ತನೆ ಶತಮಾನದ ವೈಚಾರಿಕ ಅಗತ್ಯವಾಗಿದ್ದ ಕಾವ್ಯದ ಆಧುನಿಕತೆ, ಉದಾರವಾದಿ ತಾತ್ವಿಕತೆ, ಕರ್ನಾಟಕತ್ವದ ಸ್ಥಾಪನೆ ಈ ಎಲ್ಲ ನೆಲೆಗಳನ್ನು ಪ್ರತಿನಿಧಿಸುವ ಸಾಮಗ್ರಿಯಾಗಿ ಕಂಡುಬಂದಿತು.

ಹೀಗೆ ಆರಂಭಗೊಂಡ ಕಾವ್ಯತ್ವ ಪ್ರಧಾನವಾದ ಧರ್ಮ ಸಾಪೇಕ್ಷ ನಿಲುವಿನ ವಚನ ವಿಮರ್ಶೆಯ ಧೋರಣೆಗಳು ನಂತರ ಮಾರ್ಕ್ಸ್‌ವಾದಿ ವಿಚಾರಧಾರೆಗೆ ತನ್ನನ್ನು ಒಡ್ಡಿ ಕೊಂಡರೂ, ಅದು ಸಂಪೂರ್ಣವಾದ ಧರ್ಮ ನಿರಪೇಕ್ಷ ನಿಲುವನ್ನೇನೂ ಪಡೆದುಕೊಳ್ಳಲಿಲ್ಲ. ವಚನ ಸಾಹಿತ್ಯಕ್ಕಿದ್ದ ಕಾವ್ಯೇತರ ಬದ್ಧತೆಗಳು ಮುಂಚೂಣಿಗೆ ಬಂದವಾದರೂ ಧರ್ಮದ ವಿಷಯದಲ್ಲಿ, ಕಾವ್ಯಾತ್ಮಕತೆಯಲ್ಲಿ ಹಿಂದಿನವರ

ಉದಾರವಾದಿ ಧೋರಣೆ ಹೆಚ್ಚು ಕಡಿಮೆ ಹಾಗೆಯೇ ಮುಂದುವರಿಯಿತು[11] ಇದಕ್ಕೆ ಕಾರಣ ಇವರೆಲ್ಲ (ನಿರಂಜನರನ್ನುಹೊರತು ಪಡಿಸಿ) ಧರ್ಮಕ್ಕೆ ಶುದ್ಧೀಕೃತವಾದ ಉತ್ತಮ ರೂಪವೊಂದು ಇರುತ್ತದೆ ಎಂಬ ಸಾಪೇಕ್ಷವಾದ ನಿಲುವನ್ನು ಹೊಂದಿದ್ದೇ ಆಗಿತ್ತು. ಆ ನಂತರದಲ್ಲಿಯೂ ಕನ್ನಡ ಕಾವ್ಯ ಮತ್ತು ವಿಮರ್ಶೆಗಳು ಮತ್ತೆ ಯುರೋಪಿನತ್ತ ತಿರುಗುವ ಮೂಲಕ ಮತ್ತೊಮ್ಮೆ ಧರ್ಮ ಸಾಪೇಕ್ಷವಾದ ವಿಮರ್ಶೆಯೇ ಮುಂದುವರಿಯಿತು. ಆದರೆ ಇವರ ಗಮನವು ಇಂಗ್ಲೀಷೇತರ ಸಾಹಿತ್ಯದತ್ತಲೂ ಹರಿದಿದ್ದರಿಂದ ಇವರ ಕಾವ್ಯಾತ್ಮಕ ಅರ್ಥೈಸುವಿಕೆಗಳಲ್ಲಿ ಬದಲಾವಣೆ ಕಾಣಿಸಿಕೊಂಡಿತು. ಈ ಹಿಂದಿನವರಿಗೆ ಅಚ್ಚಗನ್ನಡ, ಆಡುನುಡಿ, ಗೀತಾತ್ಮಕ ಭಾವತೀವ್ರತೆಯ ಸರಳ ಮಾದರಿಯಾಗಿ ಕಂಡುಬಂದಿದ್ದ ವಚನಗಳು ಇವರಿಗೆ ಮುಕ್ತ ಛಂದಸ್ಸು, ಪ್ರತಿಮಾತ್ಮಕತೆ, ಸಾಂಕೇತಿಕತೆ ಇತ್ಯಾದಿ ಭಿನ್ನನೆಲೆಯ ಅವಿಷ್ಕಾರವಾಗಿ ಕಂಡುಬಂದಿತು. ಉದಾರವಾದಿಯಾಗಿ ಕಂಡಿದ್ದ ವಿಶ್ವಾತ್ಮಕ ಧಾರ್ಮಿಕ ನಿಲುವುಗಳು ತೀರಾ ವೈಯಕ್ತಿಕವಾದ ತುಡಿತಗಳಾಗಿ ಕಂಡುಬಂದವು. ಉಳಿದಂತೆ ಇವರಿಗೂ ವಚನಗಳ ಕಾವ್ಯೇತರ ಧೋರಣೆಗಳ ಬಗ್ಗೆ ವಿಶೇಷವಾದ ಭಿನ್ನಾಭಿಪ್ರಾಯವೇನೂ ಉಂಟಾಗಲಿಲ್ಲ. ಹಾಗಾಗಿ ಸರಿ ಸುಮಾರು ೧೯೭೦ರವರೆಗಿನ ವಿಮರ್ಶೆಗಳಿಗೆ ವಚನಸಾಹಿತ್ಯದ ಕುರಿತಂತೆ ಕಾವ್ಯೇತರವಾದ ತಾತ್ವಿಕ ಭಿನ್ನಾಭಿಪ್ರಾಯವೇನೂ ತೀವ್ರಗತಿಯಲ್ಲಿ ಕಾಡಲಿಲ್ಲವೆನ್ನಬಹುದು.

ಆದರೆ ೧೯೭೦ರ ದಶಕದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹುಟ್ಟಿಕೊಂಡ ಸಾಹಿತ್ಯೇತರ ಕಾಳಜಿಗಳು[12] ಸಾಹಿತ್ಯವನ್ನು ಸಾಮಾಜಿಕ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಗ್ರಹಿಸಲು ಪ್ರಚೋದಿಸಿದವು. ಅದರಂತೆ ವಚನ ಸಾಹಿತ್ಯವನ್ನು ಕೂಡ ವಚನ ಚಳುವಳಿಯ ಉಪ ಉತ್ಪತ್ತಿಯಾಗಿ ಪರಿಗಣಿಸುವ ಧೋರಣೆಯು ನಿರ್ಮಾಣಗೊಂಡಿದ್ದರಿಂದ ಅಲ್ಲಿನ ಚರ್ಚೆಯ ಅಂಶಗಳು ಬೇರಾದವು. ಅದುವರೆಗೂ ನಡೆದು ಬಂದಿದ್ದ ಧರ್ಮ ಸಾಪೇಕ್ಷವಾದದ ಕಾವ್ಯಾತ್ಮಕ ಚರ್ಚೆಗಳು ಧರ್ಮ ನಿರಪೇಕ್ಷವಾದ ಕಾವ್ಯೇತರ ಚರ್ಚೆಯಾಗಿ ಪಲ್ಲಟಗೊಂಡವು. ವಚನ ಚಳುವಳಿಯಲ್ಲಿ ಭಾಗವಹಿಸಿದ್ದ ಬೇರೆ ಬೇರೆ ಜಾತಿಗಳ, ಕಸುಬುಗಳ ಜನ ಹಾಗು ಅವರ ನಡುವಿನ ಸಂಬಂಧದ ಹಿನ್ನೆಲೆಯಲ್ಲಿ ವಚನ ಸಾಹಿತ್ಯದ ನಿಲುವುಗಳನ್ನು ವಿಶ್ಲೇಷಿಸುವ ಮಾದರಿ ರೂಢಿಗೊಂಡಿತು. ನಾಯಕ ಪ್ರಧಾನವಾದ ವಚನ ಚಳುವಳಿಯ ನೆಲೆಗಳು ಸಮುದಾಯ ಪ್ರಧಾನ ನೆಲೆಗಳಿಗೆ ವರ್ಗಾವಣೆಗೊಂಡಿತು. ಬಸವಣ್ಣ ಅಲ್ಲಮ ಇವರ ಜೊತೆಗೆ ನೂರಾರು ಜನ ವಚನಕಾರರು ಚರ್ಚೆಯ ನೆಲೆಗಳನ್ನು ಪ್ರಭಾವಿಸತೊಡಗಿದರು. ಪರಿಣಾಮವಾಗಿ ಅದುವರೆಗೂ ಕಾವ್ಯತತ್ವ, ಪ್ರತಿಮಾತ್ಮಕತೆ, ವಿಶ್ವಧರ್ಮ, ಇತ್ಯಾದಿಯಾಗಿ ನಡೆಯುತ್ತಿದ್ದ ಚರ್ಚೆಗಳು ಇಲ್ಲಿ ಬಂಡಾಯ, ಪ್ರತಿಭಟನೆ ಇತ್ಯಾದಿ ನೆಲೆಗೆ ತಿರುಗಿತು. ಸಾಹಿತ್ಯ ವಿಮರ್ಶೆ ಎಂಬುದು ಸಾಂಸ್ಕೃತಿಕ ವಿಮರ್ಶೆಯ ಆಯಾಮಗಳನ್ನು ಪಡೆದುಕೊಳ್ಳಲಾರಂಭಿಸಿತು.

ಈ ರೀತಿ ಬದಲಾದ ಕನ್ನಡ ವಿಮರ್ಶೆಯ ಧೋರಣೆಯು ಬಹುಮುಖ್ಯ ಅಂಗವಾಗಿಯೇ ಸಾಹಿತ್ಯ ಕ್ಷೇತ್ರದಲ್ಲಿನ ಸ್ತ್ರೀಪರವಾದ ಕಾಳಜಿಗಳು ಸ್ತ್ರೀವಾದಿ

ನಿಲುವುಗಳಾಗಿ ತನ್ನ ಖಚಿತವಾದ ರೂಪವನ್ನು ಪಡೆದುಕೊಳ್ಳತೊಡಗಿತು. ವಚನ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಕೂಡ ಸ್ತ್ರೀಪರವಾದ ಉದಾರವಾದಿ ಧೋರಣೆಯೊಂದು ಗುರುತಿಸಲ್ಪಡತೊಡಗಿತು. ವಚನ ಚಳುವಳಿಯಲ್ಲಿ ಭಾಗವಹಿಸಿದ ಹಾಗೂ ವಚನಗಳನ್ನು ರಚಿಸಿದ ಸ್ತ್ರೀಯರ ಬಗೆಗಿನ ಮಾಹಿತಿಗಳು-ಮುಖ್ಯವಾಗಿ ಅಕ್ಕಮಹಾದೇವಿಯ ಜೀವನ ಹಾಗು ಸಾಹಿತ್ಯದ ಮಾದರಿಗಳು ಈ ವಿಮರ್ಶೆಗಳ ಸ್ತ್ರೀಪರವಾದ ಧೋರಣೆಗಳನ್ನು ಸ್ಪಷ್ಟಪಡಿಸುತ್ತ ಬಂದವು. ಮತ್ತು ಈ ವಿಮರ್ಶೆಗಳು ಪಡೆದುಕೊಂಡ ತಿರುವುಗಳೊಂದಿಗೆ ಆ ಮಾಹಿತಿಗಳು ಬೇರೆ ಬೇರೆ ನೆಲೆಗಳಲ್ಲಿ ಗೃಹೀತವಾಗತೊಡಗಿದವು. ಅದರಂತೆ ಅಕ್ಕಮಹಾದೇವಿಯು ಕನ್ನಡದ ಮೊದಲ ಕವಯಿತ್ರಿಯಾಗಿ, ಶ್ರೇಷ್ಠ ಕವಯತ್ರಿಯಾಗಿ, ಅತಿದೊಡ್ಡ ಸಾಧಕಿಯಾಗಿ ನಿರ್ವಚಿಸಲ್ಪಟ್ಟಳು. ಅವಳ ವಚನಗಳು ಭಾವತೀವ್ರತೆಯ, ಗೀತಾತ್ಮಕತೆಯ, ಮುಕ್ತ ಲೈಂಗಿಕಾಭಿವ್ಯಕ್ತಿಯ ಪ್ರತಿಭಟನೆಯ ಕಾವ್ಯಗಳಾಗಿ ಅರ್ಥೈಸಲ್ಪಟ್ಟವು. ಆ ವಿಮರ್ಶೆಗಳಿಗೆ ಅನುಗುಣವಾಗಿಯೇ ಇವತ್ತಿನ ಸ್ತ್ರೀವಾದಿ ವಿಮರ್ಶೆಯ ಮುಂಚೂಣಿಯಲ್ಲಿರುವ ವಿಜಯಾದಬ್ಬೆಯವರು ಕನ್ನಡ ಸಾಹಿತ್ಯ ಚರಿತ್ರೆಯ ಪುಟಗಳಲ್ಲಿ ಪ್ರಧಾನ ವಿಮರ್ಶಾಧಾರೆಯ ವಿಮರ್ಶೆಯನ್ನೇ ಅಕ್ಕಮಹಾದೇವಿಯ ಬಗ್ಗೆ ಬರೆಯುವಂತಾಯಿತು.[13] ಆದರೆ ೧೯೭೦ರಲ್ಲಿ ಪ್ರಧಾನ ವಿಮರ್ಶಾಪರಂಪರೆಯಲ್ಲಿ ಕಂಡುಬಂದ ಪಲ್ಲಟಗಳ ಪರಿಣಾಮ ೧೯೮೦ ರ ದಶಕದಲ್ಲಿ ಸ್ತ್ರೀವಾದಿ ಚಿಂತನೆಗಳ ಮೇಲೆ ವಿಶೇಷ ಪರಿಣಾಮ ಉಂಟುಮಾಡತೊಡಗಿತು. ಬೇರೆ ಬೇರೆ ಸೈದ್ಧಾಂತಿಕ ನೆಲೆಗಳವರ ಬೇಡಿಕೆ, ಆಕ್ರೋಶಗಳು ಖಚಿತವಾದ ಸೈದ್ಧಾಂತಿಕ ಸ್ವರೂಪವನ್ನು ಪಡೆದುಕೊಳ್ಳುತ್ತಿರುವ ಸಂಗತಿಗಳು ಸ್ತ್ರೀವಾದವು ಕರ್ನಾಟಕದ ಸಾಂಸ್ಕೃತಿಕ ಸಂದರ್ಭದಲ್ಲಿ ತನ್ನದೇ ಆದ ಸೈದ್ಧಾಂತಿಕ ನಿಲುವುಗಳನ್ನು ಖಚಿತ ಪಡಿಸಿಕೊಳ್ಳಲು ನೆರವಾದವು. ಪರಿಣಾಮವಾಗಿ ಹೆಣ್ಣು ಮಕ್ಕಳ ಸಾಹಿತ್ಯಾಭಿವ್ಯಕ್ತಿಗಳು ಹೆಚ್ಚು ಹೆಚ್ಚಾಗಿ ಸ್ತ್ರೀವಾದಿ ಸಾಹಿತ್ಯಾಭಿವ್ಯಕ್ತಿಯಾಗಿ ರೂಪುಗೊಳ್ಳತೊಡಗಿದಂತೆ ಸಾಹಿತ್ಯ ವಿಮರ್ಶೆಗಳು ಖಚಿತವಾಗಿ ಸ್ತ್ರೀವಾದಿ ವಿಮರ್ಶೆಯ ಚರ್ಚೆಗಳನ್ನು ರೂಪಿಸಿಕೊಳ್ಳತೊಡಗಿತು, ಅದರ ಪರಿಣಾಮವಾಗಿ ಕನ್ನಡ ವಿಮರ್ಶಕಿಯರು ಅಥವಾ ಸ್ತ್ರೀವಾದಿ ವಿಮರ್ಶಕರು ವಚನಸಾಹಿತ್ಯ ಮತ್ತು ಅಕ್ಕಮಹಾದೇವಿಯ ಸಂಗತಿಯನ್ನು ಸಾಹಿತ್ಯೇತರ ನೆಲೆಯಲ್ಲಿ ಅರ್ಥೈಸಲು ತೊಡಗಿದರು.

ಹೀಗೆ ಪ್ರಧಾನ ವಿಮರ್ಶೆಯ ವೈಚಾರಿಕ ಆಕೃತಿಯ ಅಂಗವಾಗಿಯೇ ಆರಂಭಗೊಂಡ ವಚನಗಳ ಕುರಿತ ಸ್ತ್ರೀ ಪರವಾದ ವಿಮರ್ಶೆಗಳು ೧೯೮೦ರ ದಶಕದ ಹೊತ್ತಿಗೆ ತನ್ನ ನೆಲೆಗಳನ್ನು ಗಟ್ಟಿಗೊಳಿಸಿಕೊಳ್ಳುತ್ತ, ಪ್ರಧಾನ ಸಾಹಿತ್ಯ ವಿಮರ್ಶೆಯ ಪ್ರಭಾವದಿಂದ ತನ್ನನ್ನು ಬಿಡಿಸಿಕೊಳ್ಳಲು ಪ್ರಯತ್ನಿಸತೊಡಗಿತು. ಮಹಿಳಾ ಸಾಹಿತ್ಯವನ್ನು ಪ್ರಧಾನ ಧಾರೆಯ ಮಟ್ಟಕ್ಕೆ ಎತ್ತಬೇಕು ಹಾಗು ಪ್ರಧಾನ ಧಾರೆಯೊಳಗೆ ವಿಲೀನಗೊಳಿಸಬೇಕು ಎಂಬ ಆದರ್ಶವಾಗಿ ರೂಪುಗೊಳ್ಳುತ್ತಿದ್ದ ಮಹಿಳಾ ಪರವಾದ ಕಾಳಜಿ, ಕುತೂಹಲಗಳನ್ನು ಕುರಿತು ಹಲವಾರು ಪ್ರಶ್ನೆಗಳನ್ನು ಎತ್ತಿತು. ಪರಿಣಾಮವಾಗಿ, ಮಹಿಳಾ ಸಾಹಿತ್ಯದ ನೆಲೆಬೆಲೆಗಳು ಪುರುಷ ಸಾಹಿತ್ಯದ ಮಾದರಿಗಳನ್ನು ಅನುಸರಿಸಿಯೇ

ರೂಪುಗೊಳ್ಳಬೇಕೆ? ಸ್ತ್ರೀವಾದಿ ವಿಮರ್ಶೆಗಳು ಪ್ರಧಾನ ವಿಮರ್ಶಾಧಾರೆಯ ಸಹಮತದೊಂದಿಗೇ ನಿರ್ಧಾರಗೊಳ್ಳಬೇಕೆ? ಮಹಿಳೆ ತನ್ನ ಅನುಭವಗಳಿಗೆ ಪುರುಷನ ಅಭಿವ್ಯಕ್ತಿಗಳನ್ನೇ ಅನುಸರಿಸಬೇಕೆ? ಇತ್ಯಾದಿ ಪ್ರಶ್ನೆಗಳು ಎದುರಾದವು. ಹಾಗು ಈ ಪ್ರಶ್ನೆಗಳೇ ಇವತ್ತಿನ ಸ್ತ್ರೀವಾದಿ ವಿಮರ್ಶೆಯ ಪ್ರಧಾನ ನೆಲೆಗಳಾಗಿ ಕಂಡುಬರುತ್ತಿವೆ. ಈ ಹಿನ್ನೆಲೆಯಲ್ಲಿಯೇ ಪ್ರಧಾನ ವಿಮರ್ಶೆಗಿರುವ ಸ್ತ್ರೀಪರವಾದ ಕಾಳಜಿಗಳ ಕುರಿತಂತೆ ಸ್ತ್ರೀವಾದಿ ಚಿಂತನೆಗೆ ವಚನ ಚಳುವಳಿ ಮತ್ತು ಅಕ್ಕಮಹಾದೇವಿಯ ಸಂದರ್ಭದಲ್ಲಿ ಎರಡು ಪ್ರಶ್ನೆಗಳು ಪ್ರಧಾನವಾಗುತ್ತವೆ. ಒಂದು, ತನ್ನ ವೈಯಕ್ತಿಕ ಸಾಧನೆಯಾಚೆಗೆ ಅಕ್ಕಮಹಾದೇವಿಗಿದ್ದ ಸ್ತ್ರೀವಾದಿ ನಿಲುವುಗಳೇನು? ಎರಡು, ಅಕ್ಕಮಹಾದೇವಿಯ ಧಾರ್ಮಿಕ ಸಾಧನೆಯಾಚೆಗೆ ವಚನ ಚಳುವಳಿಯು ಗುರುತಿಸಿಕೊಂಡ ಸ್ತ್ರೀವಾದಿ ನಿಲುವುಗಳೇನು? ಎಂಬುದು.

ಇದುವರೆಗಿನ ಕನ್ನಡದ ವಿಮರ್ಶೆಗಳ ವಚನ ಚಳುವಳಿಗೆ ಸಂಬಂಧಪಟ್ಟ ನಿಲುವು 'ಸತಿಪತಿಗಳೊಂದಾದ ಭಕ್ತಿ ಹಿತಮಪ್ಪುದು ಶಿವಗೆ' ಹಾಗು 'ನಡುವೆ ಸುಳಿವ ಆತ್ಮಲಿಂಗ ಗಂಡೂ ಅಲ್ಲ, ಹೆಣ್ಣು ಅಲ್ಲ' ಎಂಬೆರಡು ಪುರುಷ ಹೇಳಿಕೆಗಳನ್ನು[14] ಆಧರಿಸಿದ್ದಾಗಿದ್ದು, ಅಕ್ಕಮಹಾದೇವಿಯನ್ನು ವಚನಗಳ ಸ್ತ್ರೀವಾದಿ ಚಿಂತನೆಯ ನಾಯಕಿಯಾಗಿ ಭಾವಿಸಿದೆ. ಅಕ್ಕಮಹಾದೇವಿಯ ಬದುಕನ್ನು ವಚನಗಳ ಸ್ತ್ರೀವಾದಿ ಚಿಂತನಾ ಪ್ರಣಾಳಿಯ ಪ್ರಯೋಗವಾಗಿ ನಿರ್ವಚಿಸಿದೆ. ಅಕ್ಕಮಹಾದೇವಿಯ ಕಾವ್ಯಾತ್ಮಕ ಚರ್ಚೆಯನ್ನು ಅವಳ ಬದುಕಿನ ಚರ್ಚೆಯಾಗಿಯೇ ಬೆಳೆಸಿದೆ. ಅವಳ ಪ್ರತಿಯೊಂದು ವಚನವನ್ನು ಜೀವನದ ಒಂದಿಲ್ಲೊಂದು ಸಂದರ್ಭದಲ್ಲಿ ಹೊರಟ ಆರ್ತಧ್ವನಿಗಳಾಗಿಯೇ ಗುರುತಿಸಿದೆ. ಅವಳ ಸಾಹಿತ್ಯ ಕುರಿತ ವಿಮರ್ಶೆಗಳನ್ನೆಲ್ಲ ಅವಳ ವ್ಯಕ್ತಿಗತ ಬದುಕು ಹಾಗು ಬರಹದ ವಿಚಿತ್ರ ಸಮ್ಮಿಳನವಾಗಿಯೇ ರೂಪಿಸಿದೆ.

ಹಾಗೆಯೇ ವಚನ ಚಳುವಳಿಯ ಪ್ರಧಾನ ಸ್ತ್ರೀವಾದಿ ಹೇಳಿಕೆಯಾಗಿ ಗುರುತಿಸಲ್ಪಟ್ಟಿರುವ 'ಸತಿಪತಿಗಳೊಂದಾದ ಭಕ್ತಿ' ಎಂಬುದು ಕೂಡ ಕೌಟುಂಬಿಕ ಸಾಮರಸ್ಯದ ನೆಲೆಯಲ್ಲಿ ಧಾರ್ಮಿಕ ಸ್ವಾತಂತ್ರ್ಯವನ್ನು ಗುರುತಿಸುತ್ತಲೇ ಗಂಡು-ಹೆಣ್ಣುಗಳ ನಡುವಿನ ಜೈವಿಕ ವ್ಯತ್ಯಾಸವನ್ನು ಸ್ವೀಕರಿಸುತ್ತದೆ. ಆದರೆ ಆ ಒಂದಾಗುವ ರೀತಿಯನ್ನು ಕುರಿತು ಖಚಿತವಾದ ವಿವರಗಳನ್ನೇನೂ ನೀಡುವುದಿಲ್ಲ. ಹಾಗಾಗಿ ಈ ಸಾಮರಸ್ಯದ ಮಾತು ಒಂದೆಡೆ ಆಧುನಿಕ ಸ್ತ್ರೀವಾದದ ಸಾಮರಸ್ಯವನ್ನು ಸೂಚಿಸುತ್ತದೆ ಎಂದು ಊಹಿಸಬಹುದಾದರೂ, ಇನ್ನೊಂದೆಡೆ ಸಾಂಪ್ರದಾಯಿಕ ಪುರುಷ ಪ್ರಧಾನ ವ್ಯವಸ್ಥೆಯ ಸಾಮರಸ್ಯವನ್ನೂ ಸೂಚಿಸಬಹುದಾಗಿದೆ. ಹಾಗು ಧಾರ್ಮಿಕಾಭಿರುಚಿಯ ಆಧಾರದ ಮೇಲೆಯೇ ದಾಂಪತ್ಯಗಳು ಸಮರಸಗೊಳ್ಳಬೇಕೆಂಬ ಆಲೋಚನೆಯನ್ನು ಒತ್ತಾಯಿಸುವುದಾಗಿರಬಹುದು. ಅರ್ಥಾತ್ ಸ್ವಧರ್ಮೀಯ ವಿವಾಹಗಳನ್ನೇ ಅಂತರ್ಯದಲ್ಲಿ ಪ್ರೇರಿಸುತ್ತಿರಬಹುದು.

ವಚನ ಚಳುವಳಿಯ ಇನ್ನೊಂದು ಹೇಳಿಕೆಯಾದ 'ನಡುವೆ ಸುಳಿವ ಆತ್ಮಲಿಂಗ'ದ

ಮಾತು ಮೊದಲ ನೋಟಕ್ಕೆ ಗಂಡು-ಹೆಣ್ಣಿನ ನಡುವಿರುವ ಜೈವಿಕ ವ್ಯತ್ಯಾಸವನ್ನು ಮತ್ತು ಅದರಿಂದ ಉಂಟಾಗುವ ಅಸಮಾನತೆಯನ್ನು ಕುರಿತದ್ದಾಗಿ ಕಂಡುಬಂದರೂ, ಆಂತರ್ಯದಲ್ಲಿ ಅದು ಮನುಷ್ಯನ ಜೈವಿಕ ಅಸ್ತಿತ್ವವನ್ನೇ ಗೌಣವಾಗಿಸುವುದಾಗಿದೆ. ಗಂಡಿಗಿಂತ ಭಿನ್ನವಾಗಿರುವ ಹೆಣ್ಣಿನ ಜೈವಿಕ ಸಂಗತಿಗಳು ಅವಳ ಪ್ರತಿಭೆ ಮತ್ತು ಸಾಮರ್ಥ್ಯವನ್ನು ಅಳೆಯುವ ಸಾಧನಗಳಲ್ಲ ಎಂಬ ಸ್ತ್ರೀವಾದಿ ಆಶಯವನ್ನು ಸೂಚಿಸುವುದಕ್ಕಿಂತ ಗಂಡು ಹೆಣ್ಣುಗಳಿಬ್ಬರ ಜೈವಿಕ ಅಸ್ತಿತ್ವವನ್ನು ನಿರಾಕರಿಸುವ ಆಶಯವುಳ್ಳದ್ದಾಗಿದೆ. ಆದ್ದರಿಂದಲೇ ಇಲ್ಲಿ ಮೊಲೆ-ಮುಡಿಗಳಂತೆ, ಮೀಸೆ -ಗಡ್ಡಗಳೂ ಪ್ರಯೋಜನಕ್ಕೆ ಬಾರದ ಸಂಗತಿಗಳಾಗುತ್ತವೆಯೇ ಹೊರತು ಅವೆರಡರ ಅಸಮಾನತೆಯ ಸಂದರ್ಭದ ಚರ್ಚೆಯನ್ನೇನೂ ಇದು ಬೆಳೆಸುವುದಿಲ್ಲ. ಹಾಗಾಗಿಯೇ ವಚನ ಸಾಹಿತ್ಯದಲ್ಲಿನ ಈ ಹೇಳಿಕೆಗಳು ಆಧುನಿಕಾರ್ಥದಲ್ಲಿ ಗಂಡು ಹೆಣ್ಣಿನ ಜೈವಿಕ ಅಸ್ತಿತ್ವ, ಅವರ ಭಿನ್ನತೆ ಮತ್ತು ಅದರಿಂದಾದ ಅಸಮತೆ ಇವುಗಳನ್ನು ಕುರಿತು ಮಾತನಾಡುತ್ತಿವೆ ಎನ್ನುವುದು ಅತಿದೂರದ ಮಾತಾಗುತ್ತದೆ.

ಅಕ್ಕಮಹಾದೇವಿಯನ್ನು ವಚನ ಚಳುವಳಿಯ ಸ್ತ್ರೀವಾದಿ ಚಿಂತನೆಯ ಜೊತೆಯಲ್ಲಿಟ್ಟು ಅರ್ಥೈಸಿದಾಗಲೂ ಅವೆರಡರ ನಡುವಿನ ಭಿನ್ನತೆ ಸ್ಪಷ್ಟವಾಗುತ್ತದೆ. ಅಕ್ಕಮಹಾದೇವಿಯ ವಚನಗಳು ಸ್ತ್ರೀವಾದಿ ಚಿಂತನೆಯ ವೈಚಾರಿಕ ಸ್ವರೂಪಕ್ಕಿಂತ ವ್ಯಕ್ತಿಗತ ಆದರ್ಶದ ನೆಲೆಯಲ್ಲಿಯೇ ಹೆಚ್ಚಾಗಿ ರೂಪುಗೊಂಡಿದೆ. ಅವಳೊಬ್ಬ ಉನ್ಮತ್ತ ಪ್ರೇಮಿ. ತನ್ನ ಪ್ರಿಯತಮ ಕರಕರ ಕಾಡಿದರೂ ಆತನಿಗಾಗಿ ತನ್ನ ಒಡಲನ್ನೂ, ಪ್ರಾಣವನ್ನೂ ಅರ್ಪಿಸಲು ತಯಾರಾದಳು. ಈ ಅರ್ಪಣಾ ಸ್ಥಿತಿಯಲ್ಲಿ ಆಕೆಗೆ ಸಮಾಜದ ಎಲ್ಲ ಮೌಲ್ಯಗಳತ್ತಲೂ ತಿರಸ್ಕಾರ ಭಾವವೇ. ಆ ತಿರಸ್ಕಾರದಲ್ಲಿ ಸ್ವತಃ ಆಕೆಯ ಮಾನಾಭಿಮಾನಗಳೂ ಸೇರಿವೆ. ಬದಲಿಗೆ ಸ್ತ್ರೀವಾದವಾದರೋ ಕಳೆದು ಹೋಗಿರುವ ತನ್ನ ಮಾನಾಭಿಮಾನಗಳನ್ನು ಪಡೆದುಕೊಳ್ಳುವ ಹೋರಾಟವಾಗಿದೆ.

ಅಕ್ಕಮಹಾದೇವಿ ತನ್ನ ವೈಯಕ್ತಿಕ ಹಂಬಲಕ್ಕಾಗಿ ತಾನು ಲೌಕಿಕದಲ್ಲಿ ನಿರಾಕರಿಸಿದ ದಾಂಪತ್ಯಕ್ಕಿಂತ ಭಿನ್ನವಾಗಿ ಅಲೌಕಿಕದಲ್ಲಿ ಕಟ್ಟಿಕೊಳ್ಳಬಯಸುವುದೂ ದಾಂಪತ್ಯವನ್ನೇ. ಆ ದಿವ್ಯ ದಾಂಪತ್ಯದಲ್ಲಾದರೋ ಪುರುಷ ಪ್ರಧಾನವಾದ ಎಲ್ಲ ಸ್ಥಿತಿಗಳೂ ಆಕೆಗೆ ಸ್ವಾಗತಾರ್ಹವೇ. ಅರ್ಪಣಾ ಪೂರ್ವಕವಾದ ಆಕೆಯ ಕನಸಿನ ದಾಂಪತ್ಯದಲ್ಲಿ ಅಕ್ಕಮಹಾದೇವಿ ತನ್ನ ವ್ಯಕ್ತಿತ್ವದ ಪ್ರಕಾಶವನ್ನಾಗಲೀ, ಮಾನಾಭಿಮಾನವನ್ನಾಗಲೀ ಕೆಕ್ಕಿಸುವುದಿಲ್ಲ. ಪುರುಷ ಪ್ರಾಧಾನ್ಯತೆಯನ್ನು ಪ್ರಶ್ನಿಸುವುದೂ ಇಲ್ಲ. ಬದಲಿಗೆ ತಾನು ಬಯಸಿದ ಪತಿ ದೊರೆಯುವನಾದರೆ ಉಳಿದಂತೆ ಆಕೆಗೆ ದಾಂಪತ್ಯದಲ್ಲಿ ತೊಡಕುಗಳೇ ಇಲ್ಲ. ಆತನೊಂದಿಗಿನ ಬದುಕಿನ ಸಂಕಷ್ಟಗಳೆಲ್ಲವೂ ಆಕೆಗೆ ಸಂಭ್ರಮಗಳೇ. ಆದ್ದರಿಂದಲೇ ಎಚ್. ಜೆ. ಸರಸ್ವತಿಯವರು 'ಅಕ್ಕನ ಭಾವತೀವ್ರತೆ ಹದಿಬದೆಯ ಧರ್ಮದ ಭಾವತೀವ್ರತೆಗಿಂತ ಹೆಚ್ಚು ಭಿನ್ನವಾದುದಲ್ಲ' ಎನ್ನುತ್ತಾರೆ.[15]

ಆದರೆ ಇದುವರೆಗಿನ ಪ್ರಧಾನ ವಿಮರ್ಶೆಗಳ ವೈಚಾರಿಕ ಆಕೃತಿಯಾದರೋ

ಅಕ್ಕಮಹಾದೇವಿಯ ಈ ಲೌಕಿಕದ ದಾಂಪತ್ಯ ವಿಘಟನೆ ಮತ್ತು ದಿವ್ಯ ದಾಂಪತ್ಯದ ಹಂಬಲಗಳನ್ನು ದೂರದೂರವೇ ಇಟ್ಟು ವಿವರಿಸಿದೆ. ಅಕ್ಕನ ದಾಂಪತ್ಯ ವಿಘಟನೆ ಎಂಬುದನ್ನು ಜಡ ಸಮಾಜಕ್ಕೆ ಸ್ತ್ರೀ ನೀಡಿದ ಪ್ರತಿಭಟನೆಯಾಗಿ ವೈಯಕ್ತಿಕ ಬದುಕಿನ ಚಾರಿತ್ರಿಕ ಸತ್ಯವಾಗಿ ಗ್ರಹಿಸಿದೆ ಹಾಗು ಆ ನಂತರದ ಅವಳ ದಿವ್ಯದಾಂಪತ್ಯದ ಹಂಬಲವನ್ನು ಅಲೌಕಿಕದ ಪ್ರತಿಮಾತ್ಮಕ ಸಂಗತಿಯಾಗಿ ಮಾತ್ರ ಗುರುತಿಸಿದೆ. ದಾಂಪತ್ಯ ವಿಘಟನೆಯ ಆಚೆಗಿನ ಆಕೆಯ ಕನಸುಗಳು ಏನನ್ನು ಕುರಿತು ಚಿಂತಿಸುತ್ತವೆ ಎಂಬುದನ್ನು ಧಾರ್ಮಿಕ ನೆಲೆಯಲ್ಲಿ ಮಾತ್ರ ಪರಿಭಾವಿಸಿ ಕೈಬಿಡುತ್ತವೆ. ಅಂದರೆ ಅಕ್ಕನ ಬದುಕಿಗೆ ಸಂಬಂಧಿಸಿದಂತೆ ಕೌಶಿಕನ ಪ್ರಸ್ತಾಪವನ್ನು ವಾಸ್ತವವಾಗಿ, ಚನ್ನಮಲ್ಲಿಕಾರ್ಜುನನ ಪ್ರಸ್ತಾಪವನ್ನು ಕನಸಾಗಿ ವಿಭಜಿಸಿ ವಿವರಿಸುತ್ತದೆ. ಆದರೆ ಅಕ್ಕನ ವಚನಗಳಲ್ಲಿ ವಾಸ್ತವಕ್ಕೂ ಕನಸಿಗೂ ನಡುವೆ ಗೆರೆ ಎಳೆಯುವುದೇ ಕಷ್ಟ. ಆಕೆಯ ಕನಸಿನಲ್ಲಿ ತೀರ ವಾಸ್ತವದ ಚಿತ್ರಗಳು ಕಿಕ್ಕಿರಿದಿದ್ದು ವಿಮರ್ಶೆಗಳು ಯಾವುದನ್ನು ಈಗ ಆಕೆಯ ಚರಿತ್ರೆ ಎನ್ನುತ್ತಿವೆಯೋ ಅದಕ್ಕಿಂತಲೂ ವಾಸ್ತವದ ಭಾವನೆಯನ್ನು ಅವು ಮೂಡಿಸುತ್ತವೆ. ಹಾಗಿರುವಾಗ ನಮ್ಮ ವಿಮರ್ಶೆಗಳು 'ಸೆರಗ ಬಿಡು ಮರುಳೆ' ಎಂಬುದರಲ್ಲಾಗಲಿ, 'ಲೋಕದ ಗಂಡಂದಿರನೆಲ್ಲ ಒಲೆಯೊಳಗಿಕ್ಕಿ ಸುಡು' ಎಂಬುದರಲ್ಲಾಗಲಿ ಆಕೆ ನೇರವಾಗಿ ಕೌಶಿಕನ ಮಾತ್ತೆತ್ತುವುದಿಲ್ಲವಾದರೂ ಅದನ್ನು ಮಾತ್ರ ವಾಸ್ತವವೆಂದು ಒಪ್ಪಿವೆ. ಅಕ್ಕನ ವಚನಗಳನ್ನೂ ರೋಚಕ ಕಥನಕ್ರಮವೊಂದರಲ್ಲಿ ಜೋಡಿಸುವ ಪ್ರಯತ್ನ ಮಾಡಿವೆ.

ಅದರಂತೆ ವಚನಗಳ ಧರ್ಮ ನಿರಪೇಕ್ಷ ಅಧ್ಯಯನ ನಡೆಸ ಹೊರಡುವ ಚಿಂತನೆಗಳೂ ಕೂಡ ಅಕ್ಕನ ಕುರಿತ ಈ ರೋಚಕ ಕಥನ ಪರಂಪರೆಯನ್ನು ಒಪ್ಪಿ ಮುಂದುವರಿಸಿಯೇ ತಮ್ಮ ತಾತ್ವಿಕ ನಿಲುವನ್ನು ಪ್ರಸ್ತುತ ಪಡಿಸಿವೆ. ೧೯೮೦ರ ದಶಕದ ನಂತರದ ಸ್ತ್ರೀವಾದಿ ನಿಲುವುಗಳೂ ಕೂಡ ಅಕ್ಕನ ಕುರಿತಾದ ಈ ಎಲ್ಲ ಕಥನಗಳನ್ನು ಸರಿಸುಮಾರಾಗಿ ಒಪ್ಪುತ್ತಲೇ ತನ್ನ ವಾದವನ್ನು ಮಂಡಿಸಲು ಪ್ರಯತ್ನಿಸುತ್ತಿದೆ. ಅದರ ಪ್ರಕಾರ ವಚನಕಾರರಲ್ಲಿನ ಸ್ತ್ರೀ ಸ್ವಾತಂತ್ರ್ಯವೇನಿದ್ದರೂ ಧರ್ಮಕ್ಕೆ ಮಾತ್ರ ಪರಿಮಿತಗೊಂಡದ್ದಾಗಿದ್ದು, ಅಕ್ಕಮಹಾದೇವಿಯ ವ್ಯಕ್ತಿತ್ವದ ಸಹಿಸುವಿಕೆ ಆ ಕಾರಣಕ್ಕಾಗಿ ಮಾತ್ರ ಉಂಟಾದುದಾಗಿದೆ. ಶಿವಶರಣೆಯರ ಸಂದರ್ಭದಲ್ಲಿ ಉದಾರಗೊಂಡು ಗೌರವಿಸಲ್ಪಟ್ಟ ಸ್ತ್ರೀಯ ವ್ಯಕ್ತಿತ್ವವು ಅದರಾಚೆಗಿನ ಸಮಾಜವನ್ನು ಕುರಿತದ್ದಾಗಿರಲಿಲ್ಲ. ಆದ್ದರಿಂದಲೇ ಕೇವಲ ಧಾರ್ಮಿಕ ಅಗತ್ಯಕ್ಕಾಗಿ ರೂಪುಗೊಂಡ ವಚನ ಚಿಂತನೆಯಲ್ಲಿನ ಸ್ತ್ರೀಪರವಾದ ಸಡಿಲಿಕೆಗಳನ್ನು ಉದಾರವಾದ ಸ್ವಾತಂತ್ರ್ಯವೆಂದು ಭಾವಿಸಲಾಗುವುದಿಲ್ಲ ಎನ್ನುವುದಾಗಿದೆ. [16]

ಆದರೆ ಈ ಸ್ತ್ರೀವಾದಿ ವಿಮರ್ಶೆಯ ಹಿಂದಿರುವ ಅಂಶವೂ ಕೂಡ ಈಗಾಗಲೇ ಒಂದಲ್ಲಾ ಒಂದು ಧರ್ಮವನ್ನು ಕಂಡು, ಅನುಭವಿಸಿದ್ದ ಪುರುಷಾನುಭವವನ್ನೇ ಪ್ರಧಾನವಾಗಿ ಆಧರಿಸಿದ ಪ್ರಧಾನ ವಿಮರ್ಶಾಧಾರೆಯ ಧರ್ಮನಿರಪೇಕ್ಷ ನಿಲುವುಗಳಿಂದಲೇ ಪ್ರಭಾವಿತವಾದದ್ದಾಗಿದೆ[17]. ಭಾರತೀಯ ಸಮಾಜವು ತನ್ನನ್ನು ಕಾಲಕಾಲಕ್ಕೆ ತಕ್ಕಂತೆ ವಿವಿಧ ಧಾರ್ಮಿಕ ಪ್ರಣಾಳಿಗಳಲ್ಲಿ ಹಾಕಿಕೊಳ್ಳುತ್ತಾ ಬಂದಿದ್ದರೂ,

ಅವೆಲ್ಲ ಧರ್ಮಗಳು ಒಮ್ಮನಸ್ಸಿನಿಂದ ಸ್ತ್ರೀಗೆ ಭೋದಿಸಿದ್ದು ಮಾತ್ರ ಪತಿವ್ರತಾ ಧರ್ಮವನ್ನೇ. ಪತಿ, ಮನೆ ಮತ್ತು ಪಾತಿವ್ರತ್ಯ ಇದಿಷ್ಟನ್ನು ಸ್ತ್ರೀ ಕಾಯಾ ವಾಚಾ ಮನಸಾ ನೆರವೇರಿಸಿದ್ದರೆ ಅದಕ್ಕಿಂತ ಮುಕ್ತಿ ಮಾರ್ಗ ಬೇರೊಂದಿಲ್ಲ ಎಂಬುದನ್ನೇ. ಅಂದರೆ ಹೆಣ್ಣಿನ ಜಗತ್ತನ್ನು ಸಂಕುಚಿತಗೊಳಿಸುವುದರಲ್ಲಿ, ಕುಟುಂಬಕ್ಕೆ ಸೀಮಿತಗೊಳಿಸುವುದರಲ್ಲಿ ಧರ್ಮಗಳು ವಿಶೇಷ ಪಾತ್ರವಹಿಸಿವೆ ಎಂದಾಗುತ್ತದೆ. ಅಂತಹ ಸಂದರ್ಭದಲ್ಲಿ ವಚನ ಧರ್ಮ ಅದುವರೆಗೂ ಪುರುಷನಿಗಾಗಿ ಮಾತ್ರ ಇದ್ದ ಧರ್ಮವನ್ನು (ಅದರ ಸ್ವರೂಪ ಹೇಗೇ ಇರಲಿ) ಮಹಿಳೆಯುವರೆಗೂ ವಿಸ್ತರಿಸುವ ಮೂಲಕ ಕೌಟುಂಬಿಕ ನಿಷ್ಠೆ ಕೊಂಚಮಟ್ಟಿಗೆ ಸಡಿಲಗೊಳ್ಳಲು ಕಾರಣವಾಯಿತು. ಧಾರ್ಮಿಕ ಸಾಧನೆಗಾಗಿಯಾದರೂ ಸರಿ ಕುಟುಂಬದ ವಿಘಟನೆಯ ಆಲೋಚನೆಯನ್ನು ಸಹಿಸಿಕೊಂಡಿತು. ಹೆಂಡತಿಯಾದವಳು ಕುಟುಂಬ ನಿಷ್ಠೆ / ಪತಿ ನಿಷ್ಠೆಯ ಆಚೆಗೆ ಕೂಡ ತನ್ನ ಧಾರ್ಮಿಕ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬಹುದಾದ ಅವಕಾಶವನ್ನು ಎತ್ತಿ ಹಿಡಿಯಿತು. ಇದರಿಂದ ಧರ್ಮದ ಮುಖವಾಡ ಹೊತ್ತಾದರೂ ಸರಿ ಮೊದಲ ಬಾರಿಗೆ ಸೀಮೆಗೆಡುವುದು, ತಾನೇ ಕೂಟಕ್ಕಾಗಿ ಹಾತೊರೆಯುವುದು, ನಾನಾರ ಹೊಂದುವೆನೆಂದು ಚಿಂತಿಸಲೇಕಯ್ಯ ಎಂದು ಪ್ರಶ್ನಿಸುವುದು, ಇಬ್ಬರು ಹೆಂಡಿರನಾಳ್ವುದು ನಿಮ್ಮ ಹಿರಿತನಕ್ಕೆ ಸಾಕ್ಷಿಯೇ ಎಂದು ಕೇಳುವುದು ಸ್ತ್ರೀಗೆ ಸಾಧ್ಯವಾಯಿತು. ಆದ್ದರಿಂದಲೇ ವಚನ ಸಾಹಿತ್ಯದ ಸಂದರ್ಭದಲ್ಲಿ ಸ್ತ್ರೀವಿಮೋಚನೆ ಎಂಬುದು ಧಾರ್ಮಿಕ ಬದ್ಧತೆಯೊಳಗಿಂದಲೇ ರೂಪುಗೊಳ್ಳುವ ಬಿಡುಗಡೆಯ ಮೊದಲ ಹೆಜ್ಜೆಯಾಗಿ, ಕುಟುಂಬದಾಚೆಗಿನ ಹೊರ ಜಗತ್ತಿನ ಪ್ರವೇಶಿಕೆಯಾಗಿ ಕಂಡುಬರುತ್ತದೆ. ಅಂತೆಯೇ ವಚನ ಚಳುವಳಿ ಮತ್ತು ಅಕ್ಕಮಹಾದೇವಿಯು ಪ್ರಧಾನ ವಿಮರ್ಶೆಯು ಅರ್ಥೈಸುವ ನೆಲೆಯಲ್ಲಿ ಸ್ತ್ರೀವಾದಿ ನಿಲುವುಗಳನ್ನು ಪ್ರಕಟಿಸದಿದ್ದರೂ, ತನ್ನದೇ ಆದ ರೀತಿಯಲ್ಲಿ ಸ್ತ್ರೀವಾದಿ ನಿಲುವುಗಳನ್ನು ಪ್ರಚೋದಿಸುವ ಸಾಧ್ಯತೆ ಇದೆ. ಭಾರತದ ಸಂದರ್ಭದಲ್ಲಿ ಸ್ತ್ರೀವಾದಿ ಚಿಂತನೆಯ ಒಳಗೂ ಎತ್ತಬಹುದಾದ ಶ್ರೇಣಿಕೃತ ಜಾತಿ ವ್ಯವಸ್ಥೆಯ, ಆರ್ಥಿಕ ಅಸಮತೆಯ, ಸಾಹಿತ್ಯಿಕ, ಸಾಂಸ್ಕೃತಿಕ ಶ್ರೇಷ್ಠತೆಯ ವಾದಗಳನ್ನು ಬೆಳೆಸಬಹುದಾಗಿದೆ.

**ಟಿಪ್ಪಣಿಗಳು**

೧. ಅದಕ್ಕೆ ಪೂರ್ವದಲ್ಲಿಯೇ ಫ್ಲೀಟ್ ಇತ್ಯಾದಿ ಪಾಶ್ಚಾತ್ಯ ವಿದ್ವಾಂಸರು ಜನಪದ ಸಾಹಿತ್ಯ ಸಂಗ್ರಹಕ್ಕೆ ಕೈಹಾಕಿದ್ದರೂ ಅವುಗಳನ್ನು ಮಹಿಳಾಭಿವ್ಯಕ್ತಿ ಎಂಬ ನೆಲೆಯಲ್ಲಿ ಹೆಚ್ಚಿನ ಒತ್ತು ನೀಡಿದವರು ಕನ್ನಡ ವಿದ್ವಾಂಸರೆ.

೨. ಶೂನ್ಯ ಸಂಪಾದನೆಯ ರಚನೆ ಮತ್ತು ಪರಿಷ್ಕಾರಗಳ ಜೊತೆಗೆ ವಚನ ಸಂಕಲನಕಾರರೆಂದು ಪ್ರಸಿದ್ಧರಾದ ಸಂಪಾದನೆಯ ಚೆನ್ನಂಜೆದೇವ, ಸಂಪಾದನೆಯ ಸಿದ್ಧವೀರಣಾರ್ಯ ಇತ್ಯಾದಿಗಳ ಒಂದು ಪಟ್ಟಿಯನ್ನೇ ವಚನಶಾಸ್ತ್ರ ಸಾರ ಕೃತಿಯಲ್ಲಿನ 'ಪ್ರಕಾಶಕರ ನುಡಿ'ಯಲ್ಲಿ ಕಾಣಬಹುದಾಗಿದೆ.

೩. ಎಲ್. ಬಸವರಾಜು ಅವರು ೧೯೩೭ರ ವೇಳೆಗಾಗಲೇ ಶರಣರಲ್ಲಿ ಕೆಲವರ ವಚನಗಳು ಮುದ್ರಿತವಾಗಿ ಪ್ರಕಟವಾಗಿದ್ದವು ಎಂದು ಹೇಳುತ್ತಾರೆ. (ಎಲ್. ಬಸವರಾಜು -ಅಕ್ಕನ ವಚನಗಳು- ಗೀತಾ ಬುಕ್ ಹೌಸ್-ಮೈಸೂರು-೧೯೯೦ ( ಪ್ರ. ಮು ೧೯೬೬)ಪುಟ-೨೨

೪. ಫ. ಗು ಹಳಕಟ್ಟಿ, ವಚನಶಾಸ್ತ್ರಸಾರ -ಪ್ರಸ್ತಾವನೆ- ವೀರಶೈವ ಅಧ್ಯಯನ ಸಂಸ್ಥೆ, ಗದಗ ೧೯೮೨ (ಪ್ರ. ಮು. ೧೯೨೩) ಪುಟ- ೮

೫. ಅದಕ್ಕೆ ಮೊದಲೇ ರೆವೆರೆಂಡ್ ಕಿಟೆಲ್ ನಾಗವರ್ಮನ ಛಂದೋಬುಧಿಯ ಪೀಠಿಕಾ ಭಾಗದಲ್ಲಿ (೧೮೭೫) An alphabetical list of early authours ಪಟ್ಟಿಯೊಂದಿಗೆ Some shaiva pandits ಎಂಬ ಶೀರ್ಷಿಕೆಯಲ್ಲಿ ಬಸವಣ್ಣನ ಹೆಸರನ್ನು ಪ್ರಸ್ತಾಪಿಸಿದ್ದಾರೆ.

೬. ತೀನಂಶ್ರೀಯವರ ಭಾರತೀಯ ಕಾವ್ಯಮೀಮಾಂಸೆಯನ್ನು ಒಳಗೊಂಡಂತೆ ಅಂದಿನ ಎಲ್ಲ ವಿದ್ವಾಂಸರು ಸಾಹಿತ್ಯ ಎಂಬುದನ್ನು ನಿರ್ವಚಿಸಿಕೊಳ್ಳುತ್ತಿದ್ದ ಮಾದರಿ ಇದೇ ಆಗಿತ್ತು.

೭. ಎಂ. ಆರ್. ಶ್ರೀ-ವಚನಧರ್ಮಸಾರ-ಮುನ್ನುಡಿ- ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಮೈಸೂರು-೧೯೭೭ ( ಪ್ರ. ಮು ೧೯೪೪) ಪುಟ- ೭

೮. ಅದೇ-ಪುಟ - Vi ಮತ್ತು Vii

೯. ಎಂ. ಆರ್ ಶ್ರೀ ವಚನಧರ್ಮಸಾರ- ೧೯೭೭ ಈ ಪುಸ್ತಕದಲ್ಲಿಯೇ ವಚನಧರ್ಮವೂ ಸ್ತ್ರೀಯರೂ ಎಂಬ ಅಧ್ಯಾಯವೂ ಇದೆ.

೧೦. ಹಳಕಟ್ಟಿಯವರು ವಚನಗಳು ವೀರಶೈವ ಸಮಾಜದಲ್ಲಿ ಕೂಡ ಅವಜ್ಞೆಗೆ ಒಳಗಾಗಿದ್ದನ್ನು ಹೇಳುತ್ತಾರೆ. 'ಈಗಿನ ಕಾಲಕ್ಕೆ ಲಿಂಗಾಯಿತರಲ್ಲಿ ಈ ವಚನ ಗ್ರಂಥಗಳ ಬಗ್ಗೆ ಪೂಜ್ಯಭಾವವು ಹೋಗಿಬಿಟ್ಟಿರುತ್ತದೆ. ಇದು ಬಹುಖೇದ ಕರವಾದದ್ದು. ಈ ೫೦-೬೦ ವರ್ಷಗಳಿಂದ ಅವರ ಲಕ್ಷ್ಯವು ಸಂಸ್ಕೃತದ ಕಡೆಗೆ ಹೋಗಿರುತ್ತದೆ. ಆದರೆ ಉದಾತ್ತ ವಿಚಾರಗಳು ಕನ್ನಡದಲ್ಲಿದ್ದ ಮಾತ್ರದಿಂದ ಅವುಗಳ ಬೆಲೆಯು ಎಂದಿಗೂ ಕಡಿಮೆಯಾಗದು.' ಫ. ಗು ಹಳಕಟ್ಟಿ ವಚನ ಶಾಸ್ತ್ರಸಾರ -ಪ್ರಸ್ತಾವನೆ -೧೯೮೨ ಪುಟ ೧೯

೧೧. ಅ. ನ. ಕೃ ಅವರ ಸಜೀವ ಸಾಹಿತ್ಯ, ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ ಕೃತಿಗಳನ್ನು ನೋಡಬಹುದು.

೧೨. ಬರಹಗಾರರ ಒಕ್ಕೂಟ ಹಾಗು ಬಂಡಾಯ ಸಾಹಿತ್ಯ ಸಂಘಟನೆಗಳು

೧೩. ಸಂ. ಹಾ. ಮಾ ನಾಯಕ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೪. ಕನ್ನಡ ಅಧ್ಯಯನ ಸಂಸ್ಥೆ ಮೈಸೂರು -೧೯೭೭- ಪುಟ ೪೯೬

೧೪. ಗೊಗ್ಗವ್ವೆಯ ಹೆಸರಿನಲ್ಲಿ ಕೂಡ ಈ ವಚನವಿದೆ. ಈ ವಚನಕ್ಕೆ ಜೇಡರ ದಾಸಿಮಯ್ಯನ ವಚನಗಳು ಎಂಬ ಸಂಪಾದನಾ ಕೃತಿಯಲ್ಲಿ ಹೆಚ್. ದೇವಿರಪ್ಪ ಮತ್ತು ಆರ್ ರಾಜಪ್ಪನವರು ಗೊಗ್ಗವ್ವೆಯ ವಚನದಿಂದ ಪ್ರೇರಿತ ಎಂಬ ಅಡಿಟಿಪ್ಪಣಿಯನ್ನು ನೀಡುತ್ತಾರೆ. ಆದರೆ ಜೇಡರ ದಾಸಿಮಯ್ಯ ಆದಿ ವಚನಕಾರರೆಂದು ಪ್ರತಿಪಾದಿತ ನಾಗಿರುವುದು ಹಾಗು ಗೊಗ್ಗವ್ವೆಯ ಬಗ್ಗೆ ಹೆಚ್ಚಿನ ಸಂಶೋಧನೆ ನಡೆದಿಲ್ಲದ ಕಾರಣ ನಾನು ಜೇಡರ ದಾಸಿಮಯ್ಯನ ವಚನವೆಂದೇ ಸಧ್ಯಕ್ಕೆ ನಂಬುತ್ತೇನೆ.

೧೫. ಬರಗೂರು ರಾಮಚಂದ್ರಪ್ಪ (ಸಂ) ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ ಲೇ. ಆಧುನಿಕ ಪೂರ್ವ ಬರಹಗಾರ್ತಿಯರು ಒಂದು ಸ್ತ್ರೀವಾದಿ ದೃಷ್ಟಿಕೋನ- ಎಲ್. ಜಿ ಸರಸ್ವತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು- ೧೯೯೩- ಪುಟ- ೨೦

೧೬. ವಿಜಯಾದಬ್ಬೆ-ಮಹಿಳೆ ಸಾಹಿತ್ಯ ಮತ್ತು ಸಮಾಜ-ರಚನಾ ಪ್ರಕಾಶನ, ಮೈಸೂರು ೧೯೮೮-ಪುಟ -೨೫.



ಎಲ್ಲರ ಹೆಂಡಿರು ತೊಳಸಿಕ್ಕುವರು
ಎನ್ನ ಗಂಡಂಗೆ ತೊಳಸುವರಿಲ್ಲ
ಎಲ್ಲರ ಗಂಡಂದಿರಿಗೆ ಬಸಿವರು
ಎನ್ನ ಗಂಡಂಗೆ ಬಸಿವುದಿಲ್ಲ
ಎಲ್ಲರ ಗಂಡಂದಿರಿಗೆ ಬೀಜವುಂಟು
ಎನ್ನ ಗಂಡಂಗೆ ಅಂಡದ ಬೀಜವಿಲ್ಲ
ಎಲ್ಲರ ಗಂಡಂದಿರು ಮೇಲೆ
ಎನ್ನ ಗಂಡ ಕೆಳಗೆ ನಾ ಮೇಲೆ
ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರ

# ಅಭಿವೃದ್ಧಿ ಪ್ರಕ್ರಿಯೆಯ ಲಿಂಗಸಂಬಂಧಿ ಆಯಾಮಗಳು

**ಟಿ. ಆರ್. ಚಂದ್ರಶೇಖರ್**

ಅಭಿವೃದ್ಧಿ ಗತಿಶೀಲತೆಯನ್ನು ಒಂದು ಅಖಂಡ ಪ್ರಕ್ರಿಯೆಯಾಗಿ ಮತ್ತು ಲಿಂಗನಿರಪೇಕ್ಷ ನೆಲೆಯಲ್ಲಿ ಪರಿಭಾವಿಸಿಕೊಂಡು ಬರಲಾಗಿದೆ. ಅಭಿವೃದ್ಧಿಯ ಫಲಗಳು ಲಿಂಗಭೇದವೆಣಿಸದೆ ಎಲ್ಲರಿಗೂ ಸಮಾನವಾಗಿ ಒದಗುತ್ತವೆ ಎಂಬ ನಂಬಿಕೆಯು ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನದಲ್ಲಿ ಗಟ್ಟಿಯಾಗಿ ನೆಲೆಯೂರಿದೆ. ಈ ನಂಬಿಕೆ ಮತ್ತು ನಿಲುವುಗಳು ವ್ಯಾಪಕವಾಗಿ ಹಾಗೂ ಸೂಕ್ಷ್ಮವಾಗಿ ನೆಲೆಯೂರಿದುದರಿಂದ ಅಭಿವೃದ್ಧಿಗೆ ಸಂಬಂಧಿಸಿದ ನೀತಿ-ನಿರೂಪಣೆಗಳೂ ಸಹ ಲಿಂಗನಿರಪೇಕ್ಷ ನೆಲೆಯಲ್ಲೇ ರೂಪುತಳೆಯುತ್ತಾ ಬಂದಿವೆ. ಅಭಿವೃದ್ಧಿಯ ಸಂಕಥನವನ್ನು ಕಟ್ಟಿರುವ ಸಮಾಜ ವಿಜ್ಞಾನ ಶಿಸ್ತುಗಳೂ ಕೂಡ ಲಿಂಗ ನಿರಪೇಕ್ಷ ನಿಲುವು ತಳೆದಿದ್ದಾವೆ. ಒಟ್ಟಂದದಲ್ಲಿ ಅಭಿವೃದ್ಧಿಯನ್ನು ಒಂದು ಅಖಂಡ, ಏಕರೂಪ, ಲಿಂಗನಿರಪೇಕ್ಷ, ಮೌಲ್ಯ ನಿರಪೇಕ್ಷ ಪ್ರಕ್ರಿಯೆಯಾಗಿ ಪರಿಭಾವಿಸಿಕೊಂಡು ಬರಲಾಗಿದೆ.

ಆದರೆ ಇಂದು ಈ ಬಗೆಯ ಲಿಂಗ ನಿರಪೇಕ್ಷ ಅಭಿವೃದ್ಧಿ ವಿಚಾರ ಪ್ರಣಾಳಿಕೆ ತೀವ್ರತರನಾದ ಸವಾಲುಗಳನ್ನು ಎದುರಿಸುತ್ತಿದೆ. ಅಭಿವೃದ್ಧಿಯ ಅಖಂಡ ಹಾಗೂ ಲಿಂಗನಿರಪೇಕ್ಷ ನೆಲೆಗಳನ್ನು ತೀಕ್ಷ್ಣವಾಗ್ವಾದಕ್ಕೆ ಎಳೆಯಲಾಗುತ್ತಿದೆ. ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನದಲ್ಲಿ-ಸಿದ್ಧಾಂತಗಳಲ್ಲಿ, ಅಭಿವೃದ್ಧಿಗೆ ಸಂಬಂಧಿಸಿದ ನೀತಿ, ನಿರೂಪಣೆಗಳಲ್ಲಿ ಹಾಗೂ ಸಮಾಜ ವಿಜ್ಞಾನಗಳಲ್ಲಿ ಪುರುಷಶಾಹಿ ವಿಜೃಂಭಿಸುತ್ತಿರುವುದನ್ನು ಸ್ತ್ರೀವಾದಿಗಳು ತೋರಿಸುತ್ತಿದ್ದಾರೆ. ಈ ಚಿಕ್ಕ ಅಧ್ಯಯನ ಪ್ರಬಂಧದಲ್ಲಿ ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನದ ಲಿಂಗನಿರಪೇಕ್ಷ ನೆಲೆಗಳ ಇತಿ-ಮಿತಿಗಳನ್ನು, ಆ ವಿಚಾರ ಪ್ರಣಾಳಿಕೆಯಿಂದ ಉಂಟಾಗಿರುವ ವಿಕಾರ-ವಿಕೃತಿಗಳನ್ನು ಮಂಡಿಸುವುದರ ಜೊತೆಗೆ ಅಮರ್ತ್ಯಸೇನ್ ಹಾಗೂ ಮೆಹಬೂಬ್ ಉಲ್ ಹಕ್ ಅವರುಗಳು ಪ್ರತಿಪಾದಿಸುತ್ತಿರುವ ಮಾನವಮುಖಿ-ಲಿಂಗಸಾಪೇಕ್ಷ ಅಭಿವೃದ್ಧಿ ಸಂಕಥನದ ಸ್ವರೂಪವನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

ಅಮರ್ತ್ಯಸೇನ್ ಮತ್ತು ಮೆಹಬೂಬ್ ಉಲ್ ಹಕ್ ಅವರುಗಳ ಪ್ರಕಾರ ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನವು ವರಮಾನಮುಖಿ ಸ್ವರೂಪದ್ದಾಗಿದೆ. ಈ ಮೀಮಾಂಸೆಯು 'ಇರುವುದರ' ಬಗೆಗಿನ ಸಂಕಥನವಾಗಿದೆ. ಈ ಸಂಕಥನದಲ್ಲಿ 'ಇರುವುದು'-ಅಂದರೆ ವರಮಾನ ಹಾಗೂ ಉತ್ಪನ್ನಗಳ ಪ್ರಮಾಣ ಹಾಗೂ ಅವುಗಳ ಏರಿಕೆ

ಗತಿ ಅಭಿವೃದ್ಧಿಯ ಮಾನದಂಡಗಳಾಗಿವೆ. ಈ ಸಂಕಥನವು 'ಇರುವುದೆಲ್ಲವೂ' ಲಿಂಗಭೇದವೆಣಿಸದೆ ಎಲ್ಲರಿಗೂ 'ದೊರೆಗೊಳ್ಳುತ್ತದೆ' ಎಂದು ನಂಬುತ್ತದೆ. (ಸೇನ್ : ೧೯೮೫ ಹಕ್ : ೧೯೯೬)

ವಾಸ್ತವದಲ್ಲಿ ಇರುವುದೆಲ್ಲ-ಅಂದರೆ ವರಮಾನ ಮತ್ತು ಉತ್ಪನ್ನ ಲಿಂಗಭೇದವೆಣಿಸದೆ ಎಲ್ಲರಿಗೂ ಸರಿಸಮಾನವಾಗಿ ದೊರೆಯುತ್ತದೆ ಎಂಬುದಕ್ಕೆ ಪುರಾವೆಗಳನ್ನು ನೀಡುವುದು ಕಷ್ಟ. ಆದರೆ ಅಭಿವೃದ್ಧಿಯ ಫಲಗಳು ಲಿಂಗವಿಶಿಷ್ಟವಾಗಿರುತ್ತವೆ ಎಂಬುವುದಕ್ಕೆ ಸುಲಭವಾಗಿ ಪುರಾವೆಗಳನ್ನು ನೀಡಬಹುದು.

ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನವು 'ಆರ್ಥಿಕತೆ'ಯನ್ನು ಮತ್ತು 'ವ್ಯಕ್ತಿ'ಯನ್ನು ಮೂಲ ಘಟಕವನ್ನಾಗಿ ಮಾಡಿಕೊಂಡು ತನ್ನ ವಿಶ್ಲೇಷಣಾ ಜಾಲವನ್ನು ರಚಿಸಿಕೊಂಡಿದೆ. ಕೌಟುಂಬಿಕ ಸಂಬಂಧಗಳು ಹಾಗೂ ಕುಟುಂಬ ಘಟಕದ ನೆಲೆಗಳು ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನಕ್ಕೆ ಮುಖ್ಯವಾಗಿರಲಿಲ್ಲ. (ದಿವಾನ್, ೧೯೮೫). ಸಮಗ್ರೀಕೃತ ನೆಲೆಯಲ್ಲಿ ಹೇಗೋ ಅದೇ ರೀತಿ ಕುಟುಂಬದ ಮಟ್ಟದಲ್ಲೂ ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನವು ಲಿಂಗ ನಿರಪೇಕ್ಷವಾಗಿದೆ. ವಸ್ತುಸ್ಥಿತಿಯೇನೆಂದರೆ ಇಡೀ ಸಮಾಜದ ನೆಲೆಯಲ್ಲಿ ಹಾಗೂ ಕುಟುಂಬದ ನೆಲೆಯಲ್ಲಿ ಅಭಿವೃದ್ಧಿಯು ಲಿಂಗ ಸಾಪೇಕ್ಷವಾಗಿದೆ. ಎಲ್ಲ ಹಂತಗಳಲ್ಲೂ ಮತ್ತು ಎಲ್ಲಾ ಮುಖಗಳಲ್ಲೂ ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನವು ಪುರುಷಶಾಹಿತನದಿಂದ ಮೆರೆಯುತ್ತಿದೆ ಮತ್ತು ಅದು ಲಿಂಗಸಂಬಂಧಗಳ ಬಗ್ಗೆ ಕುರುಡಾಗಿದೆ.

ನಮ್ಮ ಸಮಾಜದ ಒಟ್ಟು ಜನಸಂಖ್ಯೆಯಲ್ಲಿ ಮತ್ತು ಒಟ್ಟು ಮತದಾರರಲ್ಲಿ ಸರಿಸುಮಾರು ಅರ್ಧದಷ್ಟಿರುವ ಮಹಿಳೆಯರು, ಇಡೀ ದೇಶದ ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ಸಂದ ಒಟ್ಟು ದುಡಿಮೆಯಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗವನ್ನು ನಿರ್ವಹಿಸುತ್ತಿದ್ದಾರೆ. ಆದರೆ ಅಭಿವೃದ್ಧಿಯು ಹರಿಯಬಿಡುವ ಫಲಗಳಲ್ಲಿ ಮಾತ್ರ ಇವರ ಪಾಲು ನಿಕೃಷ್ಟವಾದುದಾಗಿದೆ.

ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನವು ಮಹಿಳೆಯರನ್ನು ಕೇವಲ ಅಭಿವೃದ್ಧಿಯ ಫಲಗಳನ್ನು ಸ್ವೀಕರಿಸುವ ಘಟಕಗಳಾಗಿ ಮಾತ್ರ ನೋಡುತ್ತಾ ಬಂದಿವೆ. ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರವನ್ನು ಗುರುತಿಸಿ, ಅವರನ್ನು ಅಭಿವೃದ್ಧಿಯ ಫಲಾನುಭವಿಗಳನ್ನಾಗಿ ಮಾತ್ರ ಪರಿಭಾವಿಸಲಾಗಿದೆ. ಮಹಿಳೆಯರ ದುಡಿಮೆಯು ದುಡಿಮೆಯೆಂದು ಪರಿಗಣಿತವಾಗಿಲ್ಲ. ಪುರುಷನ ದುಡಿಮೆ ಮಾತ್ರ ದುಡಿಮೆಯೆಂದು, ಆತ ಮಾತ್ರ ದುಡಿಮೆಗಾರನೆಂದೂ ಪರಿಭಾವಿಸಲಾಗಿದೆ. (ದಿವಾನ್, ೧೯೮೫ : ೯೭) ಈ ಬಗೆಯ ಪರಿಭಾಷೆ ಹಾಗೂ ಪರಿಭಾವನೆಗಳಿಂದಾಗಿ ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನದಲ್ಲಿ ಮಹಿಳೆಯು ಅಪ್ರಧಾನಳೂ, ಅವಲಂಬಿತಳೂ ಆಗಿಬಿಟ್ಟಿದ್ದಾಳೆ. ಆಕೆಯ ದುಡಿಮೆಯು ಅಗೋಚರವೂ, ಅಮೂರ್ತವೂ, ಕ್ರಿಯರಹಿತವೂ ಆಗಿಬಿಟ್ಟಿದೆ. ಇವೆಲ್ಲ ಬೆಳವಣಿಗೆಗಳ ಫಲ ಸ್ವರೂಪವಾಗಿ ಅಭಿವೃದ್ಧಿ ಗತಿಶೀಲತೆಯಲ್ಲಿ ಲಿಂಗತಾರತಮ್ಯ ಹಾಗೂ

ತರತಮಗಳು ಅಂತರ್ಗತವಾಗಿ ಬಿಟ್ಟಿವೆ. ನಿದರ್ಶನವಾಗಿ ಸಾಕ್ಷರತೆಯಲ್ಲಿನ ಲಿಂಗತಾರತಮ್ಯವನ್ನು ನೋಡಬಹುದಾಗಿದೆ :

ಕರ್ನಾಟಕದಲ್ಲಿ ಮಹಿಳೆಯರ ಮತ್ತು ಪುರುಷರ ಸಾಕ್ಷರತಾ ಪ್ರಮಾಣ ೧೯೬೧ ರಲ್ಲಿ ಕ್ರಮವಾಗಿ ಶೇ ೧೪.೧೯ ಮತ್ತು ಶೇ ೩೬.೧೫ ರಷ್ಟಿತ್ತು. ಅಂದರೆ ೧೯೬೧ ರಲ್ಲಿ ಕರ್ನಾಟಕದಲ್ಲಿ ಮಹಿಳೆಯರ ಸಾಕ್ಷರತೆ ಪ್ರಮಾಣವು ಪುರುಷರ ಸಾಕ್ಷರತೆ ಪ್ರಮಾಣಕ್ಕಿಂತ ಶೇಕಡ ೨೧.೯೬ ಗುಣಗಳಷ್ಟು ಕಡಿಮೆ ಇತ್ತು. ೧೯೯೧ ರಲ್ಲಿ ಏನು ಸ್ಥಿತಿ ಇದೆ? ೧೯೯೧ ರಲ್ಲಿ ಕರ್ನಾಟಕದಲ್ಲಿ ಮಹಿಳೆಯರ ಸಾಕ್ಷರತೆಯು ಶೇ ೪೪.೩೪ ಮತ್ತು ಪುರುಷರ ಸಾಕ್ಷರತೆ ಶೇ ೬೭.೨೬ ರಷ್ಟಾಗಿದೆ. ಇಲ್ಲಿ ಮಹಿಳೆಯರ ಸಾಕ್ಷರತೆಯ ಪ್ರಮಾಣವು ಪುರುಷರ ಸಾಕ್ಷರತೆ ಪ್ರಮಾಣಕ್ಕಿಂತ ಶೇ ೨೨.೯೨ ಗುಣಗಳಷ್ಟು ಕಡಿಮೆ ಇದೆ. ೧೯೬೧ ರಿಂದ ೧೯೯೧ರ ಕಾಲಾವಧಿಯಲ್ಲಿ ಮಹಿಳೆಯರು ಮತ್ತು ಪುರುಷರ ನಡುವಿನ ಸಾಕ್ಷರತಾ ಅಂತರವು ಶೇಕಡ ೨೧.೯೬ ಗುಣಗಳಿಂದ ಶೇ. ೨೨.೯೨ ಗುಣಗಳಿಗೆ ಏರಿಕೆಯಾಗಿದೆ.

ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನದಲ್ಲಿ ಸಾಕ್ಷರತೆಯು ಅಭಿವೃದ್ಧಿಯ ಸಾಧನವಾಗಿ ಅಥವಾ ಉಪಕರಣವಾಗಿ ಮಾತ್ರ ಪರಿಗಣಿತವಾಗಿದೆ. ಆದರೆ ಸಾಕ್ಷರತೆಗೆ ಮನುಷ್ಯನ ಬದುಕಿನಲ್ಲಿ ಅಂತಸ್ಥವಾದ ಮಹತ್ವವಿದೆ ಎಂಬುದನ್ನು ಅಮರ್ತ್ಯಸೇನ್ ತೋರಿಸುತ್ತಿದ್ದಾರೆ. ಅವರು ಸಾಕ್ಷರತೆಯೇ ಅಭಿವೃದ್ಧಿ ಎಂದು ನಿರ್ವಚಿಸುತ್ತಾರೆ. ಅಕ್ಷರ ಜ್ಞಾನವು ತನ್ನಷ್ಟಕ್ಕೆ ತಾನೇ ಮಹತ್ವವಾದ ಸಂಗತಿಯಾಗಿದೆ. ಜನತೆಯ ಧಾರಣಶಕ್ತಿಯನ್ನು ನಿರ್ಧರಿಸುವ ಅನೇಕ ಅಂಶಗಳಲ್ಲಿ ಪ್ರಧಾನ ಸ್ಥಾನವನ್ನು ಅಮರ್ತ್ಯಸೇನ್ ಸಾಕ್ಷರತೆಗೆ ನೀಡುತ್ತಾರೆ. ಬದುಕನ್ನು ಉತ್ತಮವಾಗಿ ಸಾಗಿಸಲು ಇರುವ ಅವಕಾಶಗಳ ವರ್ಧನೆ ಹಾಗೂ ಆ ಅವಕಾಶಗಳಲ್ಲಿ ಆಯ್ಕೆಯ ವ್ಯಾಪ್ತಿಯ ವರ್ಧನೆಯನ್ನೇ ಧಾರಣಶಕ್ತಿ ಎಂದು ನಿರ್ವಚಿಸಲಾಗಿದೆ. (ಸೇನ್, ೧೯೯೫) ಬದುಕನ್ನು ಸಾಗಿಸಲು ಇರುವ ಅವಕಾಶಗಳಲ್ಲಿ ತನಗೆ ಇಷ್ಟವಾದುದನ್ನು ಆಯ್ಕೆ ಮಾಡಿಕೊಳ್ಳುವ ವ್ಯಕ್ತಿಯೊಬ್ಬನ ಸ್ವಾತಂತ್ರ್ಯ ಹಾಗೂ ಸಾಮರ್ಥ್ಯವೇ ಆತನ/ಆಕೆಯ ಧಾರಣಶಕ್ತಿಯಾಗಿದೆ. ಸಾಕ್ಷರತೆಯು ಜನಸಂಖ್ಯೆಯ ಬೆಳವಣಿಗೆ ಗತಿಯ ಮೇಲೆ ಅತ್ಯಂತ ಪರಿಣಾಮಕಾರಿ ಪ್ರಭಾವ ಬೀರುವ ಒಂದು ಸಾಧನವಾಗಿದೆ. ಅದರಲ್ಲೂ ಮಹಿಳೆಯರ ಸಾಕ್ಷರತೆ ಹಾಗೂ ಅದರಿಂದ ದತ್ತವಾಗುವ ಧಾರಣಶಕ್ತಿಯು ಜನನ ಪ್ರಮಾಣವನ್ನು ತಗ್ಗಿಸುವ ದಿಶೆಯಲ್ಲಿ ಮಹತ್ವದ ಪಾತ್ರ ವಹಿಸಬಲ್ಲುದಾಗಿದೆ. ಜನನ ಪ್ರಮಾಣಕ್ಕೆ -ಪ್ರಜನೋತ್ಪತ್ತಿ ವಿಷಯಕ್ಕೆ ಸಂಬಂಧಿಸಿದಂತೆ ನಿರ್ಣಯ ಕೈಗೊಳ್ಳುವ ಜವಾಬ್ದಾರಿಯಲ್ಲಿ ಮಹಿಳೆಯರು ಸಹಭಾಗಿಗಳಾಗುವ ಸಾಮರ್ಥ್ಯವನ್ನು ಸಾಕ್ಷರತೆ ಒದಗಿಸುತ್ತದೆ.

## ಲಿಂಗ ಪರಿಮಾಣ (Sex Ratio)

ಅಭಿವೃದ್ಧಿ ಪ್ರಕ್ರಿಯೆಯಲ್ಲಿ, ಲಿಂಗತಾರತಮ್ಯದ ಸ್ವರೂಪವನ್ನು ತೀವ್ರಗತಿಯಲ್ಲಿ ಇಳಿಮುಖವಾಗುತ್ತಿರುವ ಲಿಂಗ ಪರಿಮಾಣದಲ್ಲಿ ಕಾಣಬಹುದಾಗಿದೆ. (ಸೇನ್ ೧೯೮೮,

೧೯೯೩, ೧೯೯೫) ಅಮರ್ತ್ಯಸೇನ್ ರವರು ಸಮಾಜದಲ್ಲಿ ಆಳವಾಗಿ ಬೇರೂರಿರುವ ಲಿಂಗತಾರತಮ್ಯವನ್ನು ಲಿಂಗ ಪರಿಮಾಣದಲ್ಲಿ ಉಂಟಾಗುತ್ತಿರುವ ಗತಿಶೀಲ ಬದಲಾವಣೆಯಲ್ಲಿ ಗುರುತಿಸಲು ಬಯಸುತ್ತಾರೆ. ಒಂದು ದೇಶ ಯಾ ಪ್ರದೇಶದ ಒಟ್ಟು ಜನಸಂಖ್ಯೆಯಲ್ಲಿ ಸ್ತ್ರೀಯರು ಹಾಗೂ ಪುರುಷರುಗಳ ಸಂಖ್ಯೆಯು ನಡುವಿನ ಅನುಪಾತವನ್ನು ಲಿಂಗ ಪರಿಮಾಣ ಎಂದು ಕರೆಯಲಾಗಿದೆ. ಲಿಂಗ ಪರಿಮಾಣವನ್ನು ಪ್ರತಿ ಸಾವಿರ ಪುರುಷರಿಗೆ ಪ್ರತಿಯಾಗಿ ಇರುವ ಸ್ತ್ರೀಯರ ಸಂಖ್ಯೆಯು ರೂಪದಲ್ಲಿ ವ್ಯಕ್ತ ಪಡಿಸಲಾಗುತ್ತಿದೆ.

೧೯೫೧ರಲ್ಲಿ ಕರ್ನಾಟಕದ ಒಟ್ಟು ಜನಸಂಖ್ಯೆ ೧೯೪.೦೧ ಲಕ್ಷಗಳು. ಇದರಲ್ಲಿ ಸ್ತ್ರೀಯರ ಸಂಖ್ಯೆ ೯೫.೩೫ ಲಕ್ಷಗಳಾಗಿದ್ದರೆ ಪುರುಷರ ಸಂಖ್ಯೆ ೯೮.೬೬ ಲಕ್ಷಗಳು. ಅಂದ ಮೇಲೆ ೧೯೫೧ ರಲ್ಲಿ ಕರ್ನಾಟಕದಲ್ಲಿ ಪ್ರತಿ ಸಾವಿರ ಪುರುಷರಿಗೆ ಪ್ರತಿಯಾಗಿ ೯೬೬ ಸ್ತ್ರೀಯರಿದ್ದರು. ಆದರೆ ೧೯೯೧ರಲ್ಲಿ ರಾಜ್ಯದ ಒಟ್ಟು ಜನಸಂಖ್ಯೆ ೪೪೯.೭೭ ಲಕ್ಷಗಳು. ಇದರಲ್ಲಿ ಸ್ತ್ರೀಯರ ಸಂಖ್ಯೆ ೨೨೦.೨೫ ಲಕ್ಷವೂ ಪುರುಷರ ಸಂಖ್ಯೆ ೨೨೯.೫೦ ಲಕ್ಷವೂ ಆಗಿತ್ತು. ಇದರ ಪ್ರಕಾರ ೧೯೯೧ರಲ್ಲಿ ಲಿಂಗ ಪರಿಮಾಣ, ಅಂದರೆ ಪ್ರತಿ ಸಾವಿರ ಪುರುಷರಿಗೆ ಪ್ರತಿಯಾಗಿ ಇದ್ದ ಸ್ತ್ರೀಯರ ಪ್ರಮಾಣ ೯೬೦. ಹೀಗೆ ೧೯೫೧ ಮತ್ತು ೧೯೯೧ರ ಕಾಲಾವಧಿಯಲ್ಲಿ ಕರ್ನಾಟಕದಲ್ಲಿ ಲಿಂಗ ಪರಿಮಾಣವು ೯೬೬ ರಿಂದ ೯೬೦ಕ್ಕೆ ಇಳಿದಿದೆ. ಅಖಿಲ ಭಾರತ ಮಟ್ಟದಲ್ಲಿ ಲಿಂಗ ಪರಿಮಾಣವು ೧೯೫೧ರಿಂದ ೧೯೯೧ರ ಕಾಲಾವಧಿಯಲ್ಲಿ ೯೪೭ರಿಂದ ೯೨೯ಕ್ಕೆ ಕುಸಿದಿದೆ.

## ಕಳೆದು ಹೋಗುತ್ತಿರುವ ಸ್ತ್ರೀಯರು (missing Woman)

ಈ ಬಗೆಯ ಲಿಂಗ ಪರಿಮಾಣದಲ್ಲಿನ ಇಳಿಮುಖಗತಿಯು ಆತಂಕಕ್ಕೆ ಕಾರಣವಾಗಿದೆ. ಏಕೆಂದರೆ ಜೈವಿಕವಾಗಿ ಮಹಿಳೆಯರ ದೈಹಿಕ ಕ್ಷಮತೆ, ರೋಗ ನಿರೋಧಕ ಗುಣ ಹಾಗೂ ಪ್ರತಿಕೂಲ ಸನ್ನಿವೇಶದಲ್ಲೂ ಬದುಕುಳಿಯುವ ಸಾಮರ್ಥ್ಯವು ಪುರುಷರ ದೈಹಿಕ ಕ್ಷಮತೆ, ರೋಗ ನಿರೋಧಕ ಗುಣ ಹಾಗೂ ಪ್ರತಿಕೂಲ ಸನ್ನಿವೇಶದಲ್ಲೂ ಬದುಕುಳಿಯುವ ಸಾಮರ್ಥ್ಯಕ್ಕಿಂತ ಅಧಿಕವಾಗಿರುತ್ತದೆ. ಅಂದ ಮೇಲೆ ಲಿಂಗ ಪರಿಮಾಣವು ಸ್ತ್ರೀಯರಿಗೆ ಪರವಾಗಿಯೂ, ಅನುಕೂಲಕರವಾಗಿಯೂ ಇರಬೇಕು. ಆದರೆ ಲಿಂಗಪರಿಮಾಣವು ೧೯೦೧ ರಿಂದಲೂ ನಿರಂತರವಾಗಿ ಇಳಿಯುತ್ತಾ ನಡೆದಿದೆ. ಇದರಿಂದಾಗಿ ಭಾರತದ ಜನಸಂಖ್ಯೆಯಲ್ಲಿ ಸ್ತ್ರೀಯರು ಕಳೆದು ಹೋಗುತ್ತಿದ್ದಾರೆ. ಕರ್ನಾಟಕದಲ್ಲಿ ಒಂದು ವೇಳೆ ೧೯೯೧ರಲ್ಲಿ ಲಿಂಗ ಪರಿಮಾಣವು ೯೬೦ಕ್ಕೆ ಪ್ರತಿಯಾಗಿ ೧೯೫೧ ರಲ್ಲಿದ್ದ ೯೬೬ ಆಗಿದ್ದರೆ, ಆಗ ಕರ್ನಾಟಕದಲ್ಲಿ ೧೯೯೧ರಲ್ಲಿ ಮಹಿಳೆಯರ ಸಂಖ್ಯೆಯು ೨೨೦.೨೫ ಲಕ್ಷಗಳಿಗೆ ಪ್ರತಿಯಾಗಿ ೨೨೧.೭೧ ಲಕ್ಷಗಳಾಗಬೇಕಿತ್ತು. ಅಂದರೆ ಈ ಕಾಲಾವಧಿಯಲ್ಲಿ ಕರ್ನಾಟಕವು ಕಳೆದುಕೊಂಡ ಸ್ತ್ರೀಯರ ಪ್ರಮಾಣವು ೧.೪೬ ಲಕ್ಷ. ಇದೇ ರೀತಿ, ಇದೇ ಅವಧಿಯಲ್ಲಿ ಇಡೀ ಭಾರತವು ಕಳೆದುಕೊಂಡ ಸ್ತ್ರೀಯರ ಪ್ರಮಾಣ ೭೫ ಲಕ್ಷ. ಅಮರ್ತ್ಯಸೇನ್‌ರವರ ಪ್ರಕಾರ ಇದು ಸ್ತ್ರೀ-ಪುರುಷರ ನಡುವಿನ ಸಹಜ ಜೈವಿಕ

ಭಿನ್ನ ಸ್ವರೂಪಕ್ಕೆ ವ್ಯತಿರಿಕ್ತವಾದ ಬೆಳವಣಿಗೆಯಾಗಿದೆ. ಇಳಿಮುಖವಾಗುತ್ತಿರುವ ಲಿಂಗಪರಿಮಾಣ ಹಾಗೂ ಕಳೆದುಹೋಗುತ್ತಿರುವ ಸ್ತ್ರೀಯರು -ಇವುಗಳು ಅಭಿವೃದ್ಧಿ ಗತಿಶೀಲತೆಯಲ್ಲಿರುವ ಲಿಂಗ ತಾರತಮ್ಯದ ಸ್ವರೂಪವನ್ನು ಹಾಗೂ ಮಹಿಳೆಯರ ನಿಕೃಷ್ಟ ಸ್ಥಾನಮಾನವನ್ನು ಸೂಚಿಸುತ್ತವೆ.

## ಸ್ತ್ರೀಯರ ಮರಣ ಪ್ರಮಾಣ

ಮಾನವಮುಖಿ ಅಭಿವೃದ್ಧಿ (Human Development) ಸಂಕಥನದ ರೂವಾರಿಗಳಾದ ಅಮರ್ತ್ಯಸೇನ್ ಮತ್ತು ಮೆಹಬೂಬ್ ಉಲ್ ಹಕ್ ಅವರುಗಳು ಅಭಿವೃದ್ಧಿಯನ್ನು ವರಮಾನದ ವರ್ಧನೆಯ ನೆಲೆಯಲ್ಲಿ ಪರಿಭಾವಿಸುವುದಕ್ಕೆ ಪ್ರತಿಯಾಗಿ ಬದುಕುವ ಅವಕಾಶಗಳ ಹಾಗೂ ಆ ಅವಕಾಶಗಳಲ್ಲಿ ಆಯ್ಕೆಯ ವ್ಯಾಪ್ತಿಯ ವರ್ಧನೆಯ ನೆಲೆಯಲ್ಲಿ ನಿರ್ವಚಿಸುತ್ತಿದ್ದಾರೆ. ಜನರು 'ಏನಾಗಿದ್ದಾರೆ' ಮತ್ತು 'ಏನು ಮಾಡುತ್ತಿದ್ದಾರೆ' ಎಂಬ ಸಂಗತಿಗಳು ಅಭಿವೃದ್ಧಿಯ ದೃಷ್ಟಿಯಿಂದ ಮುಖ್ಯವಾಗಿದ್ದಾವೆ. ವರಮಾನದ ಪ್ರಮಾಣವೆಷ್ಟು ಮತ್ತು ವರಮಾನದ ಬೆಳವಣಿಗೆ ಗತಿ ಎಷ್ಟು ಎಂಬ ಸಂಗತಿಗಳು ಅಭಿವೃದ್ಧಿಯ ದೃಷ್ಟಿಯಿಂದ ಮಹತ್ವವಾಗಿದ್ದರೂ ಸಹ ಅವೇ ಅಭಿವೃದ್ಧಿಯಲ್ಲ ಎಂದು ಮಾನವಮುಖಿ ಸಂಕಥನವು ಪ್ರತಿಪಾದಿಸುತ್ತದೆ. ವರಮಾನದ ಪ್ರಮಾಣ ಹಾಗೂ ಅದರ ಬೆಳವಣಿಗೆ ಗತಿ-ಇವು ಅಭಿವೃದ್ಧಿಯಲ್ಲಿ ಉಪಕರಣವಾದಿ (instrumental) ಮಹತ್ವ ಹೊಂದಿದ್ದಾವೆ ವಿನಾ ಅಭಿವೃದ್ಧಿಯ ಅಂತಸ್ಥ (intrinsic) ಗುಣವಾಗುವುದಿಲ್ಲ. ಸಾಂಪ್ರದಾಯಿಕ ಅಭಿವೃದ್ಧಿ ಸಂಕಥನವು ಅಭಿವೃದ್ಧಿಯ ಲಿಂಗಸ್ವರೂಪದ ಬಗ್ಗೆ ಕುರುಡಾಗಿದ್ದರೆ ಮಾನವಮುಖಿ ಅಭಿವೃದ್ಧಿ ಸಂಕಥನವು ಲಿಂಗ ಸಂಬಂಧಗಳ ಬಗ್ಗೆ ಸಂವೇದನಾಶೀಲವಾಗಿದೆ.

ಒಂದು ಸಮಾಜದಲ್ಲಿ ಜನರ ಮರಣ ಪ್ರಮಾಣ ಹಾಗೂ ಜನರ ಸರಾಸರಿ ಆಯಸ್ಸು-ಇವು ಜನ ಸಮುದಾಯದ ಬದುಕು ಉತ್ತಮವಾಗಿದೆಯೋ ಅಥವಾ ಇಲ್ಲವೋ ಎಂಬುದರ ಮಾಪಕವಾಗಿದೆ ಎನ್ನುತ್ತಾರೆ ಅಮರ್ತ್ಯಸೇನ್ (೧೯೯೩). ಮರಣ ಪ್ರಮಾಣದಲ್ಲಿನ ವಿವರಗಳನ್ನು ಇವರು ಅಭಿವೃದ್ಧಿಯ ಮಾನದಂಡವಾಗಿಯೂ ಮತ್ತು ಲಿಂಗಸಂಬಂಧಿ ತಾರತಮ್ಯದ ಸೂಚ್ಯಂಕವಾಗಿಯೂ ಬಳಸುತ್ತಾರೆ. ಮರಣ ಪ್ರಮಾಣದ ವಿವರಗಳು ಜನರ ಬದುಕಿನ ಅಂತಸ್ಥಗುಣದ ಧ್ಯೋತ್ಮಕವಾಗಿವೆ. ಅಭಿವೃದ್ಧಿಯನ್ನು ಉಪಕರಣವಾದಿ ನೆಲೆಯಲ್ಲಿ ಪರಿಭಾವಿಸುವುದಕ್ಕೆ ಪ್ರತಿಯಾಗಿ ಅಂತಸ್ಥವಾದಿ ನೆಲೆಯಲ್ಲಿ ಪರಿಭಾವಿಸುವ ಮಾನವಮುಖಿ ಅಭಿವೃದ್ಧಿ ಸಂಕಥನದಲ್ಲಿ ಮರಣ ಪ್ರಮಾಣದ ಗತಿಶೀಲತೆ ಮಹತ್ವದ್ದಾಗಿ ಬಿಡುತ್ತದೆ.

ಸ್ವಾತಂತ್ರ್ಯಾನಂತರ ಕರ್ನಾಟಕದಲ್ಲಿ, ಅದೇ ರೀತಿ ಭಾರತದಲ್ಲಿ ಮರಣ ಪ್ರಮಾಣವು ತೀವ್ರಗತಿಯಲ್ಲಿ ಇಳಿಮುಖವಾಗುತ್ತಾ ನಡೆದಿವೆ. ಜನರ ಸರಾಸರಿ ಆಯಸ್ಸು ಕೂಡ ಈ ಅವಧಿಯಲ್ಲಿ ಅಧಿಕಗೊಂಡಿದೆ. ಮಹಿಳೆಯರ ಸರಾಸರಿ ಆಯಸ್ಸು ಕೂಡಾ ೧೯೫೧ ರಿಂದ ೧೯೯೦ ಕಾಲಾವಧಿಯಲ್ಲಿ, ಅಖಿಲಭಾರತ ಮಟ್ಟದಲ್ಲಿ ೩೧.೬೬ ವರ್ಷಗಳಿಂದ ೬೩.೬

ವರ್ಷಗಳಿಗೆ ಏರಿಕೆಯಾಗಿದ್ದರೆ ಪುರುಷರ ಸರಾಸರಿ ಆಯಸ್ಸು ಇದೇ ಅವಧಿಯಲ್ಲಿ ೩೨.೪೫ ವರ್ಷಗಳಿಂದ ೬೦.೦ ವರ್ಷಗಳಿಗೆ ಏರಿಕೆಯಾಗಿದೆ. ಆರೋಗ್ಯ, ಅಕ್ಷರ, ಆಹಾರ, ಆವಾಸ ಮುಂತಾದವುಗಳಲ್ಲಿ ಉಂಟಾದ ಸುಧಾರಣೆ ಪರಿಣಾಮವಾಗಿ ಮರಣ ಪ್ರಮಾಣವು ರಾಷ್ಟ್ರೀಯ ಮಟ್ಟದಲ್ಲಿ ಕನಿಷ್ಟತಮ ಮಟ್ಟಕ್ಕೆ ಇಳಿದಿದೆ. ಅಖಿಲ ಭಾರತಮಟ್ಟದಲ್ಲಿ ಪ್ರತಿ ಸಾವಿರ ಜನರಲ್ಲಿ ವಾರ್ಷಿಕ ಮರಣ ಹೊಂದುತ್ತಿದ್ದವರ ಸಂಖ್ಯೆ ೧೯೫೧ ರಲ್ಲಿ ೨೭.೪ ಇದ್ದುದು ೧೯೯೦ ರಲ್ಲಿ ೯.೮ ಕ್ಕೆ ಇಳಿದಿದೆ. ಕರ್ನಾಟಕದಲ್ಲಿ ೧೯೬೧ರಲ್ಲಿ ಪ್ರತಿ ಸಾವಿರ ಜನರಲ್ಲಿ ವಾರ್ಷಿಕ ಮರಣವನ್ನಪ್ಪುತ್ತಿದ್ದವರ ಸಂಖ್ಯೆ ೨೨. ಇದು ೧೯೯೦ ರಲ್ಲಿ ೮.೫ಕ್ಕೆ ಇಳಿದಿದೆ. ಇದೊಂದು ಹೆಮ್ಮೆಪಟ್ಟುಕೊಳ್ಳಬಹುದಾದ ಸಾಧನೆಯಾಗಿದೆ. ಅಮರ್ತ್ಯಸೇನ್ ಅವರು ಮರಣ ಪ್ರಮಾಣದ ಈ ಬಗೆಯ ಸಮಗ್ರೀಕೃತ ಸ್ವರೂಪವನ್ನು ಪರಿಗಣಿಸುವುದಕ್ಕೆ ಪ್ರತಿಯಾಗಿ, ಇಡಿಯಾಗಿ ನೋಡುವುದಕ್ಕೆ ಪ್ರತಿಯಾಗಿ ಬಿಡಿಯಾಗಿ, ಅದರ ಒಳಸುಳಿಗಳನ್ನು ಲಿಂಗವಾರು ನೆಲೆಯಲ್ಲಿ ಪೃಥಕ್ಕರಿಸಲು ಪ್ರಯತ್ನಿಸುತ್ತಾರೆ.

ವಿವಿಧ ವಯೋಮಾನ ಗುಂಪುಗಳಿಗೆ ಸಂಬಂಧಿಸಿದಂತೆ ಮರಣ ಪ್ರಮಾಣದ ವಿವರಗಳನ್ನು ಲಿಂಗವಾರು ಪಟ್ಟಿ-೧ ರಲ್ಲಿ ಮಂಡಿಸಿದೆ. ಈ ಪಟ್ಟಿಯಲ್ಲಿ ಮರಣ ಪ್ರಮಾಣದ ವಿವರಗಳನ್ನು ಕರ್ನಾಟಕ ಹಾಗೂ ಅಖಿಲ ಭಾರತಕ್ಕೆ ಸಂಬಂಧಿಸಿದಂತೆ ಮಂಡಿಸಲಾಗಿದೆ.

ಕರ್ನಾಟಕವನ್ನೂ, ಕೇರಳವನ್ನೂ ಸೇರಿಸಿಕೊಂಡು ಭಾರತದ ಎಲ್ಲಾ ರಾಜ್ಯಗಳಲ್ಲೂ ೫ ರಿಂದ ೩೪ ವರ್ಷಗಳ ವಯೋಮಾನ ಗುಂಪಿನಲ್ಲಿ ಸ್ತ್ರೀಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಅಧಿಕವಿರುವುದು ಆತಂಕಕಾರಿ ಸಂಗತಿಯಾಗಿದೆ.

**ಪಟ್ಟಿ - ೧**

**ವಿವಿಧ ವಯೋಮಾನ ಗುಂಪುಗಳಲ್ಲಿ ಲಿಂಗವಾರು ಮರಣ ಪ್ರಮಾಣ : ೧೯೯೨**

| ಕ್ರಮ ಸಂಖ್ಯೆ | ವಯೋಮಾನ ಗುಂಪುಗಳು ವರ್ಷಗಳಲ್ಲಿ | ಕರ್ನಾಟಕ | | | ಭಾರತ | | |
|---|---|---|---|---|---|---|---|
| | | ಒಟ್ಟು | ಪುರುಷರು | ಸ್ತ್ರೀಯರು | ಒಟ್ಟು | ಪುರುಷರು | ಸ್ತ್ರೀಯರು |
| ೧ | ೨ | ೩ | ೪ | ೫ | ೬ | ೭ | ೮ |
| ೧. | ೦-೪ | ೨೧.೬ | ೨೨.೬ | ೨೦.೭ | ೨೬.೫ | ೨೪.೯ | ೨೮.೨ |
| ೨. | ೫-೩೪ | ೧.೮೦ | ೧.೬೫ | ೧.೯೦ | ೨.೪೫ | ೨.೧೫ | ೨.೭೫ |
| ೩. | ೩೫-೪೯ | ೪.೫ | ೫.೦೦ | ೪.೦೦ | ೫.೩ | ೬.೦ | ೪.೫ |
| ೪. | ೫೦ | ೩೨.೧ | ೩೮.೨ | ೨೬.೧ | ೩೩.೪ | ೩೫.೫ | ೩೧.೪ |
| ೫. | ಎಲ್ಲಾ ವಯೋಮಾನ ಗುಂಪುಗಳು | ೮.೫ | ೯.೩ | ೭.೭ | ೧೦.೧೦ | ೧೦.೦೦ | ೧೦.೨೦ |

ಮೂಲ : Sample Registration System 1992.

ಒಂದು ನಿರ್ದಿಷ್ಟ ವಯೋಮಾನ ಗುಂಪಿನಲ್ಲಿ ಮಾತ್ರ ಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆ ಲಿಂಗತಾರತಮ್ಯವು ಸ್ಪಷ್ಟವಾಗಿ ಕಂಡು ಬರುತ್ತಿದೆ. ಅಖಿಲ ಭಾರತ ಮಟ್ಟದಲ್ಲಿ ಎಲ್ಲಾ ವಯೋಮಾನದವರನ್ನು ಇಡಿಯಾಗಿ (ಪಟ್ಟಿಯಲ್ಲಿ ಸಾಲು ೫ : ಅಂಕಣ ೭ ಮತ್ತು ೮) ಗಮನಿಸಿದಾಗ ಮಹಿಳೆಯರ ಮರಣ ಪ್ರಮಾಣವು (೧೦.೨೦) ಪುರುಷರ ಮರಣ ಪ್ರಮಾಣಕ್ಕಿಂತ (೧೦.೧೦) ಅಧಿಕವಿರುವುದು ತಿಳಿಯುತ್ತದೆ. ಆದರೆ ಕರ್ನಾಟಕದಲ್ಲಿ ಎಲ್ಲಾ ವಯೋಮಾನದವರನ್ನೂ ಇಡಿಯಾಗಿ ಗಮನಿಸಿದಾಗ ಪುರುಷರ ಮರಣ ಪ್ರಮಾಣವು (೯.೩) ಮಹಿಳೆಯರ ಮರಣ ಪ್ರಮಾಣಕ್ಕಿಂತ (೭.೭) ಅಧಿಕವಿರುವುದು ತಿಳಿಯುತ್ತದೆ. ಮರಣ ಪ್ರಮಾಣದಲ್ಲಿನ ಲಿಂಗಸ್ವರೂಪವನ್ನು ಇಡಿಯಾಗಿ ಗಮನಿಸಿದಾಗ ಕರ್ನಾಟಕದ ಸಾಧನೆಯು ಅಖಿಲಭಾರತ ಮಟ್ಟದ ಸಾಧನೆಗಿಂತ ಉತ್ತಮವಾಗಿದೆ. ಆದರೆ ಪಟ್ಟಿ-೧ರಲ್ಲಿ ತೋರಿಸಿರುವಂತೆ ೫ ರಿಂದ ೩೪ ವರ್ಷಗಳ ವಯೋಮಾನ ಗುಂಪಿನಲ್ಲಿ ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಕರ್ನಾಟಕ ಮತ್ತು ಅಖಿಲಭಾರತ ಮಟ್ಟದಲ್ಲಿ ಕ್ರಮವಾಗಿ ಶೇ. ೧೫.೧೫ ಮತ್ತು ಶೇ. ೨೯.೯೦ರಷ್ಟು ಅಧಿಕವಿರುವುದು ಕಂಡುಬರುತ್ತದೆ. ಒಂದು ನಿರ್ದಿಷ್ಟ ವಯೋಮಾನ ಗುಂಪಿನಲ್ಲಿ ಮಾತ್ರ ಯಾಕೆ ಮರಣ ಪ್ರಮಾಣದಲ್ಲಿ ಲಿಂಗತಾರತಮ್ಯ ತೀವ್ರ ಸ್ವರೂಪದಲ್ಲಿ ಕಂಡು ಬರುತ್ತಿದೆ? ವಾಸ್ತವವಾಗಿ ಮರಣ ಪ್ರಮಾಣದಲ್ಲಿನ ಲಿಂಗತಾರತಮ್ಯವು ಬಹಳ ಹಿಂದಿನಿಂದಲೂ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿರುವ ಸಂಗತಿಯಾಗಿದೆ. ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನವು ಈ ಬಗೆಯ ಲಿಂಗಸಂಬಂಧಗಳ ವಿಕೃತಿಗಳ ಕಡೆ ಕಣ್ಣು ಹಾಯಿಸಲಿಲ್ಲ. ಸಹಜವಾಗಿ ಅಭಿವೃದ್ಧಿಗೆ ಸಂಬಂಧಿಸಿದ ನೀತಿ-ನಿರೂಪಣೆಗಳಲ್ಲೂ ಸಹ ಈ ವಿಕಾರಗಳನ್ನು ಸರಿಪಡಿಸುವ ಕ್ರಮಗಳು ಸೇರಿಕೊಳ್ಳಲಿಲ್ಲ. ಕೇಂದ್ರ ಸರ್ಕಾರದ ಅಥವಾ ಕರ್ನಾಟಕ ಸರಕಾರದ ಆರೋಗ್ಯ ನೀತಿ ಕಾರ್ಯಕ್ರಮಗಳಲ್ಲಿ ಮೇಲೆ ತಿಳಿಸಿದ ವಿಶಿಷ್ಟ ಸಂಗತಿ ಬಗ್ಗೆ ವಿಶೇಷ ಆದ್ಯತೆ-ಗಮನ ನೀಡಿರುವ ಸಂಗತಿ ಕಂಡುಬರುತ್ತಿಲ್ಲ. ಚಳುವಳಿ ಅಥವಾ ಅಭಿಯಾನ ರೂಪದಲ್ಲಿ ಈ ವಯೋಮಾನಗುಂಪಿನಲ್ಲಿ ಕಂಡುಬರುತ್ತಿರುವ ಅಧಿಕ ಪ್ರಮಾಣದ ಮಹಿಳೆಯರ ಮರಣಗಳನ್ನು ನಿಯಂತ್ರಿಸುವ ಕಾರ್ಯಕ್ರಮವನ್ನು ಸಂಘಟಿಸುವ ಅಗತ್ಯವಿದೆ. ಈ ಬಗ್ಗೆ ಸಮಾಜದಲ್ಲಿ ಜಾಗೃತಿ ಮೂಡಿಸುವ ಅಗತ್ಯವಿದೆ.

ಅಮರ್ತ್ಯಸೇನ್‌ರ (೧೯೯೫) ಪ್ರಕಾರ ಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆ ಒಂದು ನಿರ್ದಿಷ್ಟ ವಯೋಮಾನ ಗುಂಪಿನಲ್ಲಿ ತೀವ್ರವಾಗಿ ಕಂಡು ಬರುತ್ತಿರುವ ಸ್ತ್ರೀಯರು ಮತ್ತು ಪುರುಷರ ನಡುವಿನ ವ್ಯತ್ಯಾಸವು ಎರಡು ಸಂಗತಿಗಳನ್ನು ಸ್ಪಷ್ಟವಾಗಿ ತೋರಿಸುತ್ತಿವೆ.

೧. ಇದು ಸ್ತ್ರೀಯರ ಬಗ್ಗೆ ಸಮಾಜವು ತಳೆದ ತಾರತಮ್ಯ ಮನೋಭಾವವನ್ನು ಮತ್ತು ಸ್ತ್ರೀಯರಿಗೆ ಸಮಾಜವು ನೀಡಿರುವ ನಿಕೃಷ್ಟ ಸ್ಥಾನಮಾನಗಳನ್ನು ಸೂಚಿಸುತ್ತದೆ.

೨. ಇದು ನಮ್ಮ ಸಮಾಜದಲ್ಲಿ ಮಹಿಳೆಯರು, ಅದರಲ್ಲೂ ಹದಿಹರೆಯದ ಹೆಣ್ಣು ಮಕ್ಕಳು ಎದುರಿಸುತ್ತಿರುವ ಹಾಗೂ ಅವರು ಅನುಭವಿಸುತ್ತಿರುವ ತೀವ್ರ ಸ್ವರೂಪದ

ಹಿಂಸೆ, ನಿರ್ಲಕ್ಷ್ಯ, ನೋವು, ದಮನಗಳನ್ನು ಅಪ್ರತ್ಯಕ್ಷವಾಗಿ ಸೂಚಿಸುತ್ತಿದೆ.

ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಪುರುಷರಿಗೆ ಸರಿಸಮಾನವಾದ ಸ್ಥಾನಮಾನ ಹಾಗೂ ಧಾರಣಶಕ್ತಿ ಮಹಿಳೆಯರಿಗೂ ದೊರೆತ ಪಕ್ಷದಲ್ಲಿ ಸ್ತ್ರೀಯರ ಮರಣ ಪ್ರಮಾಣವು ಎಲ್ಲ ವಯೋಮಾನ ಗುಂಪುಗಳಲ್ಲೂ ಪುರುಷರ ಮರಣ ಪ್ರಮಾಣಕ್ಕಿಂತ ಕಡಿಮೆ ಇರಬೇಕು ಮತ್ತು ಲಿಂಗಪರಿಮಾಣವು ಸ್ತ್ರೀಯರ ಪರವಾಗಿ ಮತ್ತು ಅನುಕೂಲಕರವಾಗಿರಬೇಕು. ಆದರೆ ವಾಸ್ತವವಾಗಿ ಲಿಂಗಪರಿಮಾಣವು ಸ್ತ್ರೀಯರಿಗೆ ಪ್ರತಿಕೂಲವಾಗಿದೆ. ಮರಣ ಪ್ರಮಾಣದಲ್ಲಿನ ಲಿಂಗತಾರತಮ್ಯ ಹಾಗೂ ಸ್ತ್ರೀಯರಿಗೆ ಪ್ರತಿಕೂಲವಾಗಿರುವ ಲಿಂಗಪರಿಮಾಣಗಳು ಸಮಾಜದಲ್ಲಿ ಆಳವಾಗಿ ಬೇರೂರಿರುವ ಲಿಂಗಸಂಬಂಧಿ ತರತಮಗಳನ್ನು ತೋರಿಸುತ್ತಿವೆ.

## ತಾಯಂದಿರ ಮರಣ ಪ್ರಮಾಣ

ಮಹಿಳೆಯರ ಪ್ರಜನೋತ್ಪತ್ತಿ ಅವಧಿಯು ೧೫ ರಿಂದ ೪೫ ವರ್ಷಗಳ ನಡುವಿನ ೩೦ ವರ್ಷಗಳು ಎನ್ನಲಾಗಿದೆ. ಈ ೩೦ ವರ್ಷಗಳ ಪ್ರಜನೋತ್ಪತ್ತಿ ಅವಧಿಯ ಮೊದಲ ೧೫ ವರ್ಷಗಳು ಹೆಚ್ಚು ಉತ್ಪನ್ನಕಾರಕವಾಗಿರುತ್ತವೆ ಎಂಬುದು ಅಧ್ಯಯನಗಳಿಂದ ತಿಳಿದು ಬಂದಿದೆ. ಅಂದ ಮೇಲೆ ಮಹಿಳೆಯರ ಬದುಕಿನಲ್ಲಿ ೧೫ರಿಂದ ೩೪ ವರ್ಷಗಳ ವಯೋಮಾನ ತುಂಬಾ ಆಯಕಟ್ಟಿನದಾಗಿದೆ. ನಮ್ಮ ಸಮಾಜದಲ್ಲಿ ಹೆರಿಗೆ ಸಮಯದಲ್ಲಿ ಉಂಟಾಗುವ ತೊಂದರೆಗಳಿಂದ ಸಾವಿಗೀಡಾಗುವ ತಾಯಂದಿರ ಪ್ರಮಾಣ ಅತ್ಯಧಿಕ. ಹೆರಿಗೆ ಸಂದರ್ಭದಲ್ಲಿ ಉಂಟಾಗುವ ತೊಂದರೆಗಳಿಂದ ಸಾವಿಗೀಡಾಗುವ ಸಂಖ್ಯೆ ೧೯೮೭-೮೮ ರ ಅವಧಿಯಲ್ಲಿ, ಪ್ರತಿ ಲಕ್ಷ ಜನನಕ್ಕೆ ಕೇರಳ ರಾಜ್ಯದಲ್ಲಿ ೨೩೪ ಇದ್ದರೆ ಕರ್ನಾಟಕದಲ್ಲಿ ೪೧೫ ಮತ್ತು ಅಖಿಲ ಭಾರತಮಟ್ಟದಲ್ಲಿ ಅದು ೫೫೫. ಹೆರಿಗೆ ತೊಂದರೆಗಳಿಂದ ಉಂಟಾಗುತ್ತಿರುವ ತಾಯಂದಿರ ಸಾವುಗಳು ಅಕಾಲಿಕ ಹಾಗೂ ಅನಾವಶ್ಯಕ. ಈ ಸಾವುಗಳು ನಿವಾರಿಸಲು ಸಾಧ್ಯವಿಲ್ಲದ ಸಾವುಗಳೇನಲ್ಲ. ಈ ಅನಾವಶ್ಯಕ ಸಾವುಗಳು ಸಮಾಜವು ಮಹಿಳೆಯರ ಬಗ್ಗೆ ತಳೆದಿರುವ ದಿವ್ಯ ನಿರ್ಲಕ್ಷ್ಯದ ಸಂಕೇತಗಳಾಗಿವೆ.

## ತ್ರಿರೂಪಿ ದುಡಿಮೆ ಭಾರ

ನಮ್ಮ ಸಮಾಜದಲ್ಲಿ ಮಹಿಳೆಯರು ಭರಿಸುತ್ತಿರುವ ದುಡಿಮೆಯ ಪ್ರಮಾಣ ಹಾಗೂ ಅದಕ್ಕೆ ಸಂಬಂಧಿಸಿದ ಹೊರೆ ಹಾಗೂ ಹೊಣೆಗಳು ಪುರುಷ ವರ್ಗಕ್ಕಿಂತ ಅಧಿಕವಾಗಿರುವುದು ಅಧ್ಯಯನಗಳಿಂದ ದೃಢಪಟ್ಟಿವೆ. (ಬ್ಲೂಮ್ ಬರ್ಗ್, ೧೯೮೯) ಮಹಿಳೆಯರು ಮೂರು ರೀತಿಯ ದುಡಿಮೆಯನ್ನು ನಿರ್ವಹಿಸುತ್ತಿದ್ದಾರೆ :

### ೧. ಪ್ರಜನೋತ್ಪತ್ತಿ ದುಡಿಮೆ

ಸ್ತ್ರೀಯರಿಗೆ ವಿಶಿಷ್ಟವಾದ ದುಡಿಮೆ ಇದು. ಮಗುವನ್ನು ಒಂಭತ್ತು ತಿಂಗಳು

ಹೊಟ್ಟೆಯಲ್ಲಿಟ್ಟುಕೊಂಡು ಪೋಷಿಸುವುದು. ನವಮಾಸದ ತರುವಾಯ ಅದಕ್ಕೆ ಜನ್ಮ ನೀಡುವುದು, ಅದರ ಪಾಲನೆಲಾಲನೆ, ಅದಕ್ಕೆ ಎದೆ ಹಾಲುಣಿಸುವುದು.

**೨. ಕೌಟುಂಬಿಕ ದುಡಿಮೆ**

ಸ್ತ್ರೀಯರಿಗೆಂದೆ ಸಮಾಜವು ಮೀಸಲಿಟ್ಟ ದುಡಿಮೆ. ಗೃಹವಾರ್ತೆ ದುಡಿಮೆ. ಉರವಲು ಶೇಖರಿಸುವುದು, ನೀರು ಸಂಗ್ರಹಿಸುವುದು, ಅಡಿಗೆ ಮನೆ ಕಾರ್ಯಭಾರ, ಧವಸ-ಧಾನ್ಯಗಳ ಶೇಖರಣೆ, ಒಕ್ಕಣಿಕೆ, ಸ್ವಂತ ಹೊಲ-ಗದ್ದೆಗಳಲ್ಲಿ ದುಡಿಯುವುದು-ಇತ್ಯಾದಿ.

**೩. ಉತ್ಪಾದನಾ ದುಡಿಮೆ**

ಕುಟುಂಬದ ಹೊರಗೆ ದುಡಿಯುವುದು. ಕುಟುಂಬದ ನಿರ್ವಹಣೆಗಾಗಿ, ವರಮಾನಗಳಿಸುವುದಕ್ಕಾಗಿ ಕೂಲಿ-ನಾಲಿ ಮಾಡುವುದು, ನೌಕರಿ ಮಾಡುವುದು.

ಈ ತ್ರಿರೂಪಿ ದುಡಿಮೆಗಳಲ್ಲಿ ಕುಟುಂಬದ ಹೊರಗೆ, ಕೂಲಿ-ನಾಲಿಗಾಗಿ ಮಾಡುವ ದುಡಿಮೆ ಮಾತ್ರ ಆರ್ಥಿಕ ಗಣನೆಗೆ ಸೇರುತ್ತದೆ. ಮೊದಲೆರಡು ಬಗೆಯ ದುಡಿಮೆಗಳು ಆರ್ಥಿಕವಾಗಿಯಾಗಲಿ, ಗಾತ್ರನಿಷ್ಠವಾಗಿಯಾಗಲಿ ಮಹತ್ವ ಪಡೆದಿಲ್ಲ. ಇದರಿಂದಾಗಿ ಮಹಿಳೆಯರ ದುಡಿಮೆಯೂ, ದೈಹಿಕಶ್ರಮವೂ ಅಗೋಚರವಾಗಿಯೂ, ಅಮೂರ್ತವಾಗಿಯೂ, ಕ್ರಿಯರಹಿತವಾಗಿಯೂ ಕಂಡುಬರುತ್ತದೆ.

ಪ್ರಜನೋತ್ಪತ್ತಿ ದುಡಿಮೆಯು ಸ್ತ್ರೀಯರಿಗೆ ಮೀಸಲಾದ ಒಂದು ದುಡಿಮೆ. ಜೈವಿಕ ವಿಶಿಷ್ಟತೆಯಿಂದಾಗಿ ಈ ದುಡಿಮೆಯನ್ನು ಸ್ತ್ರೀಯರೇ ನಿರ್ವಹಿಸಬೇಕಾಗಿದೆ. ಆದರೆ ಶಿಶುಗಳ ಲಾಲನೆ-ಪಾಲನೆಗಳಿಗೆ ಸಂಬಂಧಿಸಿದ ಕಾರ್ಯಭಾರವನ್ನು ಪುರುಷರು ಹಂಚಿಕೊಳ್ಳಬಹುದಾಗಿದೆ. ಜೈವಿಕ ವಿಶಿಷ್ಟತೆಯನ್ನು ಮುಂದುಮಾಡಿಕೊಂಡು ಪ್ರಜನೋತ್ಪತ್ತಿಗೆ ಸಂಬಂಧಿಸಿದ ಎಲ್ಲಾ ಹೊಣೆಗಳನ್ನೂ ಮಹಿಳೆಯರಿಗೆ ವಿಧಿಸುವುದು ಪುರುಷಶಾಹಿಯ ವಿಜೃಂಭಣೆಯಾಗಿ ಮಾತ್ರ ಕಾಣುತ್ತದೆ.

ಇದೇ ರೀತಿ ಕೌಟುಂಬಿಕ ದುಡಿಮೆಯಲ್ಲೂ ಸಹ ಪುರುಷರು ಮಹಿಳೆಯರ ಜೊತೆ ಸಮಪಾಲು ಹಂಚಿಕೊಳ್ಳಬಹುದಾಗಿದೆ. ಆದರೆ ಪುರುಷಶಾಹಿ ವಿಜೃಂಭಣೆಯಿಂದಾಗಿ ಲಿಂಗ ಆಧರಿತ ಶ್ರಮ ವಿಭಜನೆ ಇಲ್ಲಿ ಭದ್ರವಾಗಿ ನೆಲೆಯೂರಿ ಬಿಟ್ಟಿದೆ. ಕುಟುಂಬದ ಹೊರಗೆ, ಅಂದರೆ ಸಾರ್ವಜನಿಕ ಕ್ಷೇತ್ರದಲ್ಲಿ ಗಂಡಿಗೆ ಸರಿಸಮನಾಗಿ ದುಡಿಯುವ ಹೆಣ್ಣು ಕುಟುಂಬದೊಳಗೆ ಮಾತ್ರ, ಅಂದರೆ ಖಾಸಗಿ ಕ್ಷೇತ್ರದಲ್ಲಿ ಲಿಂಗ ಆಧರಿತ ಶ್ರಮ ವಿಭಜನೆಗೆ ತಲೆಬಾಗಬೇಕಾಗಿದೆ. (ಅಗರವಾಲ, ೧೯೯೪)

ಕುಟುಂಬದ ಹೊರಗೆ ಕೂಲಿ -ಸಂಬಳಕ್ಕಾಗಿ ನಡೆಯುವ ದುಡಿಮೆಯಲ್ಲಿ '೮' ಗಂಟೆಗಳ ದುಡಿಮೆಯು ಒಂದು 'ಮಾನವ ದಿನ' ವೆಂದು ಪರಿಗಣಿತವಾಗಿದೆ. ಈ ೮ ಗಂಟೆಗಳ ದುಡಿಮೆಯು 'ಮಾನವದಿನ'ವು ಪುರುಷರಿಗೆ ಮಾತ್ರ ಅನ್ವಯವಾಗುತ್ತದೆ. ಏಕೆಂದರೆ ಕುಟುಂಬದ ಹೊರಗೆ ೮ ಗಂಟೆಗಳ ದುಡಿಮೆಯ ನಂತರ ಪುರುಷನಿಗೆ ಮನೆವಾರ್ತೆ

ದುಡಿಮೆಗಳಿರುವುದಿಲ್ಲ. ಆದರೆ ಕುಟುಂಬದ ಹೊರಗೆ ೮ ಗಂಟೆಗಳ ಕಾಲ ದುಡಿದ ಮೇಲೆ ಮಹಿಳೆಯರು ಪ್ರಜನೋತ್ಪತ್ತಿ ದುಡಿಮೆ ಹಾಗೂ ಕೌಟುಂಬಿಕ ದುಡಿಮೆಯನ್ನು ನಿರ್ವಹಿಸಬೇಕಾಗಿದೆ. ದುಡಿಯುವ ಮಹಿಳೆಗೆ 'ಮಾನವದಿನ' ವೆಂದರೆ ೮ ಗಂಟೆಗಳ ದುಡಿಮೆಯಲ್ಲ. ಅದು ೮ ಗಂಟೆಗಳಿಗೂ ಮೀರಿದ ದುಡಿಮೆ. (ಶ್ರೀನಿವಾಸ್, ೧೯೭೮) ಇದರಿಂದಾಗಿ ದಿನದ ೨೪ ಗಂಟೆಗಳಲ್ಲಿ ಅತಿ ಹೆಚ್ಚು ಗಂಟೆಗಳ ಕಾಲ ದುಡಿಮೆಯಲ್ಲಿ ನಿರತವಾಗಿರುವವರು ಸ್ತ್ರೀಯರಾಗಿದ್ದಾರೆ. ಇದರಿಂದಾಗಿ ಪ್ರತಿದಿನವೂ ಮಹಿಳೆಯರು 'ಎರಡು ದುಡಿಮೆ ದಿನ' ಗಳನ್ನು ಬದುಕುತ್ತಿದ್ದಾರೆ. (ದೇಸಾಯಿ, ೧೯೯೬)

ತ್ರಿರೂಪಿ ದುಡಿಮೆಯನ್ನು ನಿರ್ವಹಿಸುತ್ತಿರುವ ಸ್ತ್ರೀಯರು ಅಭಿವೃದ್ಧಿಯ ಫಲಗಳಲ್ಲಿ ಪಡೆಯುತ್ತಿರುವ ಪಾಲು ಮಾತ್ರ ಅತ್ಯಂತ ಕಡಿಮೆ. ಆರ್ಥಿಕತೆಯಲ್ಲಿ ಹಾಗೂ ಕುಟುಂಬದೊಳಗೆ ಮಹಿಳೆಯರು ಪ್ರಚ್ಛನ್ನ ರೀತಿಯಲ್ಲಿ ಅನೇಕ ಬಗೆಯ ತಾರತಮ್ಯ, ತರತಮಗಳಿಗೆ ಒಳಗಾಗುತ್ತಿದ್ದಾರೆ. ಕುಟುಂಬದೊಳಗೆ ಸ್ತ್ರೀಯರು ಅನುಭವಿಸುತ್ತಿರುವ ತಾರತಮ್ಯ, ತರತಮ, ನಿಕೃಷ್ಟೀಕರಣ, ಹಿಂಸೆ, ದಾರುಣತೆಗಳು ಸರಳವಾಗಿ ಹಾಗೂ ಸಹಜವಾಗಿ ಗೋಚರಿಸುವುದಿಲ್ಲ. ಏಕೆಂದರೆ ಕುಟುಂಬದೊಳಗಿನ ಲಿಂಗಸಂಬಂಧಗಳು ವ್ಯಕ್ತಿನಿಷ್ಠವೂ, ಸೂಕ್ಷ್ಮವೂ ಆಗಿರುತ್ತವೆ.

ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನವು ಕುಟುಂಬವನ್ನು ಒಂದು ಏಕಾಕಾರಿ ಘಟಕವಾಗಿ ಮತ್ತು ಕುಟುಂಬದ ಸದಸ್ಯರೆಲ್ಲರ ಹಿತಾಸಕ್ತಿಗಳನ್ನು ಸರಿಸಮವಾಗಿ ಪೂರೈಸುವ ಒಂದು ಘಟಕವಾಗಿ ಪರಿಭಾವಿಸಿದೆ. ಕುಟುಂಬದ ಒಟ್ಟು ವರಮಾನ, ಒಟ್ಟು ಉತ್ಪನ್ನ ಹಾಗೂ ಒಟ್ಟು ಸಂಪತ್ತಿನ ಫಲಗಳು ಕುಟುಂಬದ ಎಲ್ಲಾ ಸದಸ್ಯರಿಗೂ ಸರಿಸಮನಾಗಿ ದೊರೆಯುತ್ತವೆ ಎಂಬ ಗೃಹೀತ ಈ ಸಂಕಥನದ ಮೂಲದಲ್ಲಿ ಕ್ರಿಯಾಶೀಲವಾಗಿರುವಂತೆ ಕಾಣುತ್ತದೆ. ಆದರೆ ಈ ಬಗೆಯ ಗೃಹೀತಗಳು ಇಂದು ತೀವ್ರ ಸವಾಲುಗಳನ್ನು ಎದುರಿಸುತ್ತಿವೆ.

ಕುಟುಂಬವನ್ನು ಬೃಹತ್ ಆರ್ಥಿಕತೆಯೊಳಗಿರುವ ಒಂದು 'ಒಳ ಆರ್ಥಿಕತೆ'ಯೆಂದು ಪರಿಭಾವಿಸುವ ಅವಶ್ಯಕತೆ ಇದೆ. (ಬ್ಲೂಮ್‌ಬರ್ಗ್. ೧೯೮೯) ಬೃಹತ್ ಆರ್ಥಿಕತೆಯಲ್ಲಿ ಹೇಗೆ ಸಂಪತ್ತು ಮತ್ತು ಸರಂಜಾಮುಗಳ ಹಂಚಿಕೆಯಲ್ಲಿ ಅಸಮಾನತೆ ಇರುತ್ತದೊ ಅದೇ ರೀತಿ 'ಒಳ ಆರ್ಥಿಕತೆ'ಯಲ್ಲೂ ಸಹ ಸಂಪತ್ತು-ಸವಲತ್ತುಗಳ ಹಂಚಿಕೆಯಲ್ಲಿ ಅಸಮಾನತೆಗಳು ಸಾಧ್ಯ. ಕುಟುಂಬದ ಸಂಪತ್ತು-ಸಂಪನ್ಮೂಲಗಳ ಮಾಲೀಕತ್ವ ಹಾಗೂ ನಿಯಂತ್ರಣಗಳಲ್ಲಿ ವ್ಯತ್ಯಾಸಗಳು ಸಾಧ್ಯ. ಕುಟುಂಬದ ಸದಸ್ಯರುಗಳು ಮಾಡುವ ಹಣಕಾಸು-ಖರ್ಚು-ವೆಚ್ಚಗಳ ಹಿಂದಿರುವ ಲಿಂಗಸಂಬಂಧಿ ನೆಲೆಗಳನ್ನು ಅನೇಕ ಅಧ್ಯಯನಗಳು ಸ್ಪಷ್ಟವಾಗಿ ಗುರುತಿಸಿವೆ. ಈ ಅಧ್ಯಯನಗಳು ಗುರುತಿಸಿರುವ ಸಂಗತಿಯೆಂದರೆ ಕುಟುಂಬದ ಮಹಿಳಾ ಸದಸ್ಯರು ಮಾಡುವ ಖರ್ಚು-ವೆಚ್ಚಗಳೆಲ್ಲಾ ಸಾರ ಸಗಟಾಗಿ ಕುಟುಂಬದ ಹಿತಾಸಕ್ತಿಗಳನ್ನು, ಮುಖ್ಯವಾಗಿ ಗಂಡನ ಮತ್ತು ಮಕ್ಕಳ ಹಿತಾಸಕ್ತಿಗಳನ್ನು ಗುರಿಯಾಗಿ ಹೊಂದಿರುವುದು ಕಂಡುಬಂದಿದೆ. (ದೇಸಾಯಿ, ೧೯೯೬)

ಆದರೆ ಪುರುಷ ವರ್ಗ ಮಾಡುವ ಖರ್ಚು-ವೆಚ್ಚಗಳಲ್ಲಿ ಬಹಳಷ್ಟು ಭಾಗ ಸ್ವಂತ ಹಿತಾಸಕ್ತಿ-ತೆವಲುಗಳನ್ನು ಪೂರೈಸುವುದಕ್ಕೆ ಮೀಸಲಾಗಿರುತ್ತದೆ. ಕುಟುಂಬದ ಹೊರಗೆ ನೌಕರಿ-ಚಾಕರಿ, ಕೂಲಿ -ನಾಲಿ ಮಾಡುವ ಹೆಣ್ಣು ಮಕ್ಕಳು ಅನೇಕ ಸಂದರ್ಭಗಳಲ್ಲಿ ತಾವು ದುಡಿದುದನ್ನು ಸಂಪೂರ್ಣವಾಗಿ, ವಿಧೇಯತೆಯಿಂದ ಕುಟುಂಬದ ಮುಖ್ಯಸ್ಥನಿಗೆ ತಂದುಕೊಡುವ ವಾಡಿಕೆ ವ್ಯಾಪಕವಾಗಿದೆ. ತಮ್ಮ ದುಡಿಮೆಗೆ ತಾವು ಹಕ್ಕುದಾರರಾಗಿದ್ದರೂ ಸಹ, ಅದರ ಮೇಲೆ ಅವರಿಗೆ ನಿಯಂತ್ರಣವಿರುವುದಿಲ್ಲ. ಹೀಗಾಗಿ ಮಾಲೀಕತ್ವ-ಸಂಬಳ-ವೇತನಗಳು ತಮ್ಮಷ್ಟಕ್ಕೆ ತಾವು ಮಹಿಳೆಯರಿಗೆ ಸಮಾನತೆಯನ್ನು ತಂದುಕೊಡುವುದಿಲ್ಲ. ಸಂಬಳ, ವೇತನ, ಆಸ್ತಿ, ಕುಟುಂಬದ ವರಮಾನ ಮುಂತಾದವುಗಳ ಮೇಲೆ ಮಹಿಳೆಯರಿಗೆ ನಿಯಂತ್ರಣವಿದ್ದಾಗ ಮಾತ್ರ ಅವರ ಸ್ಥಾನಮಾನ ಉತ್ತಮವಾಗುವುದು ಸಾಧ್ಯ.

ಅಮರ್ತ್ಯಸೇನ್‌ರ ಪ್ರಕಾರ ಕುಟುಂಬದೊಳಗೆ ಸದಸ್ಯರುಗಳ ಸ್ಥಾನಮಾನಗಳು ಹಾಗೂ ಅವರ ಸ್ಥಿತಿಗತಿಗಳು ಅವರವರ ವ್ಯಕ್ತಿಗತ ಲಿಂಗಸ್ವರೂಪ, ವಯೋಮಾನ, ರಕ್ತಸಂಬಂಧ, ದುಡಿಮೆ ಸ್ವರೂಪ ಮುಂತಾದವುಗಳಿಂದ ನಿರ್ಧರಿತವಾಗುತ್ತವೆ. ಕುಟುಂಬದೊಳಗೆ ಪುರುಷರು ಮತ್ತು ಮಹಿಳೆಯರ ನಡುವೆ ವ್ಯಕ್ತಿಗತ ಹಿತಾಸಕ್ತಿಗಳು, ಸಂಪನ್ಮೂಲಗಳ ಸ್ವಾಮ್ಯ, ಸ್ವಾತಂತ್ರ್ಯ, ಧಾರಣಶಕ್ತಿ ಹಾಗೂ ಕ್ರಿಯಾಶಕ್ತಿಗಳಲ್ಲಿ ತೀವ್ರ ಸ್ವರೂಪದ ಅಂತರ-ಅಸಮಾನತೆಗಳಿವೆ. ಈ ಬಗೆಯ ಕುಟುಂಬದೊಳಗಿನ ಲಿಂಗಸಂಬಂಧಿ ತಾರತಮ್ಯಗಳಿಗೆ ಅನೇಕ ಕಾರಣಗಳು ಸಾಧ್ಯ. ಆದರೆ ಅಮರ್ತ್ಯಸೇನ್‌ರ ಪ್ರಕಾರ ಭಾರತದ ಸಂದರ್ಭದಲ್ಲಿ ಲಿಂಗಸಂಬಂಧಿ ತಾರತಮ್ಯಗಳಿಗೆ ಮಹಿಳೆಯರ "ಸ್ವಹಿತರಹಿತ ಪರಹಿತವಾದಿ" ಮನೋಭಾವವು ಮುಖ್ಯ ಕಾರಣವಾಗಿದೆ. ನಮ್ಮ ಸಮಾಜದಲ್ಲಿನ ಮಹಿಳೆಯರಲ್ಲಿ ಸ್ವಹಿತವನ್ನು-ಸ್ವಂತ ಆಕಾಂಕ್ಷೆಗಳನ್ನು ಕುಟುಂಬದ, ಮನೆತನದ, ಮುಖ್ಯವಾಗಿ ಗಂಡನ, ಗಂಡುಮಕ್ಕಳ ಹಿತಕ್ಕಾಗಿ, ಶ್ರೇಯಸ್ಸಿಗಾಗಿ ಮುಡುಪಾಗಿಸುವ, ತ್ಯಾಗ ಮಾಡುವ ಮನೋಭಾವವನ್ನು ಕಾಣಬಹುದಾಗಿದೆ. ಸ್ವಹಿತಾಸಕ್ತಿ ಹಾಗೂ ಸ್ವಂತ ವ್ಯಕ್ತಿತ್ವದ ವಿಕಸನಕ್ಕೆ ಶ್ರಮ-ಕಾಲಗಳನ್ನು ಮೀಸಲಿಡುವ ಪ್ರವೃತ್ತಿಯೇ ಮಹಿಳೆಯರಲ್ಲಿ ಇಲ್ಲದ ಒಂದು ಕೌಟುಂಬಿಕ ವ್ಯವಸ್ಥೆ ನಮ್ಮದಾಗಿದೆ. ಸ್ವಹಿತರಹಿತ ಪರಹಿತವಾದಿ ಮನೋಭಾವವು ಮಹಿಳೆಯರಲ್ಲಿ ಸ್ಫುರಿಸುವಂತೆ ಮಾಡುವ, ಜೈವಿಕ ವಿಶಿಷ್ಟತೆಯು ವಿಧಿವತ್ತಾದುದು ಮತ್ತು ಸಹಜವಾದುದು ಎಂಬುದನ್ನು ದೃಢಪಡಿಸುವ 'ಸಾಮಾಜೀಕರಣ' ಪ್ರಕ್ರಿಯೆಯೊಂದನ್ನು ಸಮಾಜ ರೂಪಿಸಿಬಿಟ್ಟಿದೆ. ಈ ಸಾಮಾಜೀಕರಣ ಪ್ರಕ್ರಿಯೆಯು ಮಹಿಳೆಯರನ್ನು ಅಧೀನರನ್ನಾಗಿಯೂ, ಅಬಲೆಯರನ್ನಾಗಿಯೂ, ಅಸಹಾಯಕರನ್ನಾಗಿಯೂ ಮಾಡಿಬಿಡುತ್ತದೆ. ಇದರಿಂದಾಗಿ ಕುಟುಂಬದೊಳಗೆ ಮಹಿಳೆಯರ ಸ್ಥಾನಮಾನ, ಕೌಟುಂಬಿಕ ಸಂಪತ್ತಿನ ಮೇಲೆ ನಿಯಂತ್ರಣ, ಕುಟುಂಬ ನಿರ್ವಹಣೆ -ಜವಾಬ್ದಾರಿಯಲ್ಲಿ ಸಹಭಾಗಿತ್ವ ಮುಂತಾದ ವಿಷಯಗಳಲ್ಲಿ ತಾರತಮ್ಯ, ತರತಮ ತೀವ್ರವಾಗಿ ಬಿಟ್ಟಿವೆ. ಕುಟುಂಬದ ವರಮಾನದಲ್ಲಿ ಮಹಿಳೆಯರಿಗಾಗಿಯೇ ವ್ಯಯವಾಗುವ ಪ್ರಮಾಣ ಕನಿಷ್ಟತಮವಾದುದು.

ಲಿಂಗಪ್ರಭುತ್ವವನ್ನು-ಪುರುಷಶಾಹಿತ್ವವನ್ನು ಮಹಿಳೆಯರು ಯಾಕೆ ಒಪ್ಪಿಕೊಂಡು-ಮನ್ನಿಸಿ ಪೋಷಿಸುತ್ತಾರೆ? ಇದಕ್ಕೆ ಮೂರು ಮುಖ್ಯ ಕಾರಣಗಳನ್ನು ನೀಡಬಹುದಾಗಿದೆ:

೧. ಬಾಲ್ಯಾವಸ್ಥೆಯಲ್ಲಿ ಲಿಂಗವೈಶಿಷ್ಟತೆಯನ್ನು ಅನೇಕ ಚಿನ್ಹೆಗಳ ಮೂಲಕ ನೆಲೆಗೊಳಿಸುವ ಸಾಮಾಜೀಕರಣ ಪ್ರಕ್ರಿಯೆಗೆ ಮಗುವನ್ನು ಒಳಪಡಿಸಲಾಗುತ್ತದೆ. ಜೈವಿಕ-ವಿಶಿಷ್ಟತೆಯು ಹೆಣ್ಣಿಗೆ ಲಿಂಗ ಸ್ವರೂಪ ನೀಡಿದರೆ ಸಾಮಾಜೀಕರಣವು ಆಕೆಗೆ ಸ್ತ್ರೀತನವನ್ನು ನೀಡುತ್ತದೆ. ಈ ಸಾಮಾಜೀಕರಣ ಪ್ರಕ್ರಿಯೆಯು ಶಿಕ್ಷಣ, ಶಿಕ್ಷೆ, ಮೆಚ್ಚುಗೆಗಳ ಮೂಲಕ ಮಕ್ಕಳಲ್ಲಿ ಲಿಂಗ ವಿಶಿಷ್ಟತೆಯನ್ನು ನೆಲೆಗೊಳಿಸಿಬಿಡುತ್ತದೆ. ಪುರುಷಶಾಹಿ ಪ್ರಣೀತ ಸ್ತ್ರೀತ್ವವನ್ನು ಮಹಿಳೆಯರು ಪಡೆದುಕೊಂಡು ಬಿಡುತ್ತಾರೆ.

೨. ಮಕ್ಕಳ ಲಾಲನೆ-ಪಾಲನೆಗಳು ಸ್ತ್ರೀಯರಿಗೆ ಮುಡುಪಾದ ಕಾರ್ಯಗಳೆಂಬ ನಂಬಿಕೆಯನ್ನು ಮಕ್ಕಳ ಬಾಲ್ಯಾವಸ್ಥೆಯಿಂದಲೂ ಸಮಾಜದಲ್ಲಿ ಪ್ರತಿಷ್ಠಾಪಿಸಲಾಗುತ್ತದೆ. ಇದರಿಂದಾಗಿ ಲಿಂಗ ಸಂಬಂಧಿ ಶ್ರಮ ವಿಭಜನೆ ಕುಟುಂಬದೊಳಗೆ ರೂಪುಗೊಳ್ಳುತ್ತವೆ.

೩. ಈ ಸಾಮಾಜೀಕರಣ ಹಾಗೂ ಲಿಂಗ ಸಂಬಂಧಿ ಶ್ರಮ ವಿಭಜನೆ -ಇವು ಸ್ತ್ರೀಯರು ಮತ್ತು ಪುರುಷರು ಆಯ್ದುಕೊಳ್ಳುವ ಜವಾಬ್ದಾರಿ ಹಾಗೂ ವಹಿಸುವ ಪಾತ್ರಗಳ ನಡುವೆ ಭಿನ್ನತೆಯನ್ನು ಘನೀಭೂತಗೊಳಿಸಿಬಿಡುತ್ತವೆ.

ಈ ಬಗೆಯ ಸಾಮಾಜೀಕರಣದಿಂದಾಗಿ ಸಮಾಜವು ಲಿಂಗ ಪ್ರಭುತ್ವವನ್ನು ಪೋಷಿಸಿಕೊಂಡು ಹೋಗಬಲ್ಲ ವ್ಯಕ್ತಿತ್ವವನ್ನೇ ಪುನಾರೂಪಿಸುತ್ತಿರುತ್ತದೆ. ಹೀಗಾಗಿ ಲಿಂಗಪ್ರಭುತ್ವವು ಅವಿಚ್ಛಿನ್ನವಾಗಿ, ಯಥಾಸ್ಥಿತಿಯಲ್ಲಿ ಮುಂದುವರಿಯುತ್ತದೆ.

## ಜನಸಂಖ್ಯಾ ಮೀಮಾಂಸೆಯ ಲಿಂಗ ಸ್ವರೂಪ

ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನದ ಅವಿಭಾಜ್ಯ ಅಂಗವಾಗಿ ಬೆಳೆದುಕೊಂಡು ಬಂದಿರುವ ಜನಸಂಖ್ಯಾ ಮೀಮಾಂಸೆಯ ಲಿಂಗಸಂಬಂಧಗಳ ಸ್ವರೂಪವು ಮಹಿಳೆಯರಿಗೆ ಅಪಾಯಕಾರಿಯಾಗಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಮಾಲ್ಥಸ್, ಮಾಲ್ಥಸ್‌ವಾದಿ ಹಾಗೂ ನವಮಾಲಸ್ಥವಾದಿ ಮೀಮಾಂಸೆ ಜನಸಂಖ್ಯೆ ಕುರಿತಂತೆ ಆತಂಕಕಾರಿ ಸನ್ನಿವೇಶವೊಂದನ್ನು ನಿರ್ಮಿಸಿಬಿಟ್ಟಿದೆ. ಈ ಬಗೆಯ ಜನಸಂಖ್ಯೆಯ ವಿಪರೀತ ಬೆಳವಣಿಗೆ ಗತಿಯನ್ನು ತಡೆಯಲು ಹಾಗೂ ತಗ್ಗಿಸಲು ಬಲಪ್ರಯೋಗವಾದಿ-ಬಲಾತ್ಕಾರವಾದಿ ಕ್ರಮಗಳನ್ನು ಮಾಲ್ಥಸ್‌ವಾದಿ ವಿಚಾರ ಪ್ರಣಾಳಿಕೆ ಬೋಧಿಸುತ್ತಾ ಬಂದಿದೆ. ಬಲಪ್ರಯೋಗವಾದಿ, ಬಲಾತ್ಕಾರವಾದಿ, ಉಗ್ರ ಜನಸಂಖ್ಯಾ ನೀತಿಗಳು ಸ್ತ್ರೀಯರ ಹಿತಾಸಕ್ತಿ, ಸ್ವಾತಂತ್ರ್ಯಗಳ ಮೇಲೆ ತೀವ್ರ ದುಷ್ಪರಿಣಾಮ ಬೀರುತ್ತಿವೆ. ಮಾಲ್ಥಸ್‌ವಾದಿ ಜನಸಂಖ್ಯಾ ನೀತಿಯು ಸ್ತ್ರೀಯರನ್ನು ಕೇವಲ ಮಕ್ಕಳಿಗೆ ಜನ್ಮ ನೀಡುವ ಒಂದು ವಸ್ತುವನ್ನಾಗಿ-ಉಪಕರಣವನ್ನಾಗಿ ಭಾವಿಸುತ್ತದೆ.

ಈ ಜನಸಂಖ್ಯಾ ಮೀಮಾಂಸೆಯು ಜನಸಂಖ್ಯೆಯನ್ನು ಕೇವಲ ಒಂದು ಸಂಖ್ಯೆಯಾಗಿ, ಸಂಖ್ಯಾವಾಚಕ ಶಬ್ದವಾಗಿ ಪರಿಭಾವಿಸುತ್ತಾ ಬಂದಿದೆ. (ಬೋಕ್. ೧೯೯೪) ಜನಸಂಖ್ಯೆ ಬಗ್ಗೆ ಇದು ವಸ್ತುನಿಷ್ಠ ಸಮೀಪನವನ್ನು ಅಳವಡಿಸಿಕೊಂಡಿದೆ. ಆದರೆ ಮಾನವಮುಖಿ ಅಭಿವೃದ್ಧಿ ಸಂಕಥನವು ಜನಸಂಖ್ಯೆಯನ್ನು 'ಜನರು' ಎಂಬ ನೆಲೆಯಲ್ಲಿ, ವ್ಯಕ್ತಿನಿಷ್ಠ ಸಮೀಪನದ ಮೂಲಕ ಪೃಥಕ್ಕರಿಸಲು ಪ್ರಯತ್ನಿಸಿದೆ. ಪ್ರಜನೋತ್ಪತ್ತಿಗೆ ಸಂಬಂಧಪಟ್ಟ ನಿರ್ಧಾರ-ನಿರ್ಣಯಗಳು ಆಪ್ತ-ಆತ್ಮೀಯಭಾವಲೋಕದ ಸಂಗತಿಗಳಾಗಿವೆ ಎಂದು ಈ ಸಂಕಥನವು ನಂಬುತ್ತದೆ.

ಜನಸಂಖ್ಯೆಯ ತೀವ್ರಗತಿ ಬೆಳವಣಿಗೆ ಹಾಗೂ ಮಹಿಳೆಯರ ಧಾರಣಶಕ್ತಿ, ಸ್ವಾತಂತ್ರ್ಯ, ಸಹಭಾಗಿತ್ವಗಳ ನಡುವೆ ತೀವ್ರತರನಾದ ಅವಲಂಬಿ ಸಂಬಂಧವಿದೆ. ಧಾರಣಶಕ್ತಿ, ಸಾಕ್ಷರತೆ, ಸ್ವಾತಂತ್ರ್ಯ ಸಹಭಾಗಿತ್ವ ಮುಂತಾದ ಬದುಕಿನ ಅಂತಸ್ಥ ಗುಣಗಳನ್ನು ಆದ್ಯತೆ ಮೇಲೆ ಮಹಿಳೆಯರಿಗೆ ಒದಗಿಸುವುದರ ಮೂಲಕ ಕೇರಳವು ಪವಾಡ ಸದೃಶ ರೀತಿಯಲ್ಲಿ ಜನಸಂಖ್ಯೆಯ ಬೆಳವಣಿಗೆಯನ್ನು ನಿಯಂತ್ರಿಸಿದೆ. ೧೯೯೨ ರಲ್ಲಿ ಅಖಿಲಭಾರತ ಮಟ್ಟದಲ್ಲಿ ಒಟ್ಟು ಜನಸಂಖ್ಯೆಯ ಸಮಗ್ರ ಫಲೋತ್ಪತ್ತಿ ಪ್ರಮಾಣ ೩.೭ ಇದ್ದರೆ ಕೇರಳದಲ್ಲಿ ಅದು ಕೇವಲ ೧.೮. ಅಕ್ಷರ, ಆಹಾರ, ಆರೋಗ್ಯ, ಆವಾಸ ಮುಂತಾದ ಬದುಕಿನ ಅಂತಸ್ಥ ಗುಣಗಳ ವರ್ಧನೆ ಮೂಲಕ ಕ್ರಾಂತಿಕಾರಕ ರೀತಿಯಲ್ಲಿ ಮಾನವಮುಖಿ ಅಭಿವೃದ್ಧಿಯನ್ನು ಹಾಗೂ ಲಿಂಗ ಸಮಾನತೆಯನ್ನು ಸಾಧಿಸಿಕೊಂಡಿರುವ ಕೇರಳವು ಇಡೀ ಭಾರತದಲ್ಲಿ ಹಾಗೂ ದಕ್ಷಿಣ ಏಷ್ಯಾದಲ್ಲಿ ಆಚಾರ್ಯಸದೃಶ ಮಾದರಿಯಾಗಿ ಬಿಟ್ಟಿದೆ. (ಸೇನ್, ೧೯೯೫ : ಎ) ಜನರ ಬದುಕಿನ ಅಂತಸ್ಥ ಗುಣಗಳಾದ ಅಕ್ಷರ, ಆರೋಗ್ಯ, ಆಹಾರ, ಆವಾಸಗಳನ್ನು ಜನಸಂಖ್ಯಾ ನೀತಿಯಲ್ಲಿ ಅಂತರ್ಗತಗೊಳಿಸಿದ್ದರಿಂದ ಕೇರಳವು ಬಲಪ್ರಯೋಗವಾದಿ ಬಲಾತ್ಕಾರವಾದಿ ಕ್ರಮಗಳನ್ನು ಅಳವಡಿಸಿಕೊಳ್ಳದೆ ಜನಸಂಖ್ಯೆಯ ಬೆಳವಣಿಗೆ ಗತಿಯನ್ನು ನಿಯಂತ್ರಿಸುವುದರಲ್ಲಿ ಯಶಸ್ವಿಯಾಗಿದೆ.

ಎಲ್ಲಿಯವರೆಗೆ ಕುಟುಂಬ ಯೋಜನೆಗೆ ಮಾತ್ರ ಮೀಸಲಿಟ್ಟುಕೊಂಡು, ಸ್ತ್ರೀಯರನ್ನು ಉಪಕರಣಗಳನ್ನಾಗಿ ಮಾಡಿಕೊಂಡು, ಕೇವಲ ಗಾತ್ರನಿಷ್ಟ ನೆಲೆಯಲ್ಲಿ ಜನಸಂಖ್ಯಾ ನೀತಿ ರೂಪಿಸುತ್ತಿರುತ್ತೇವೆಯೋ ಅಲ್ಲಿಯವರೆಗೆ ಆ ನೀತಿಯು ತನ್ನ ಗುರಿಯನ್ನು ಸಾಧಿಸುವುದರಲ್ಲಿ ಯಶಸ್ವಿಯೂ ಆಗುವುದಿಲ್ಲ ಮತ್ತು ಅದು ಸ್ತ್ರೀಯರನ್ನು ವ್ಯಕ್ತಿನಿಷ್ಟವಾಗಿ-ಭಾವನಿಷ್ಟವಾಗಿ ನೋಡುವುದು ಸಾಧ್ಯವಿಲ್ಲ. ಮಾನವಮುಖಿ ಅಭಿವೃದ್ಧಿ ವಿಚಾರ ಪ್ರಣಾಳಿಕೆ ಆಧಾರದಲ್ಲಿ ಜನಸಂಖ್ಯಾ ನೀತಿಯನ್ನು ರೂಪಿಸುವ ಅಗತ್ಯವಿದೆ.

### ಉಪಸಂಹಾರ

ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನದಲ್ಲಿ ಅಂತರ್ಗತವಾಗಿರುವ ಲಿಂಗಸಂಬಂಧಗಳ ಬಗೆಗಿನ ಪೂರ್ವಗ್ರಹಗಳು ಅನೇಕ ಬಗೆಯ ವಿಕಾರ-ವಿಕೃತಿಗಳಿಗೆ ಕಾರಣವಾಗಿದೆ. ಜೈವಿಕ ವಿಶಿಷ್ಟತೆಯನ್ನು ಮುಂದುಮಾಡಿಕೊಂಡು ಸಮಾಜವು

ಲಿಂಗಸಂಬಂಧಿ ಶ್ರಮವಿಭಜನೆಯನ್ನು ರೂಪಿಸಿಬಿಟ್ಟಿದೆ. ಇಲ್ಲಿ ಸ್ತ್ರೀಯರ ಸ್ಥಾನಮಾನಗಳು ಅಧೀನವೂ, ಅಪ್ರಧಾನವೂ, ಅಗೋಚರವೂ, ಕ್ರಿಯ ರಹಿತವೂ ಆಗಿಬಿಟ್ಟಿವೆ. ಈ ಬಗೆಯ ಸಾಮಾಜಿಕವಾಗಿ ರೂಪುಗೊಂಡ ಲಿಂಗ ಪ್ರಭುತ್ವವು ಸ್ತ್ರೀಯರನ್ನು ಹಿಂಸೆ, ನೋವು, ನಿರ್ಲಕ್ಷ್ಯದ ಕೂಪಕ್ಕೆ ತಳ್ಳಿಬಿಟ್ಟಿದೆ. ಪ್ರತಿದಿನವೂ ಅವರು ಎರಡು ದುಡಿಮೆ ದಿನಗಳನ್ನು ಬದುಕುತ್ತಿದ್ದಾರೆ. ಅಭಿವೃದ್ಧಿಯ ಸಾಂಪ್ರದಾಯಿಕ ಸಂಕಥನವು ಲಿಂಗಸಂಬಂಧಗಳ ಬಗ್ಗೆ ಕುರುಡಾಗಿಬಿಟ್ಟಿದೆ.

ಈ ಬಗೆಯ ಅಧೀನ, ಅಪ್ರಧಾನ, ಅಗೋಚರ, ಅಮೂರ್ತ ಸ್ಥಾನಮಾನದಿಂದಾಗಿ ಅಭಿವೃದ್ಧಿಯು ಹರಿಯಬಿಡುವ ಫಲಗಳಲ್ಲಿ ಮಹಿಳೆಯರಿಗೆ ಸೂಕ್ತಪಾಲು ದೊರೆಯುತ್ತಿಲ್ಲ. ಸಾಕ್ಷರತೆಯಲ್ಲಿ ಲಿಂಗಸಂಬಂಧಿ ಅಂತರವು ತೀವ್ರವಾಗಿದೆ. ಕರ್ನಾಟಕದಲ್ಲಿ ಅದು ಅಧಿಕವಾಗುತ್ತಿದೆ. ಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆ ಲಿಂಗತಾರತಮ್ಯವು ಒಂದು ನಿರ್ದಿಷ್ಟ ವಯೋಗುಂಪಿನಲ್ಲಿ ಮಡುಗಟ್ಟಿಕೊಂಡು ಬಿಟ್ಟಿದೆ. ಈ ೫ರಿಂದ ೩೪ ವರ್ಷಗಳ ವಯೋಗುಂಪಿನಲ್ಲಿ ದೇಶದ ಎಲ್ಲಾ ರಾಜ್ಯಗಳಲ್ಲೂ ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಅಧಿಕವಿದೆ. ಹೆರಿಗೆ ಸಂದರ್ಭದಲ್ಲಿ ಸಾವಿಗೀಡಾಗುವ ತಾಯಂದಿರ ಸಂಖ್ಯೆ ಅಪಾರವಾಗಿದೆ.

ಅಭಿವೃದ್ಧಿ ಪ್ರಕ್ರಿಯೆಯು ಲಿಂಗಸಂಬಂಧಗಳ ಬಗ್ಗೆ ಕುರುಡಾಗಿರುವುದರಿಂದ ಸ್ತ್ರೀಯರು ಅನೇಕ ಬಗೆಯ ಅನ್ಯಾಯ-ಅಂತರಗಳನ್ನು ಅನುಭವಿಸಬೇಕಾಗಿದೆ. ಜೈವಿಕ ವಿಭಿನ್ನತೆಯನ್ನು ಮೂಲವನ್ನಾಗಿ ಮಾಡಿಕೊಂಡು ಸಮಾಜವು ಸೃಷ್ಟಿಸಿರುವ ಲಿಂಗಸಂಬಂಧಿ ಶ್ರಮವಿಭಜನೆಯು ಸ್ತ್ರೀಯರಿಗೆ ಅಧಿಕತಮವಾದ ದುಡಿಮೆಯ ಹೊಣೆ-ಹೊರೆಯನ್ನು ನೀಡಿದೆ. ಪುರುಷ ವರ್ಗಕ್ಕೆ ಸಂಪತ್ತು ಮತ್ತು ಸಂಪನ್ಮೂಲಗಳ ಒಡೆತನ ಹಾಗೂ ನಿಯಂತ್ರಣಗಳೆರಡನ್ನು ನೀಡಿಬಿಟ್ಟಿದೆ.

ಲಿಂಗತಾರತಮ್ಯ-ತರತಮಗಳು ಕೇವಲ ಆರ್ಥಿಕತೆ ಮಟ್ಟದಲ್ಲಿ ಮಾತ್ರ ಕ್ರಿಯಾಶೀಲವಾಗಿರುವ ವಿಕಾರವೇನಲ್ಲ. ಅದು ಕುಟುಂಬ ಮಟ್ಟದಲ್ಲೂ ಕ್ರಿಯಾಶೀಲವಾಗಿರುತ್ತದೆ. ಲಿಂಗಪ್ರಭುತ್ವವನ್ನು, ಲಿಂಗಸಂಬಂಧಿ ಶ್ರಮ ವಿಭಜನೆಯನ್ನು ಮತ್ತು ಲಿಂಗವಾದಿ ವ್ಯಕ್ತಿತ್ವಗಳನ್ನು ಊರ್ಜಿತಗೊಳಿಸುವಂತಹ 'ಸಾಮಾಜೀಕರಣ' ವ್ಯವಸ್ಥೆಯನ್ನು ಸಮಾಜವು ರೂಪಿಸಿಬಿಟ್ಟಿದೆ. ಲಿಂಗ ವಿಶಿಷ್ಟತೆಯನ್ನು ಒಪ್ಪಿಕೊಂಡು - ಲಿಂಗಪ್ರಭುತ್ವವನ್ನು ಯಥಾಸ್ಥಿತಿಯಲ್ಲಿ ಮುಂದುವರಿಸಿಕೊಂಡು ಹೋಗಲು ತಕ್ಕುದಾದ ವ್ಯಕ್ತಿತ್ವವನ್ನು ಮಹಿಳೆಯರಿಗೆ ಸಾಮಾಜೀಕರಣವು ಒದಗಿಸುತ್ತದೆ.

ಅಭಿವೃದ್ಧಿಯ ಲಿಂಗೀಕರಣವೆನ್ನುವುದು ಇಂದಿನ ಅಗತ್ಯವಾಗಿದೆ. ಮಾನವಮುಖಿ ಅಭಿವೃದ್ಧಿ ವಿಚಾರ ಪ್ರಣಾಳಿಕೆಯ ಆಚಾರ್ಯ ಸದೃಶ ಸಂದೇಶವು ಕೂಡ 'ಅಭಿವೃದ್ಧಿಯ ಲಿಂಗೀಕರಣ'ವಾಗಿದೆ. ಅಭಿವೃದ್ಧಿ ಪ್ರಕ್ರಿಯೆಯನ್ನು ಲಿಂಗೀಕರಣದ ಉಪಚಾರಕ್ಕೆ ಒಳಪಡಿಸಬೇಕಾಗಿದೆ. ಇಲ್ಲದಿದ್ದರೆ ಅಭಿವೃದ್ಧಿಗೆ ಅಪಾಯ ತಪ್ಪಿದ್ದಲ್ಲ. (ಯುಎನ್‌ಡಿಪಿ, ೧೯೯೫) ಲಿಂಗ ಸಮಾನತೆಯೆಂಬುದು ಕೇವಲ ಘೋಷಣೆಯೂ ಅಲ್ಲ ಮತ್ತು ಕೇವಲ

ಒಂದು ಒಣ ಆದರ್ಶವಲ್ಲ. ಅದೊಂದು ವಿಚಾರ ಪ್ರಣಾಳಿಕೆ. ಅಭಿವೃದ್ಧಿ ಸಂಕಥನದ ಪರಿಭಾಷೆ ಹಾಗೂ ಪರಿಭಾವನೆಗಳನ್ನು ಲಿಂಗ ಸಂಬಂಧಗಳ ನೆಲೆಯಲ್ಲಿ ಪುನಾರೂಪಿಸಬೇಕಾಗಿದೆ. ರಾಜಕೀಯ ಮತ್ತು ಸಾಮಾಜಿಕ ಅವಕಾಶಗಳಿಂದ ಮಹಿಳೆಯು ವಂಚಿತಳಾಗಿರುವುದು ಆಧುನಿಕ ಪ್ರಗತಿಯ ಅಪರಾಧಿ ಸ್ವರೂಪದ ಸಂಕೇತವಾಗಿದೆ. ಅಭಿವೃದ್ಧಿ ಪ್ರಕ್ರಿಯೆಯನ್ನು ಲಿಂಗೀಕರಣಗೊಳಿಸದಿದ್ದರೆ ಅದು ತಾರತಮ್ಯವಾದಿಯೂ, ಅನ್ಯಾಯ ಪರವೂ ಆಗಿಬಿಡುತ್ತದೆ.

ಮಹಿಳೆಯರನ್ನು ಅಭಿವೃದ್ಧಿಯ ನಿಯೋಗಿಗಳೆಂದು ಪರಿಭಾವಿಸುವ ಅಗತ್ಯವಿದೆ. ಅಭಿವೃದ್ಧಿಯ ಲಿಂಗೀಕರಣವು ಸ್ತ್ರೀಯರು ಹಾಗೂ ಪುರುಷರ ಬದುಕಿನಲ್ಲಿ ಮಹತ್ವದ ಬದಲಾವಣೆಗಳನ್ನು ತರಬಲ್ಲುದಾಗಿದೆ. ಈ ಲಿಂಗೀಕರಣ ಪ್ರಕ್ರಿಯೆಯು ಅಭಿವೃದ್ಧಿಯನ್ನು ಮಾನವೀಕರಣಗೊಳಿಸುತ್ತದೆ.



## ಸಂದರ್ಭ ಸೂಚಿ


Agarwal, Bina. (1994) A Field of One's own : Gender and Land Rights in South Asia, Cambridge, New Delhi, pp. 55-81

Blumberg, Rae Lesser. (1989) 'Toward a Feminist theory of Development, in Feminism and Sociological Theory edited by Ruth A Wallace, Sage, New Delhi, pp. 161-199.

Bok, Sissela. (1994) 'Population and Ethics : Expanding the Moral Space' in Population Policies Reconsidered: Health, Empowerment and Rights edited by Gita Sen et al Harvard, pp 15-26

Desai, Neera. (1996) ' Women's Employment and their Familial Role in India' in Social Structure and Change (Vol.2): Women in Indian Society edited by A. M. Shah et al, Sage, New Delhi.

Dewan, Ritu (1995) ' Gender in New-classical Economies: Conceptual overview in Economic and Political Weekly, Vol.30, No. 17, pp. WS: 96-98

Haq, Mahbub Ul. (1996) Reflections on Human development, Oxford, Karachi, pp. 13-15

Sample Registration System 1992 : Fertility and Mortality Indicators, office of Registrar General, Home Affairs, Go I, pp. 42-46

Sen, Amartya (1988) 'Family and Sex : Sex Bias in Poverty' in Rural poverty in South Asia, Columbia p. 466

........(1993) ' The Economics of Life and Death' Scientific American may pp. 1825

........(1995) India Economic Development and Social opportunity, Oxford, New Delhi

.......(1995) A, Population Policy : Authoritarianism verses co-operation (International) Lecture services on population issues-3, The John D and Catherine T, Mae Arthur Foundation, New Delhi.



"ಅನೇಕ ಸಂದರ್ಭಗಳಲ್ಲಿ ಮಹಿಳೆಯೊಬ್ಬಳ ಅಧಿಕ ಕಾಲ ಆಕೆಯ ಸಂಸಾರದ ಕರ್ತವ್ಯಗಳನ್ನು ಮಾಡುವುದರಲ್ಲಿ ಕಳೆಯುವುದಕ್ಕಿಂತಲೂ ತನ್ನ ಯಜಮಾನ ಸ್ವಾಮಿಯ ಸ್ವಾರ್ಥ ಸುಖವನ್ನು ತೃಪ್ತಿ ಪಡಿಸುವುದರಲ್ಲಿಯೋ ಅಥವಾ ತನ್ನ ಆಡಂಬರದ ಪ್ರದರ್ಶನದಲ್ಲಿಯೋ ಕಳೆದು ಹೋದೀತು. ಸ್ತ್ರೀಯರ ಈ ಬಗೆಯ ಕೌಟುಂಬಿಕ ದಾಸ್ಯವನ್ನು ನಾನು ಅನಾಗರಿಕವೆಂದು ಭಾವಿಸುತ್ತೇನೆ."

(ಮೋ. ಕ. ಗಾಂಧಿ)

# ಪಾತರದವರು

ಡಾ. ಶೈಲಜಾ ಇಂ. ಹಿರೇಮಠ

ನನ್ನ ಹೆಸರು ಆನಂದಸಾನಿಯಂತೆ! ನನ್ನವ್ವ ಯಾಕೀ ಹೆಸರನ್ನು ಇಟ್ಟಳು? ನನಗೆ ಎಲ್ಲಿದೆ ಆನಂದ? ಮನತುಂಬ ನೋವೇ ಹೆಪ್ಪುಗಟ್ಟಿದೆ. ನನಗೆ ಮುದ್ದು ಮುದ್ದಾದ ಹೆಣ್ಣು ಮಕ್ಕಳು ಒಂದಲ್ಲ! ಎರಡಲ್ಲ!! ಏಳು !! ದೇವರೆ ನನ್ನ ಹೊಟ್ಟೆಯಿಂದೇಕೆ ಇವರನ್ನು ಹುಟ್ಟಿಸಿದೆ? ಅವಕ್ಕೆ ಮುಂಬರುವ ಕರಾಳ ಬದುಕು ಗೊತ್ತಿಲ್ಲ. ಹೇಳಿದರೂ ಅರ್ಥವಾಗುವುದಿಲ್ಲ. ಥೆ! ಅವರಿಗೇಕೆ ಅರ್ಥವಾಗಬೇಕು? ಅರ್ಥವಾಗಕೂಡದು. ಪರಿಹಾರ? ಅವರ ರೂಪಕ್ಕೇನು ಕೊರತೆ? ನಮ್ಮ ಜನಾಂಗದಲ್ಲಿ ಗಂಡುಗಳಿಲ್ಲವೇನು? ಮದುವೆ ಮಾಡಿದರಾಯಿತು. ಅದು ಅಷ್ಟು ಸುಲಭವಲ್ಲ. ಗೊತ್ತು. ಲಕ್ಷ್ಮೇಶ್ವರದ ಪ್ರಮುಖರ, ಸೋಮನಾಥ ದೇವಸ್ಥಾನದ ಪುರೋಹಿತರ ಕರಾಳ ಕೈಗಳು ಅಡ್ಡ ಬರುತ್ತವೆಯೆಂಬುದು ಚೆನ್ನಾಗಿ ಗೊತ್ತು. ಅವರ ಹುಟ್ಟಿಗೆ ಕಾರಣನಾದ ಅವರಪ್ಪನೂ ಅದನ್ನು ತಡೆಯಲು ಬರುವುದಿಲ್ಲ. ಅಪ್ಪ ಎಂದು ನನ್ನ ಮಕ್ಕಳು ಹೊರಗಡೆ ಕರೆಯಕೂಡದಂತೆ. ಅವು ಬೆಳೆ-ಬೆಳೆದಂತೆ ನಾಲ್ಕು ಗೋಡೆಗಳ ಮಧ್ಯೆಯೂ ಕರೆಯಬಾರದಂತೆ. ಅವನನ್ನು ನನ್ನ ಗಂಡನೆಂದು ಬಹಿರಂಗವಾಗಿ ಅನ್ನಕೂಡದಂತೆ. ಯಾಕೆಂದರೆ ಸಾರ್ವಜನಿಕರೆದುರಿಗೆ ತಾಳಿ ಕಟ್ಟಿಲ್ಲವಲ್ಲ. ಆದರೂ ಇವನಿಗೆ ಕಟ್ಟಿಕೊಂಡ ಹೆಂಡತಿಯಂತೆ ನಿಷ್ಠಳಾಗಿರಬೇಕಂತೆ?! ನನ್ನದೂ ಒಂದು ಜೀವನವೇ? ನನ್ನ ಕತ್ತಲು ಬದುಕಿನಂತೆ ಬೆಳ್ದಿಂಗಳ ರೂಪದ ನನ್ನ ಯಾವ ಹೆಣ್ಣು ಮಕ್ಕಳೂ ಜೀವನ ಸಾಗಿಸಕೂಡದು.

ಸೋಮನಾಥ ಗುಡಿಯ ಗಂಟೆಯ ನಾದ ನನ್ನಲ್ಲಿ ಭಕ್ತಿಯ ತನ್ಮಯತೆಯನ್ನು ತರುತ್ತಿಲ್ಲ. ನನ್ನ ಬದುಕನ್ನು ಪಾತಾಳಕ್ಕೆ ನೂಕಿದ್ದು ಅದೇ ಗುಡಿ ತಾನೆ? ದೇವರಿಲ್ಲ, ದಿಂಡರಿಲ್ಲ. ನಿಜವಾಗಿ ದೇವರಿದ್ದರೆ ನನ್ನ ಬದುಕನ್ನೇಕೆ ಕತ್ತಲೆಗೆ ನೂಕುತ್ತಿದ್ದ? ನಿತ್ಯವೂ ಆತನಿಗೆಷ್ಟು ಸಂಗೀತ ಸೇವೆ ಸಲ್ಲಿಸಿಲ್ಲ? ದೇವರಂತೆ! ಧರ್ಮವಂತೆ!! ಎಲ್ಲವೂ ದೊಡ್ಡ ಸುಳ್ಳಿನ ಕಂತೆ. ಆ ಅರ್ಚಕನಿದ್ದಾನಲ್ಲಾ ಯಾವಾಗಲೂ ನನಗೆ ದೆವ್ವದಂತೆ ಕಾಣುತ್ತಾನೆ. ದೇವರು, ಧರ್ಮದ ವಿಷಯದಲ್ಲಿ ಪ್ರಶ್ನೆಯೇ ಕೇಳಕೂಡದಂತೆ. ಈ ಗಂಡಸರು ತಾವು ಮಾಡುವ ನಾಲಾಯಕ ಕೆಲಸಕ್ಕೆಲ್ಲಾ ದೇವರನ್ನು ಧರ್ಮವನ್ನು ಗುರಾಣಿಯಾಗಿಸಿಕೊಂಡಿರುತ್ತಾರೆ. ಥೂ, ಎಂದು ಉಗಿಯಬೇಕೆಂದಿದ್ದ ಉಗುಳು ಗಂಟಲಲ್ಲಿಯೇ ಆರಿಹೋಗುತ್ತಿದೆ.

ಒಂಬತ್ತರ ಹರೆಯದ ನನ್ನ ಮಗಳು ಬಚ್ಚಾಸಾನಿಯ ಮದುವೆಯ ವಿಷಯ ಪುರೋಹಿತನಿಗೆ, ಮಾಮ್ಲೆದಾರನಿಗೆ, ಗೌಡ-ಕುಲಕರ್ಣಿಯವರಿಗೆ ಹೇಗೆ ಗೊತ್ತಾಯಿತೇನೊ?! ಮನೆಯಂಗಳದಲ್ಲಿ ದೊಡ್ಡ ಗಲಾಟೆ ಮಾಡುತ್ತಿದ್ದಾರೆ. "ಹದಿನಾರು ಕೂರಿಗೆ ಜಮೀನ್ನ ಸುಮ್ಮನ ಕೊಟ್ಟಿದೆಯೇನು? ನಿನ್ನ ಮಕ್ಕಳು ಸಂಗೀತ ಕಲಿಬೇಕು. ದೇವರ ಸೇವಾ ಮಾಡಬೇಕು. ಅವರವ್ವನ್ನ ಆ ಆನಂದಸಾನಿನ್ನ ಕಂಬಕ್ಕ ಕಟ್ರಿ. ಅವರೊಳಗೆ ಯಾರ ಬೆಸಿ ಅದಾರ ಅವರ್ನ ಕರಕೊಂಡು ನಡಿರಿ" ಇದು ಮಾಮ್ಲೆದಾರನ ಆಜ್ಞೆ. ನನ್ನನ್ನು ಕಂಬಕ್ಕೆ ಕಟ್ಟಿ ನನ್ನೆದುರಿಗೇ ಮೈಕಟ್ಟು, ಹಲ್ಲು, ಕೋಡು ನೋಡಿ ಮಾಡುವ ದನಗಳ ಆಯ್ಕೆಯಂತೆ ನನ್ನ ಇಬ್ಬರು-ಬಚ್ಚಾಸಾನಿ, ಸಣ್ಣಸಾಬಾಸಾನಿ-ಮಕ್ಕಳನ್ನು

ಆರಿಸಿಕೊಂಡು ಬಿಟ್ಟರು. ನನ್ನಿಂದರಳಿದ ಏಳು ಹೂವುಗಳಲ್ಲಿ ಅವರೇ ಅತ್ಯಂತ ಸುಂದರ ಪುಷ್ಪಗಳು. ಅಸಹಾಯಕಳಾದ ನಾನು ಕಣ್ಣೀರು ಸುರಿಸುತ್ತಿದ್ದೆ. ಅವರ ಹುಟ್ಟಿಗೆ ಕಾರಣನಾದವನು ಮಾಮ್ಲೆದಾರನ ಪರವಾಗಿ ನಿಂತಿದ್ದ. ಅವರನ್ನು ಹುಬ್ಬಳ್ಳಿಗೆ ಕರೆದುಕೊಂಡು ಹೋಗಿ 'ಗಂಡಾ ಕಟ್ಟಿಸಿದರು'. ಇಷ್ಟಕ್ಕೆ ಅವರ ಸಿಟ್ಟು ಶಮನಗೊಳ್ಳಲಿಲ್ಲ. ನನ್ನ ಉಳಿದ ಹೆಣ್ಣು ಮಕ್ಕಳನ್ನೂ ದೇವರ ಸೇವೆಗೆ ನಿಲ್ಲಿಸಿದರು. ನನ್ನ ಮಕ್ಕಳ ಮದುವೆಯ ನನ್ನ ಕನಸು ಹುಡಿಹುಡಿಯಾಯಿತು. ನನ್ನಂತೆ, ನನ್ನ ಮಕ್ಕಳು ಕಣ್ಣೀರಿನಿಂದ ಪ್ರತಿಭಟಿಸುತ್ತಲೇ, ಅಸಹಾಯಕತೆಯಿಂದ ಪಾತರ ಬದುಕನ್ನು ಅಪ್ಪಿಕೊಂಡರು. ಬಹುಶಃ ನಮಗುಳಿದಿದ್ದುದು ಅದೊಂದೇ ದಾರಿಯಾಗಿತ್ತು.

ಇದುವರೆಗೆ ನಾನು ಹೇಳಿದ್ದು ಕಲ್ಪಿತ ಕಥೆಯಲ್ಲ. ಲಕ್ಷ್ಮೇಶ್ವರದ ೮೦ರ ಹರೆಯದ ಅಲ್ಲಾಸಾನಿ ಕಣ್ಣೀರು ಸುರಿಸುತ್ತ, ತಾನು ಕಣ್ಣಾರೆ ಕಂಡ, ತನ್ನ ಸಂಬಂಧಿ 'ದೊಡ್ಡಮನಿ' ಕುಟುಂಬಕ್ಕಾದ ಅನ್ಯಾಯದ ದುರಂತ ಘಟನೆಯನ್ನು ವಿವರಿಸಿದಳು. ಇದು ಲಕ್ಷ್ಮೇಶ್ವರದ ಆನಂದಸಾನಿಯೊಬ್ಬಳ ಕಥೆಯಾಗಿ ಮಾತ್ರ ಪರ್ಯವಸಾನಗೊಳ್ಳುವುದಿಲ್ಲ. ಒಂದು ಹಂತದಲ್ಲಿ, ಜಾಗತಿಕವಾಗಿ ಪ್ರಖರವಾಗಿ ಪ್ರಚಲಿತವಿದ್ದ, ಇಂದು ಕಣ್ಮರೆಯಾಗುವಷ್ಟು ತೆಳುವಾಗಿರುವ 'ಪಾತರ ಪರಂಪರೆ' ಯಲ್ಲಿನ ಪಾತರದ ಹೆಣ್ಣುಗಳ ದುರಂತ ಚರಿತ್ರೆಯನ್ನು ಬೆತ್ತಲುಗೊಳಿಸುತ್ತದೆ. ಆನಂದಸಾನಿಯ ಪ್ರತಿಭಟನೆ ಈ ಸಾಮಾಜಿಕ ವ್ಯವಸ್ಥೆಯನ್ನು ವಿರೋಧಿಸುವುದೇ ಆಗಿದೆ. ಮಹಿಳೆ ಎಲ್ಲಾ ಕಾಲದಲ್ಲೂ ಪುರುಷನ ಸಾಮಾಜಿಕ ವ್ಯವಸ್ಥೆಯನ್ನು ತಿರಸ್ಕರಿಸುವ ಮೂಲಕವೇ ಸಾಮಾಜಿಕ ಕ್ರಾಂತಿಯನ್ನು ಮಾಡಿದ್ದು ನಿಜ. ಆದರೆ, ವ್ಯವಸ್ಥಿತವಾಗಿ ಸಂರಚನೆಗೊಂಡ ಪುರುಷ ಪ್ರಧಾನ ಸಮಾಜ ಅದಕ್ಕೆ ದಿವ್ಯ ನಿರ್ಲಕ್ಷ್ಯವನ್ನು ತೋರುವ ಮೂಲಕ ಕ್ರಾಂತಿಯನ್ನು ಪರಿಣಾಮಕಾರಿಯಾಗದಂತೆ ತಡೆಹಿಡಿಯಿತು.

ಪಾತರದವಳ ದುರಂತ ಚರಿತ್ರೆ, ಒಟ್ಟು ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣು 'ಉಪಭೋಗ ವಸ್ತು'ವಾಗಿ ಯಾಕೆ ಪರಿಗಣಿಸಲ್ಪಟ್ಟಳು ಎನ್ನುವ ಸತ್ಯದ ಎಳೆಗಳನ್ನು ಬಿಟ್ಟುಕೊಡುತ್ತದೆ. ಈ ಎಳೆಗಳ ಶೋಧ ಸಮಕಾಲೀನ ಸ್ತ್ರೀವಾದಿ ಅಧ್ಯಯನಗಳ ಪ್ರಮುಖ ಗುರಿಯಾಗಬೇಕು. ಆ ಎಳೆಗಳ ಶೋಧ ಕೇವಲ ಪಾತರದವಳ ಅಂತರ್ಯದ ಶೋಧವಾಗಿ ಪರ್ಯವಸಾನಗೊಳ್ಳಬಾರದು. ಅದು ಒಟ್ಟು ಸ್ತ್ರೀ ಜನಾಂಗದ ದುರಂತ ಬದುಕಿನ ಅಂತರ್ಯದ ಶೋಧವಾಗಿ ಬೆಳೆಯಬೇಕು. ಯಾಕೆಂದರೆ ಪಾತರದವಳ ದುರಂತದ ಶೋಧದ ಕೊಂಡಿ ಭಾರತೀಯ ಸಂಸ್ಕೃತಿಯಲ್ಲಿ ಎಲ್ಲ ನೆಲೆಯಲ್ಲಿ ತುಳಿತಕ್ಕೊಳಗಾದ ಸ್ತ್ರೀ ಸಮುದಾಯದೊಂದಿಗೆ ಬೆಸೆಯುತ್ತದೆ.

ಮಾನವ ಚರಿತ್ರೆಯ ಒಂದು ವಿಶಿಷ್ಟ ಸಂದರ್ಭದಲ್ಲಿ ಹುಟ್ಟಿಕೊಂಡ ಪಾತರದ ಪದ್ಧತಿ ಕಾಲಕ್ರಮೇಣ ಬೇರೆ ಬೇರೆ ತಿರುವುಗಳನ್ನು ಪಡೆದುಕೊಂಡುದನ್ನು ಜಾಗ್ರತೆಯಿಂದ ಪರಿಶೀಲಿಸಬೇಕು. ಸ್ತ್ರೀ ಮೇಲೆ ನಡೆದ ಲೈಂಗಿಕ ಶೋಷಣೆಯೇ, ಮಾನವ ಚರಿತ್ರೆಯಲ್ಲಿ ಕಾಣುವ ಮೊದಲ ಶೋಷಣೆ. ನಂತರದಲ್ಲಿ ಜಾತಿ, ವರ್ಗ, ಧರ್ಮ ಪ್ರಧಾನವಾದ ಶೋಷಣೆಯ ಹಂತಗಳು ರೂಪಗೊಂಡವು. ದೇಹವನ್ನೇ ಮಾನದಂಡವಾಗಿಟ್ಟುಕೊಂಡು ನಡೆದ ಸ್ತ್ರೀಯ ಲೈಂಗಿಕ ಶೋಷಣೆ, ವರ್ಗ-ಜಾತಿಗಳ ನೆಲೆಯಲ್ಲಿ ನಡೆದ

ಶೋಷಣೆಗಿಂತಲೂ ಭಿನ್ನವಾದದ್ದು, ಭೀಕರವಾದದ್ದು.

ಮರುಪರಿಶೀಲನೆಗೆ ಒಳಪಟ್ಟು ಚರಿತ್ರೆಯು ಪುನಾರಚನೆಯಾಗುತ್ತಿರುವ ಇಂದಿನ ಸಾಂಸ್ಕೃತಿಕ ಸಂದರ್ಭದಲ್ಲಿ ಮರೆಯಾಗುತ್ತಿರುವ ಪಾತರದವರನ್ನು ಕುರಿತ ಪ್ರಸ್ತುತ ಅಧ್ಯಯನವು ಅಗತ್ಯವಾಗಿದ್ದು ಹೊಸನೆಲೆಗಳಿಂದ ಚರ್ಚಿತವಾಗಬೇಕಿದೆ. ನಮ್ಮ ಸಾಂಸ್ಕೃತಿಕ ಪರಿಪ್ರೇಕ್ಷ್ಯದಲ್ಲಿ ಪಾತರದ ಜನಾಂಗ ಹುಟ್ಟಿಕೊಂಡ ಆಶಯ ಮತ್ತು ಅದು ರಾಜಕೀಯ ನೆಲೆಯಲ್ಲಿ, ಪುರೋಹಿತಶಾಹಿ ಮತ್ತು ಮೇಲುವರ್ಗದ ಸ್ವಾರ್ಥತೆಯಲ್ಲಿ ಪಡೆದುಕೊಂಡ ಆಕೃತಿಗಳನ್ನು ಪ್ರತ್ಯೇಕ, ಪ್ರತ್ಯೇಕವಾಗಿಯೇ ಚಿಂತನೆಗೆ ಒಳಪಡಿಸಬೇಕಾಗಿದೆ. ಪಾತರದ ಜನಾಂಗವನ್ನು ಹಲವಾರು ಆಯಾಮಗಳೊಂದಿಗೆ ಹಾಗೂ ಆಯಾ ಆಯಾಮಗಳಿಗೆ ಭದ್ರ ತಳಪಾಯವೊದಗಿಸಿದ ಧಾರ್ಮಿಕ, ರಾಜಕೀಯ, ಆರ್ಥಿಕ, ಸಾಮಾಜಿಕ ಪರಿಸರಗಳನ್ನು ಬಹು ಎಚ್ಚರಿಕೆಯಿಂದ ಪರಿಗಣಿಸಬೇಕಾಗಿದೆ. ಈ ಎಲ್ಲ ಆಯಾಮಗಳ ಮರು ಪರಿಶೋಧನೆಯ ಉದ್ದೇಶ ಭಾರತೀಯ ಸಂಸ್ಕೃತಿಯ ಬಹುಮುಖತೆಯ ನೆಲೆಯಲ್ಲಿ ನಡೆದ ಶೋಷಣೆಯನ್ನು ಅರ್ಥೈಸಿಕೊಳ್ಳುವುದೇ ಆಗಿದೆ.

ಒಂದು ಸಂದರ್ಭದಲ್ಲಿ ಕರ್ನಾಟಕದಲ್ಲೆಲ್ಲಾ ದಟ್ಟವಾಗಿ ಚಾಲ್ತಿಯಲ್ಲಿದ್ದ 'ಪಾತರ' ಸಂಪ್ರದಾಯವು ಕರ್ನಾಟಕದ ತುಂಬೆಲ್ಲಾ ಪಾತರದವರಿದ್ದ ಸತ್ಯವನ್ನು ತೆರೆದಿಡುತ್ತದೆ. ಅಪರೂಪವಾಗುತ್ತಾ ಬಂದ ಪಾತರದ ಸಂಪ್ರದಾಯ, ಬದಲಾದ ಸಾಮಾಜಿಕ ಮೌಲ್ಯಗಳಿಂದಾಗಿ ಸಂಕೋಚದಿಂದ ತಮ್ಮ ಅಡ್ಡ ಹೆಸರನ್ನು ಬದಲಿಸಿಕೊಂಡ ಪಾತರದವರಿಂದಾಗಿ ಪಾತರದವರ ಜನಗಣತಿ ಅಸಾಧ್ಯವಾಗಿದ್ದು, ಆ ಮೂಲಕ ಅವರ ಸಂದರ್ಶನ ನಡೆಸುವುದು ಕಷ್ಟವಾದುದು. ಬಡತನದಿಂದ ತತ್ತರಿಸಿ, ಆರ್ಥಿಕ ಸಹಾಯಕ್ಕಾಗಿ, ಸರ್ಕಾರದ ಪಿಂಚಣಿಗಾಗಿ ಬಾಯ್ತೆರೆದು ಕುಳಿತ ಮತ್ತು ಇಂದಿಗೂ ಪರಂಪರೆಯನ್ನು ಮುಂದುವರೆಸಿದ ಪಾತರದ ಹೆಣ್ಣುಮಕ್ಕಳನ್ನು ಮಾತ್ರ ಗುರುತಿಸಿ, ಸಂದರ್ಶಿಸಲು ಸಾಧ್ಯವಾಯಿತು. ಈ ಅನಿವಾರ್ಯತೆಯ ಹಿನ್ನೆಲೆಯಲ್ಲಿಯೇ ಲಕ್ಷ್ಮೇಶ್ವರ, ಸಿಂದಗಿ, ಬನವಾಸಿಯಲ್ಲಿ ಪಾತರದವರನ್ನು ಸಂದರ್ಶಿಸಿದೆ.

ಸಂದರ್ಶನದ ಮೂಲಕ ಅವರ ಹೃದಯಾಂತರಾಳದಲ್ಲೇ ಗುಪ್ತವಾಗಿ ಹರಿಯುತ್ತಿದ್ದ ನೋವಿನ ಲಯವನ್ನು ಶೋಧಿಸುವ ಪ್ರಯತ್ನದಲ್ಲಿ ಭಾರತೀಯ ಸಂಸ್ಕೃತಿಯಲ್ಲಿನ ವಿರೂಪವನ್ನು ಬಯಲು ಪಡಿಸುತ್ತಾ ಅವರ ಬದುಕಿನ ಅನನ್ಯವಾದ ವಿಭಿನ್ನ ಮಾದರಿಗಳನ್ನು ವಿಶ್ಲೇಷಣೆಗೆ ಗುರಿಪಡಿಸಿರುವೆ. ಪಾತರದವಳ ಹುಟ್ಟು, ಬೆಳವಣಿಗೆ, ಋತುಸ್ರಾವ, ಹೆರಿಗೆ, ಮಕ್ಕಳ ಲಾಲನೆ-ಪಾಲನೆ, ಬದುಕಿನಲ್ಲಿ ಆಕೆ ಅನುಭವಿಸಿದ ನೋವು-ನಲಿವುಗಳು, ಸಾವು ಹೀಗೆ ಈವರೆಗೆ ದಾಖಲಾಗದ ಮತ್ತು ದಾಖಲೆಗೆ ಅಪ್ರಸ್ತುತವೆನಿಸಿದ ಅಂಶಗಳನ್ನೇ ದಾಖಲಿಸುವುದರ ಮೂಲಕ ಪಾರಂಪರಿಕ ಚರಿತ್ರೆಯನ್ನು ಪ್ರಶ್ನಿಸುವ ಉದ್ದೇಶ ನನ್ನದಾಗಿದೆ. ಆ ಮೂಲಕವೇ ಪುರುಷ ನಿರ್ಮಿತ ಪಾರಂಪರಿಕ ಇತಿಹಾಸ ಗ್ರಹಿಕೆಗಳನ್ನು ಭಂಜಿಸಿ ಹುಸಿಗೊಳಿಸುವ ಪ್ರಯತ್ನ ಮಾಡಿರುವೆ.

ಧಾರ್ಮಿಕ ಚೌಕಟ್ಟಿನ ಹಿಡಿತಕ್ಕೆ ಸಿಕ್ಕ ಪಾತರದ ಹೆಣ್ಣಿನ ಜೀವನದ ನೋವಿನ ನಾಡಿಮಿಡಿತವನ್ನು ವೈಚಾರಿಕತೆಯ ನೆಲೆಗಟ್ಟಿನಲ್ಲಿ ಹಿಡಿಯಹೊರಟಾಗ, ಆ ಚೌಕಟ್ಟಿನ ವಿವರಗಳ ಅರಿವು ಅಗತ್ಯವಾದುದು. ಪಾತರದವರ ಜೀವನ ಸ್ವರೂಪದ ಸೃಷ್ಟಿಗೆ ಕಾರಣವಾದ ಧಾರ್ಮಿಕ, ರಾಜಕೀಯ, ಸಾಮಾಜಿಕ -ಸಂಗತಿಗಳಿಗೆ ಆ ಜನಾಂಗದ ನೋವು ನಲಿವು ಮುಖ್ಯವಾಗದೆ ತನ್ನ ಪದ್ಧತಿಯ ಉಳಿವಿಗೆ ಜನಾಂಗ ಒಂದು ಮಾಧ್ಯಮವಾಗಿದೆ.

## ಉಗಮ - ಬೆಳವಣಿಗೆ

ದೇವರೆದುರಿಗೆ ಹಾಡಿ ಕುಣಿದು-ಕುಪ್ಪಳಿಸಿ ತನ್ನ ಅಂತರಂಗದ ನಿವೇದನೆಯನ್ನು ಮಂಡಿಸುತ್ತಿದ್ದ ಮಾನವ ಚರಿತ್ರೆಯಲ್ಲಿ ದೇವರ ಹೆಸರಿನಲ್ಲೇ ಕುಣಿದು ಪುರುಷ ಕೇಂದ್ರಿತ ಧಾರ್ಮಿಕ ಬೆಳವಣಿಗೆಗೆ ಪ್ರಮುಖ ಆಕರ್ಷಕ ಕೇಂದ್ರಬಿಂದುವಾಗಿ ಒಂದು ಸ್ತ್ರೀ ವರ್ಗ ಪಾತರದ ಜನಾಂಗವಾಗಿ ಬೆಳೆದು ಬಂದು, ಇಂತಹ ಶೋಷಿತ ಮಹಿಳಾ ಪರಂಪರೆ ನಿರ್ಮಿತವಾದದ್ದು ಕುತೂಹಲ ಕೆರಳಿಸುತ್ತದೆ. ದೇವರ ಪ್ರೀತ್ಯರ್ಥವಾಗಿ ಗಂಡು ಹೆಣ್ಣುಗಳಿಬ್ಬರೂ ದೇವಸ್ಥಾನದಲ್ಲಿ ನರ್ತನ ಮಾಡುವ ನಟುವ ಜನಾಂಗದ ಚರಿತ್ರೆಯಲ್ಲಿ ಗಂಡು ಹಿಂದೆ ಸರಿದು ಪರದೆಯ ಎದುರಿಗೆ ಹೆಣ್ಣು ಮಾತ್ರ ಉಳಿದುಕೊಂಡದ್ದು ಹೆಣ್ಣಿನ ಮತ್ತೊಂದು ದುರಂತ ಇತಿಹಾಸವನ್ನು ತೆರೆದಿಡುತ್ತವೆ. ಭಾರತೀಯ ಸಾಂಸ್ಕೃತಿಕ ಸಂಗತಿಗಳು ಪುರುಷ ಪರವಾಗಿದ್ದು ಅವಕಾಶ ದೊರೆತಾಗಲೆಲ್ಲಾ ಧರ್ಮದ ಮುಖವಾಡದಲ್ಲಿ ಸ್ತ್ರೀಯ ಶೋಷಣೆ ನಡೆಸುತ್ತಲೇ ಬಂದಿದೆ. ಹೆಣ್ಣಿನ ದೃಷ್ಟಿ, ನಿಸರ್ಗ ಸಹಜವಾಗಿದ್ದ ತಾಯ್ತನದ ಬಾಧ್ಯತೆಯತ್ತ ಸಂಪೂರ್ಣ ಕೇಂದ್ರಿತವಾದಾಗ ದಿನಗಳೆದಂತೆ ವಿಭಿನ್ನ ಸ್ವರೂಪದಲ್ಲಿ ಬೆಳೆದ ಸಮಾಜ ನಿರ್ಮಾಣದಲ್ಲಿ ನಿರ್ಲಕ್ಷ್ಯವಹಿಸಿದಳೆಂದು ತೋರುತ್ತದೆ. ಹೀಗಾಗಿಯೇ, ಸಮಾಜ ನಿರ್ಮಾಣ ಪರಂಪರೆಯ ಹೊರಗಿದ್ದ ಮಹಿಳೆ ಪರಕೀಯಳಾಗಿಯೇ ಉಳಿದಳು. ಬಾಧ್ಯತೆಗಳಿಂದ ತಪ್ಪಿಸಿಕೊಳ್ಳುತ್ತ ಹಕ್ಕುಗಳನ್ನೇ ಸ್ಥಾಪಿಸುತ್ತ ನಡೆದ ಪುರುಷನ ಕುತಂತ್ರಗಳಿಗೆ, ಬರಿ ಬಾಧ್ಯತೆಗಳನ್ನೇ ಹೊತ್ತ ಸ್ತ್ರೀ, ಸಹಜವಾಗಿಯೇ ಅವನ ಬಲಿಪಶುವಾದಳು. ಆತನ ಉಪಭೋಗದ ವಸ್ತುವಾದಳು. ಅದಕ್ಕಾಗಿ, ಇಂತಹ ಧಾರ್ಮಿಕ, ರಾಜಕೀಯ, ಸಾಮಾಜಿಕ ಹುನ್ನಾರಗಳ ಕಪ್ಪೆಚಿಪ್ಪಿನಿಂದ ಮಹಿಳೆಯನ್ನು ಬಿಡುಗಡೆಗೊಳಿಸಬೇಕಾಗಿದೆ. ಈ ಎಲ್ಲವುಗಳನ್ನು ರಾಜಕೀಯ ನೆಲೆಯಲ್ಲೇ ಚಿಂತನೆಗೊಳಪಡಿಸಬೇಕು.

ಪಾತರದ ಜನಾಂಗ ಬೆಳೆದು ಬಂದ ಚರಿತ್ರೆಯನ್ನು ನಾಲ್ಕು ಘಟ್ಟಗಳಲ್ಲಿ ಗುರುತಿಸಬಹುದು. ಮೊದಲ ಹಂತದಲ್ಲಿ, ಜಾತಿ, ವರ್ಗ, ಲಿಂಗಭೇದವಿಲ್ಲದೆ ಎಲ್ಲರೂ, ದೇವರನ್ನು ಒಲೈಸುವುದಕ್ಕಾಗಿ, ತಮ್ಮ ಸುಖ-ದು:ಖಗಳನ್ನು ಹಂಚಿಕೊಳ್ಳುವುದಕ್ಕಾಗಿ ಕುಣಿಯುತ್ತಿದ್ದರು. ಹಾಡುತ್ತಿದ್ದರು. ಈ ಘಟ್ಟದಲ್ಲಿ 'ನಟುವ' ಎನ್ನುವ ಜನಾಂಗವೇ ರೂಪಿತವಾಗಿರಲಿಲ್ಲ. ಎರಡನೆಯ ಘಟ್ಟದಲ್ಲಿ ಧರ್ಮದ ಹುಟ್ಟಿನೊಂದಿಗೆ ವಿವಾಹ ಸಂಸ್ಥೆ ಪ್ರಾರಂಭವಾದರೂ ಅದನ್ನು ಗಟ್ಟಿಯಾಗಿ ನಂಬಿರದ, ಆ ವ್ಯವಸ್ಥೆಗೆ ಹೊಂದಿಕೊಳ್ಳಲಾಗದ ಜನರು ಇದ್ದರು. ದೇವರ ಮುಂದೆ ಕುಣಿದು, ಹಾಡಿ ಸೇವೆ

ಸಲ್ಲಿಸುತ್ತ ವಂಶ ಮುಂದುವರಿಕೆಗಾಗಿ ತಮಗೆ ಇಷ್ಟವಾದ ಪುರುಷರೊಂದಿಗೆ ಕೂಡಿಕೊಳ್ಳುತ್ತಿದ್ದರು. ಈ ಹಂತದಲ್ಲಿ ಪುರುಷನ ಪ್ರವೇಶ ವಂಶ ಮುಂದುವರಿಕೆಗಾಗಿ ಇತ್ತೆ ವಿನಃ ಆರ್ಥಿಕ ಬೆಂಬಲಕ್ಕಾಗಿ ಅಲ್ಲ. ಧರ್ಮ, ಮೋಕ್ಷಗಳಂತಹ ಸಂಗತಿಗಳು ಸ್ಪಷ್ಟವಾಗಿ ಆಕಾರ ತಳೆಯುತೊಡಗಿದಾಗ ಬ್ರಹ್ಮಚರ್ಯದಂತಹ ಕಲ್ಪನೆಗೆ ಗರಿಮೂಡತೊಡಗಿತು. ಹೀಗಾಗಿಯೇ ಮೂರನೆಯ ಮಜಲಿನಲ್ಲಿ ಮಹಿಳೆ ಬ್ರಹ್ಮಚರ್ಯವನ್ನು ಪಾಲಿಸುತ್ತ ದೇವರಿಗೆ ಸಂಗೀತ-ನೃತ್ಯಗಳ ಸೇವೆ ಸಲ್ಲಿಸುತ್ತ ನಡೆದಳು. ನಾಲ್ಕನೆಯ ಘಟ್ಟದಲ್ಲಿ ಪುರೋಹಿತಶಾಹಿತ್ವ ರಾಜಕೀಯ ನೆಲೆಯಲ್ಲಿ ಭದ್ರವಾಗಿ ಬೇರುಬಿಟ್ಟು ನಿಂತಾಗ ಪುರೋಹಿತನೇ ದೇವಸ್ವರೂಪಿಯಾದನು. ದೇವನಿಗೆಂದು ಅರ್ಪಿಸುವ ವಸ್ತುಗಳೆಲ್ಲಾ ಆತನಿಗೇ ಸಲ್ಲಲ್ಪಟ್ಟವು. ಈ ಹೊತ್ತಿಗಾಗಲೇ ಹೆಣ್ಣನ್ನು ಕಾಮಪ್ರೇರಕ ವಸ್ತುವಾಗಿ ಪರಿಗಣಿಸಲ್ಪಟ್ಟಿತ್ತು. ತನ್ನ ಭೋಗಕ್ಕೆ ಅನುಕೂಲವಾದ ಸ್ತ್ರೀಯನ್ನು ತನ್ನ ಮನರಂಜನೆಗೆ, ಕಾಮ ಉತ್ತೇಜಕ್ಕೆ ಪ್ರೇರಕ -ಪೂರಕವಾಗುವಂತೆ ಧಾರ್ಮಿಕ ಚೌಕಟ್ಟಿನಲ್ಲಿ ಕುಣಿಸಿ, ಅವಳನ್ನು ತಾನೇ ಉಪಭೋಗಿಸತೊಡಗಿದನು. ಹೀಗಾಗಿಯೇ ತನ್ನ ಉಪಭೋಗಕ್ಕೆ ಅನಗತ್ಯವಾದ ಪುರುಷ ನಟನನ್ನು ತೆರೆಯ ಹಿಂದೆ ಸರಿಸಿದನು. ದೇವರ ಪ್ರೀತ್ಯರ್ಥಕ್ಕೆಂದು ಕುಣಿಯುತ್ತಿದ್ದ ಕುಣಿತ, ಹಾಡುತ್ತಿದ್ದ ಹಾಡು ಕಲೆಯ ರೂಪ ಧರಿಸಿದ್ದು ಈ ಹಂತದಲ್ಲಿಯೇ. ಎರಡನೆಯ ಘಟ್ಟದಲ್ಲಿ ಭ್ರೂಣಾವಸ್ಥೆಯಲ್ಲಿದ್ದ ಈ ಸೇವಾಪದ್ಧತಿ ನಾಲ್ಕನೆಯ ಘಟ್ಟದ ಹೊತ್ತಿಗೆ ಸಂಪೂರ್ಣ ಸ್ವರೂಪವನ್ನು ಪಡೆದುಕೊಂಡಿತು, ನಟುವ ಜನಾಂಗ ನಿರ್ಮಾಣವಾಯಿತು. ಮಾನವ ಚರಿತ್ರೆಯ ಬೆಳವಣಿಗೆಯ ಘಟ್ಟಗಳನ್ನು ನಿಖರವಾಗಿ ಹೇಳಲು ಸಶಕ್ತವಾದ ಆಧಾರಗಳು ಇಲ್ಲದ ಕಾರಣ ಹೀಗಾಗಿರಲು ಸಾಧ್ಯವೆಂದು ಹೇಳಬಹುದೇ ವಿನಃ ಅದೇ ಅಂತಿಮ ಸತ್ಯವೆಂದಲ್ಲ. ನಟುವ ಜನಾಂಗ ಮತ್ತೊಂದು ರೀತಿಯಲ್ಲಿ ರೂಪಗೊಂಡಿರುವ ಸಾಧ್ಯತೆಯೂ ಇದೆ. ಗಂಡು-ಹೆಣ್ಣುಗಳು ದೇವರೆದುರಿಗೆ ಸಂಗೀತ ನೃತ್ಯಗಳ ಪೂಜಾಕ್ರಮವನ್ನು ಅನುಸರಿಸಿ ಭಕ್ತಿಯಿಂದ ನಮಿಸಿ ಸ್ವತಂತ್ರವಾಗಿ ಹೊರಟು ಹೋಗುತ್ತಿದ್ದರು. ಈ ಘಟ್ಟದಲ್ಲಿ ನಟುವ ಹೆಣ್ಣು ತನ್ನ ಜನಾಂಗದವನನ್ನೇ ವಿವಾಹವಾಗುತ್ತಿದ್ದರೂ, ಆರ್ಥಿಕವಾಗಿ ಗಂಡಸನ್ನು ಅವಲಂಬಿಸಿರಲಿಲ್ಲ. ಧಾರ್ಮಿಕ ಬೆಳವಣಿಗೆಗಾಗಿ ಹಪಹಪಿಸುತ್ತಿದ್ದ ಪುರೋಹಿತನಿಗೆ ; ರೂಪವುಳ್ಳ, ಸಂಗೀತ ನೃತ್ಯಗಳನ್ನು ಬಲ್ಲ ನಟುವ ಜನಾಂಗ ಅತ್ಯಂತ ಸೂಕ್ತವೆನಿಸಿರಬೇಕು. ಹೀಗಾಗಿಯೇ ಅವರಿಗೆ ದೇವದಾಯ (ಹೊಲ) ನೀಡಿ ಅಲೆಮಾರಿಗಳಾದ ಅವರನ್ನು ಒಂದೆಡೆ ಸ್ಥಿರವಾಗಿ ನೆಲೆನಿಲ್ಲಿಸಿದನು. ದೇವರಿಗೆ ಸಲ್ಲುವ ವಸ್ತು, ಆತನ ಪ್ರತಿನಿಧಿಯಾದ ಪುರೋಹಿತನಿಗೆ ಸಲ್ಲಲ್ಪಡಬೇಕೆಂಬ ರಾಜಕೀಯ ಕುತಂತ್ರದಿಂದ ಧಾರ್ಮಿಕ ಭೀತಿಯನ್ನು ಹುಟ್ಟಿಸಿ ನಟುವ ಹೆಣ್ಣು ಮಕ್ಕಳನ್ನು ಅವರ ಗಂಡಸರ ಹಿಡಿತದಿಂದ ತಪ್ಪಿಸಿ ತಾನೇ ಅನುಭೋಗಿಸತೊಡಗಿದನು. ಇದರಿಂದಾಗಿ ನಟುವ ಗಂಡಸರ ವಿವಾಹ ಕಷ್ಟವಾಗಿ ಅನ್ಯ ಜಾತಿಯ ಹುಡುಗಿಯನ್ನು ಕದ್ದು ಇಲ್ಲವೆ ಕೊಂಡುಕೊಂಡು ಮದುವೆಯಾಗುವ ದುರ್ಭರ ಪ್ರಸಂಗ ನಿರ್ಮಾಣವಾಯಿತು. ನಟುವರ ಚರಿತ್ರೆ ಇನ್ನೂ ಹೆಚ್ಚಿನ ಅಧ್ಯಯನವನ್ನು ಬಯಸುತ್ತದೆ. ಕಾಲಕ್ರಮೇಣ ಪಾತರದ

ಸಂಪ್ರದಾಯ ಭಾರತೀಯ ಸಂಸ್ಕೃತಿಯಲ್ಲಿ ಪ್ರಮುಖ ಅಸ್ತಿತ್ವವನ್ನು ಪಡೆದುಕೊಂಡಿತು. ಅನೈತಿಕತೆಯನ್ನು ಧರ್ಮದ ಮುಖವಾಡದಲ್ಲಿ ನೈತಿಕ ಅಪ್ಯಾಯಮಾನವನ್ನಾಗಿಸಿ, ಅವರ ಇಡೀ ಬದುಕನ್ನೇ ರಂಜಕವನ್ನಾಗಿಸಿದ್ದಲ್ಲಿ ಖಂಡಿತಕ್ಕೂ ಪುರುಷನ ರಾಜಕೀಯ ಹುನ್ನಾರಗಳಿವೆ. ಇಂತಹ ಸಾಂಸ್ಕೃತಿಕ ಸಂಗತಿಗಳು ಪ್ರಗತಿ ಇಲ್ಲವೆ ಮಾನವ ಹಿತಾಭಿಮುಖಿಗೆ ತಡೆಯನ್ನೊಡ್ಡುವ ಅಡೆತಡೆಗಳು. ಧರ್ಮದ ಹೆಸರಿನಲ್ಲಿ ಸ್ತ್ರೀಯರನ್ನು ಪುರುಷರು ಭಯಗೊಳಿಸಿ ಇಂಥದೊಂದು ಚಾರಿತ್ರಿಕ ದುರಂತವನ್ನು ನಿರ್ಮಿಸಿದರು.

## ಪದ ನಿಷ್ಪತ್ತಿ

ನಟುವರು ಮತ್ತು ಪಾತರದವರು ಬೇರೆ ಬೇರೆಯಲ್ಲ. ನಟ್ ಎಂದರೆ (ಕನ್ನಡ ನಿಘಂಟು, ಸಂಪುಟ-೪) ಸೋಗು ಹಾಕುವುದು, ಅಭಿನಯಕಾರ, ಕ್ಷತ್ರಿಯನಿಗೆ ಕೀಳು ಜಾತಿಯಲ್ಲಿ ಹುಟ್ಟಿದವನು. 'ನಟಿ' -ಇದರ ಅರ್ಥ ಪಾತ್ರದವಳು, ಕುಣಿಯುವವಳು, ನಟಿಸುವವಳು, ನಾಟಕದಲ್ಲಿ ಸೂತ್ರಧಾರನ ಹೆಂಡತಿ ಎಂದು ಮುಂತಾದ ಅರ್ಥಗಳಿವೆ. 'ಪಾತ್ರ'ವೇ ಪಾತರ ಎಂದಾಗಿದೆ. ದೇವರೆದುರಿಗೆ ಆಡುವ ತನ್ನ ಪಾತ್ರಗಳಾದ ನೃತ್ಯ, ಹಾಡುಗಳ ಮೂಲಕ ಜನಸಮುದಾಯದ ನಿವೇದನೆಯನ್ನು ತಿಳಿಯಪಡಿಸುವವಳೇ ಪಾತರದವಳು. ಹೀಗಾಗಿಯೇ ನಟುವರು ಮತ್ತು ಪಾತರದವರಲ್ಲಿ ಅಂತಹ ಮೂಲಭೂತ ವ್ಯತ್ಯಾಸವೇನಿಲ್ಲ. ನಟುವರು ಇದೇ ಕಾಲಾಂತರದಲ್ಲಿ ಪಾತರದವರು ಎಂದು ರೂಪಾಂತರಗೊಂಡಿದೆ. ಇವರನ್ನು ಕಲಾವಂತರು ಎಂದೂ ಗುರುತಿಸುವರು. ವಿವಾಹ ಸಂಸ್ಥೆ ಸಮಾಜದ ಕಣ್ಣಾದಾಗ ವೈವಾಹಿಕ ಜೀವನದ ಹೊರಗಿದ್ದು ಮಕ್ಕಳನ್ನು ಪಡೆಯುವ ಈ ಹೆಣ್ಣು ಮಕ್ಕಳ ಜೀವನಕ್ರಮವನ್ನು ಹಾದರವಾಗಿ ಪರಿಗಣಿಸಿದಾಗ ಪಾತರವನ್ನು ಹಾದರದ ಅರ್ಥದಿಂದ ಗುರುತಿಸತೊಡಗಿದರು.

ಪಾತರದವಳನ್ನು ದೇವದಾಸಿಯೆಂದು ಉಲ್ಲೇಖಿಸಿದ್ದು ಯಾವ ಶಾಸನಗಳಲ್ಲಾಗಲಿ, ಸಾಹಿತ್ಯದಲ್ಲಾಗಲಿ ಕಂಡು ಬರುವುದಿಲ್ಲ. ಸೂಳೆ, ದಾಸಿ ಎಂಬ ಸಂಬೋಧನೆಯಿಂದ ಗುರುತಿಸಲ್ಪಡುತ್ತಿದ್ದರು. ಹೆಬ್ಬಾಳಿನ ಕ್ರಿ. ಶ ೯೫೫ರ ಶಾಸನದಲ್ಲಿಯ ಅಂಗಭೋಗದ ಸೂಳೆಯರು, ಪಾತರದವರು ಎಂಬ ಭಿನ್ನ ಉಲ್ಲೇಖಗಳು ೧೧ನೆಯ ಶತಮಾನದಲ್ಲಿ ಅಂಗಭೋಗದ ಸೂಳೆ ರಂಗಭೋಗದ ಸೂಳೆಯೆಂದು ಕವಲೊಡೆದದ್ದನ್ನು ಬಹಿರಂಗಗೊಳಿಸುತ್ತದೆ.

## ಪ್ರಸರಣ

ಭಾರತದಲ್ಲಷ್ಟೇ ಅಲ್ಲ ಜಾಗತಿಕ ಮಟ್ಟದಲ್ಲಿ ಈ ಪದ್ಧತಿಯ ಅಸ್ತಿತ್ವವನ್ನು ಗುರುತಿಸಬಹುದು. ಪ್ರಾಚೀನ ಅರೇಬಿಯ, ಇಜಿಪ್ತ್, ಸಿರಿಯ ಮೊದಲಾದ ಕಡೆಗಳಲ್ಲದೆ ಪಶ್ಚಿಮ ಆಫ್ರಿಕದಲ್ಲಿ ಅದರ ಪ್ರಚಲತೆ ಪ್ರಬಲವಾಗಿತ್ತು. ಇಂದಿಗೂ ಪಶ್ಚಿಮ ಆಫ್ರಿಕಾದಲ್ಲಿ ಅದು ಜೀವಂತವಾಗಿದೆ.

ಭಾರತದಲ್ಲಿ ಈಗ ದೊರೆತ ಉಲ್ಲೇಖದ ಹಿನ್ನೆಲೆಯಲ್ಲಿ ಇದರ ಕಾಲವನ್ನು ಕ್ರಿ.ಶ

ಮೂರನೆಯ ಶತಮಾನ ಎಂದು ಗುರುತಿಸಬಹುದು. ಇದರ ಮೊಟ್ಟಮೊದಲ ದಾಖಲೆಯನ್ನು ಕವಿ ಕಾಳಿದಾಸನ ಮೇಘದೂತದಲ್ಲಿ ಗುರುತಿಸಬಹುದು. "ಸೂರ್ಯ ತಾಯಿ ಗರ್ಭವನ್ನು ಸೇರುವ ಹೊತ್ತಿಗೆ ಉಜ್ಜನಿಯ ಮಹಾಕಾಲ ದೇವಸ್ಥಾನದಲ್ಲಿ ನರ್ತಕಿಯರಿಂದ ನರ್ತನ ಸೇವೆ ನಡೆಯುತ್ತಿತ್ತು." (ಮೇಘದೂತ, ೧-೩೫) ರಾಜತರಂಗಿಣಿಯಲ್ಲಿಯ ಉಲ್ಲೇಖದಂತೆ ಕಾಶ್ಮೀರದಲ್ಲಿ ಕ್ರಿ. ಶ ೭ನೆಯ ಶತಮಾನದಲ್ಲಿ ಈ ಪದ್ಧತಿ ಪ್ರಬಲವಾಗಿದ್ದಿತು. "ಈ ಸಂಪ್ರದಾಯದ ಉಲ್ಲೇಖ ಜಾತಕ ಸಾಹಿತ್ಯದಲ್ಲಿ ಇಲ್ಲ.. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಗಣಿಕೆಯರನ್ನು ಕುರಿತು ವಿಸ್ತಾರವಾದ ಪ್ರಸ್ತಾಪವಿದ್ದರೂ ನಟುವರನ್ನು ಹೆಸರಿಸಿಲ್ಲ... ದೇವರ ಸೇವಾರ್ಥವಾಗಿ ನರ್ತನ ಹಾಗೂ ಗಾಯನಕ್ಕಾಗಿ ಸ್ತ್ರೀಯರನ್ನು ನೇಮಿಸಿಕೊಳ್ಳಬೇಕೆಂಬುದಕ್ಕೆ ಹಲವಾರು ಪುರಾಣಗಳು ಒತ್ತು ನೀಡುತ್ತವೆ. ನರ್ತಕಿಯರು, ಗಾಯಕಿಯರನ್ನು ಖರೀದಿಸಿ ದೇವಸ್ಥಾನಕ್ಕೆ ಸಲ್ಲಿಸಿದರೆ, ಸ್ವರ್ಗ ಪ್ರಾಪ್ತಿಯಾಗುತ್ತದೆಂದು ಪುರಾಣಗಳು ಭ್ರಮೆ ಹುಟ್ಟಿಸಿದ್ದು ವಿಷಾದದ ಸಂಗತಿ. ಭವಿಷ್ಯ ಪುರಾಣಗಳು ಸೂರ್ಯದೇವಸ್ಥಾನಕ್ಕೆ ನರ್ತಕಿಯರನ್ನು ನೀಡುವುದು ಪುಣ್ಯದ ಕೆಲಸವೆಂದು ಬಲವಾಗಿ ಪ್ರತಿಪಾದಿಸಿವೆ. ಹ್ಯುಯೆನ್‌ತ್ಸಾಂಗನು ಮುಲ್ತಾನ್‌ನ ಸೂರ್ಯದೇವಸ್ಥಾನದಲ್ಲಿ ಹಲವಾರು ಗಾಯಕಿಯರನ್ನು ಕಂಡುದಾಗಿ ಉದ್ಧರಿಸಿದ್ದಾನೆ. ಪ್ರಸಿದ್ಧವಾದ ಗುಜರಾತದ ಸೋಮನಾಥ ದೇವಸ್ಥಾನದಲ್ಲಿ ಐದುನೂರು ನರ್ತಕಿಯರು ಇದ್ದರು. ತಂಜಾವೂರಿನ ರಾಜರಾಜನು ದೇವಾಲಯ ನಿರ್ಮಿಸಿ, ಅದರ ಸೇವೆಗೆಂದು ಹಲವಾರು ನರ್ತಕಿಯರನ್ನು ಒದಗಿಸಿದನು" ( Altekar, The position of Women in Hindu Civilization, pp 182, 1956)

ಕರ್ನಾಟಕದಲ್ಲಿ ಪಾತರ ಸಂಪ್ರದಾಯದ ಕುರಿತ ಅತ್ಯಂತ ಪ್ರಾಚೀನ ಉಲ್ಲೇಖಗಳು ದೊರೆತಿಲ್ಲ. ಪಟ್ಟದಕಲ್ಲಿನ ೮ನೇ ಶತಮಾನದ ಶಾಸನದಲ್ಲಿ ಇದರ ಉಲ್ಲೇಖ ದೊರೆಯುತ್ತದೆ. ಪಟ್ಟದಕಲ್ಲು, ಲಕ್ಕುಂಡಿ (ಗದಗ), ನ್ಯಾಮತಿ (ಹೊನ್ನಾಳಿ), ಮೊರಿಗೆರೆ, ಹೂವಿನಹಡಗಲಿ, ಅರಸಿಬೀದಿ, ನಂದವಡಗಿ (ಹುನಗುಂದ), ಬಂಕಾಪುರ (ಶಿಗ್ಗಾಂವ), ಲಕ್ಷ್ಮೇಶ್ವರ (ಶಿರಹಟ್ಟಿ), ನಾಲತವಾಡ (ಮುದ್ದೇಬಿಹಾಳ), ಹಳೇಬಿಡು ( ಹಿರೇಕೆರೂರು), ಬನವಾಸಿ, (ಉತ್ತರ ಕನ್ನಡ) ಮೊದಲಾದ ಊರುಗಳಲ್ಲಿಯ ದೇವಾಲಯಗಳಲ್ಲಿ ಪಾತರದವರಿದ್ದ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತದೆ. ಪಂಪನ ಆದಿ ಪುರಾಣದಲ್ಲಿ ನರ್ತನ ಕುರಿತ ಉಲ್ಲೇಖವೇ ಸಾಹಿತ್ಯದಲ್ಲಿ ದೊರೆಯುವ ಪ್ರಥಮ ಉಲ್ಲೇಖವಾಗಿದೆ. ಪಂಪನಿಂದ ಹಿಡಿದು ಕುಮಾರವ್ಯಾಸನವರೆಗಿನ ಸಾಹಿತ್ಯದಲ್ಲೆಲ್ಲ ಪಾತ್ರದವರ ಅಸ್ತಿತ್ವದ ಕುರಿತ ಉದ್ಧರಣೆಯಿದೆ. ನರ್ತಕಿಯರ, ಗಾಯಕಿಯರ ಚಿತ್ರಣ ಪಂಪನಲ್ಲಿ ತೆಳುವಾಗಿ ಬಂದರೆ ಮಧ್ಯಕಾಲೀನ ರಾಘವಾಂಕ, ಚಾಮರಸ, ಕುಮಾರವ್ಯಾಸ ಮೊದಲಾದವರ ಸಾಹಿತ್ಯಕೃತಿಗಳಲ್ಲಿ ಹೆಚ್ಚು ಢಾಳಾಗಿ ಬರುತ್ತದೆ. ಇವರ ನಂತರದ ಸಾಹಿತ್ಯದಲ್ಲಿ ಮಸುಕಾಗಿ ಕಾಣುತ್ತದೆ. "ಕಾಲದ ದೃಷ್ಟಿಯಿಂದ 8ನೆಯ ಶತಮಾನದಲ್ಲಿ.೨, ೯ ನೆಯ ಶತಮಾನದಲ್ಲಿ ೨, ೧೦ನೆಯ ಶತಮಾನದಲ್ಲಿ ೩, ೧೧ ನೆಯ ಶತಮಾನದಲ್ಲಿ ೩೨, ೧೨ನೆಯ ಶತಮಾನದಲ್ಲಿ ೧೧, ೧೩ನೆಯ ಶತಮಾನದಲ್ಲಿ ೧೬, ೧೪ ನೆಯ

ಶತಮಾನದಲ್ಲಿ ೫ ಶಾಸನಗಳಲ್ಲಿ ಕಲಾರಾಧಕರಾದ ದೇವಸೇವಕಿಯರ ಉಲ್ಲೇಖ ಬರುತ್ತದೆ" (ಚೆನ್ನಕ್ಕ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ ಪು-೫೩, ೧೯೯೦) ಇವೆರಡು ಉಲ್ಲೇಖಗಳನ್ನು (ಶಾಸನ, ಸಾಹಿತ್ಯ) ತೌಲನಿಕವಾಗಿ ನೋಡಿದಾಗ ಕರ್ನಾಟಕದಲ್ಲಿ ಮಧ್ಯಕಾಲೀನ ಸಂಸ್ಕೃತಿಯಲ್ಲಿ ಪಾತರದ ಸಂಪ್ರದಾಯ ಬಹು ದಟ್ಟವಾಗಿತ್ತು ಎಂಬುದು ಸ್ಪಷ್ಟ. ಸಮಾಜದ ಎಲ್ಲ ವರ್ಗಗಳ ಬೇಡಿಕೆಗಳನ್ನು ಈಡೇರಿಸುತ್ತ ಆ ಮೂಲಕವೇ ಎಲ್ಲ ವರ್ಗಗಳೊಂದಿಗೆ ಆತ್ಮೀಯ ಸಂಬಂಧವನ್ನಿಟ್ಟುಕೊಂಡು ಬುದ್ಧಿಜೀವಿಗಳೆನಿಸಿಕೊಂಡ ರಾಜರು, ಪುರೋಹಿತರು ಜನಸಾಮಾನ್ಯರ ಅದರಲ್ಲೂ ಮಹಿಳೆಯರ ಸಾಮಾಜಿಕ ಜೀವನದಲ್ಲಿ ಬಾರಿ ಪ್ರಮಾಣದ ರಾಜಕೀಯ ನಿರ್ವಹಿಸಿದರು.

## ಪಾತರದವಳು ಮತ್ತು ದೇವದಾಸಿ

ಎಲ್ಲಮ್ಮನ ಹೆಸರಿನಲ್ಲಿ ವೇಶ್ಯಾವೃತ್ತಿಯನ್ನು ನಡೆಸುವ ದೇವದಾಸಿಯರಿಗೂ ಪಾತರದವರಿಗೂ ಮೂಲಭೂತ ವ್ಯತ್ಯಾಸಗಳಿವೆ. ದೇವದಾಸಿಯರು ಕೆಳಸ್ತರದ ಜಾತಿಗಳಿಗೆ ಸೇರಿದವರು. ಕರ್ನಾಟಕದ ಪಾತರದವರು ಮಧ್ಯಮಸ್ತರದ ಜಾತಿಗಳಿಗೆ ಸೇರಿದವರು. ಒಂದು ಸಾಮಾಜಿಕ ಸಂದರ್ಭದಲ್ಲಿ ದರ್ಶನ, ಸ್ಪರ್ಶಬಾಹಿರಕ್ಕೆ ಗುರಿಯಾದ ಕೆಳವರ್ಗದ ಹೆಣ್ಣುಮಕ್ಕಳು, ದೇವಸ್ಥಾನದ ಅವಿಭಾಜ್ಯ ಅಂಗವಾಗಿ ಪಾತರದ ವೃತ್ತಿಯನ್ನು ನಿಭಾಯಿಸಿರಲಿಕ್ಕೆ ಸಾಧ್ಯವಿಲ್ಲ. ದರ್ಶನ, ಸ್ಪರ್ಶಕ್ಕೆ ಅರ್ಹತೆಯುಳ್ಳ ಮಧ್ಯಮ ಜಾತಿಯವರೇ ಈ ವೃತ್ತಿಯನ್ನು ನಡೆಸಿರುವರು. ಕರ್ನಾಟಕದಲ್ಲಿ ಕೆಲ ಲಿಂಗಾಯತರು, ಮುಸ್ಲಿಮರು, ತೆಲುಗು ಲಿಂಗಾಯತರು ಪಾತರದವರಾಗಿರುವರು. ಮಹಾರಾಷ್ಟ್ರದಲ್ಲಿ 'ರಾಜವಾಡೆ'ಯವರೆಂದು ಗುರುತಿಸಿಕೊಳ್ಳುವ ಪಾತರದವರು ಸಾರಸ್ವತ ಬ್ರಾಹ್ಮಣರಾಗಿರುವರು. ತಮ್ಮನ್ನು ವಂಶಪರಂಪರೆಯ ಶುದ್ಧಕಲಾವಂತರು ಎಂದು ಹೆಮ್ಮೆಪಟ್ಟುಕೊಳ್ಳುವ ಕರ್ನಾಟಕದ ಪಾತರದವರು ದೇವಳಿ, ಭಂಡಾರಿ, ಪಡಿಯಾರ, ಅಡಬಟಕಿ ಮೊದಲಾದ ಜಾತಿಗಳಿಗೆ ಸೇರಿದ ನರ್ತಕಿ, ಗಾಯಕಿಯರನ್ನು ತಿರಸ್ಕರಿಸುವರು. ಇವರು, ಮೇಲ್ಜಾತಿಯ ಪುರುಷರೊಂದಿಗೆ ಸಂಬಂಧ ಹೊಂದಿರುವರು. ದೇವರ ಹೆಸರಿನಲ್ಲಿ ದೇವದಾಸಿಯರು ದುಡ್ಡಿಗಾಗಿ ಎಲ್ಲರೊಂದಿಗೆ ಮೈಮಾರಿಕೊಳ್ಳುವರು. ಆದರೆ ಪಾತರದವರು ತಮಗೆ ಅನುಕೂಲವೆನಿಸಿದ ಸಮಾಜದ ಪ್ರತಿಷ್ಠಿತ ಏಕ ವ್ಯಕ್ತಿ ಇಲ್ಲವೆ ಕೆಲವೇ ವ್ಯಕ್ತಿಗಳೊಂದಿಗೆ ಸಂಬಂಧವನ್ನಿಟ್ಟುಕೊಳ್ಳುವರು. ದೇವದಾಸಿಯರಿಗೆ ದೇಹವೇ ಅವರ ಜೀವನದ ಬಂಡವಾಳವಾದರೆ, ಕಲೆಯೇ ಪಾತರದ ಹೆಣ್ಣಿನ ಜೀವಾಳವಾಗಿದೆ. ಪಾತರದವಳು ಯಾವ ಧರ್ಮ ಅಥವಾ ದೇವಾಲಯಕ್ಕೆ ಸಂಬಂಧಪಟ್ಟವಳು ಎಂಬುದನ್ನು ಎದೆ ಮೇಲಿನ ಶಂಖ, ಚಕ್ರ ಚಿಹ್ನೆಗಳು ಸ್ಪಷ್ಟಪಡಿಸುತ್ತಿದ್ದವು. (ಈಗ ಈ ಪದ್ಧತಿ ಮಾಯವಾಗಿದೆ) ದೇವದಾಸಿಯರಲ್ಲಿ ಈ ಪದ್ಧತಿಯಿಲ್ಲ. ಪಾತರದವಳು ಊರ ಪ್ರಮುಖನಿಂದ ನಿಯಮಿಸಲ್ಪಟ್ಟರೆ, ದೇವದಾಸಿ ತಂದೆ-ತಾಯಿಯರ ದೇವರ ಹರಕೆಯಿಂದ ವೃತ್ತಿಗಿಳಿಯುವಳು. ಪಾತರದವಳು

ಆರ್ಥಿಕವಾಗಿ ಮೇಲ್‌ಸ್ತರದಲ್ಲಿದ್ದರೆ, ದೇವದಾಸಿಯರು ಕೆಳಸ್ತರದಲ್ಲಿರುವರು. ಸಾಮ್ಯತೆಯನ್ನು ಹುಡುಕಿದರೆ ಇಬ್ಬರಲ್ಲಿಯೂ ವಂಶಪಾರಂಪರ್ಯದ ವೃತ್ತಿಯು ಮುಂದುವರಿಕೆ ಕಂಡುಬರುತ್ತದೆ. ಇಬ್ಬರೂ ವಿವಾಹ ಸಂಸ್ಥೆಗೆ ಬಾಹಿರರಾಗಿರುವರು. ಇಬ್ಬರಲ್ಲೂ ದೇವರ ಹೆಸರಿನಲ್ಲೇ ವೃತ್ತಿಯು ಮುಂದುವರಿಕೆಯಿದೆ. ಇಬ್ಬರದೂ ಮಾತೃಮೂಲ ಕುಟುಂಬ.

## ಋತುಮತಿ ಆಚರಣೆಗಳು

ಚರಿತ್ರೆಯ ಒಂದು ಘಟ್ಟದಲ್ಲಿ ಸಾಮಾಜಿಕ ತುಳಿತಕ್ಕೊಳಗಾದ ಜನರನ್ನು ಪ್ರಶ್ನಿಸಿ ಅವರ ಜೀವನಕ್ರಮದ ವಿವರಗಳನ್ನು ಪಡೆಯುವುದು ಅಷ್ಟು ಸುಲಭವಲ್ಲ. ಋತುಮತಿಯಾದಾಗಿನ ಸಂಪ್ರದಾಯ, ವಿವಾಹ ಸಂಪ್ರದಾಯವನ್ನು ಕುರಿತು ನಾನು ಕೇಳಿದ ಪ್ರಶ್ನೆಗಳಿಗೆ ಪಾತರದವರ ಪ್ರತಿಕ್ರಿಯೆ ಹೃದಯ ಹಿಂಡುವಂತಿತ್ತು. ೮೦ರ ಅಂಚಿನಲ್ಲಿದ್ದ ಲಕ್ಷ್ಮೇಶ್ವರದ ಅಲ್ಲಾಸಾನಿ ಎರಡೂ ಪ್ರಶ್ನೆಗಳಿಗೆ ಮೌನವಾಗಿದ್ದಳು. ಆಕೆಯ ವಿಷಾದ ತುಂಬಿದ ಮೌನವೇ ಆ ಸಂಪ್ರದಾಯಗಳು ಅವಳ ಬದುಕಿನ ದುರಂತದ ಬಾಗಿಲನ್ನು ತೆರೆದಿದ್ದ ಅಪಥ್ಯ ಸತ್ಯವನ್ನು ಬಹಿರಂಗಗೊಳಿಸಿತ್ತು. ಸಿಂದಗಿಯ ೮೦ರ ಗಡಿದಾಟಿದ ಮನ್ನಮ್ಮ ೫೧ರ ಹರೆಯದ ಫಯಾಜ್, 'ಛೆ ! ಆ ಪ್ರಶ್ನೆಗಳನ್ನು ಕೇಳಬೇಡಿ' ಎಂದು ಖಾರವಾಗಿ ನಿರಾಕರಿಸುವ ಮೂಲಕವೇ ಅವುಗಳೇ ತಮ್ಮ ಬದುಕಿಗೆ ಬೆಂಕಿಯ ಕಿಡಿಗಳು ಎನ್ನುವುದನ್ನು ಸ್ಪಷ್ಟಪಡಿಸಿದರು. ವಿಷಾದದಿಂದ ಎತ್ತಲೋ ಕತ್ತು ತಿರುಗಿಸಿ ಸೂರನ್ನು ದಿಟ್ಟಿಸುತ್ತ ಕುಳಿತ ಅಲ್ಲಾಸಾನಿಯ ಮೌನದೊಳಗೆ ನಮ್ಮ ಈ ಕಾಲದ ಲೇಖಕಿಯರ ಗದ್ದಲವನ್ನೂ ಮೀರಿದ, ಮಾಗಿದ ವಿಷಾದದ ಛಾಯೆ ತುಳುಕುತ್ತಿತ್ತು. ಹಾಗೆಯೇ ಸಿಟ್ಟಿನಿಂದ ಎರಡೂ ಪ್ರಶ್ನೆಗಳನ್ನು ಖಾರವಾಗಿ ನಿರಾಕರಿಸಿದ ಮನ್ನಮ್ಮ ಫಯಾಜ್‌ರ ಧ್ವನಿಯಲ್ಲಿ ಅದೆಂತಹ ಬೆಂಕಿಯ ಜ್ವಾಲೆ ಸಿಡಿಯುತ್ತಿತ್ತು!

ತಿಳಿಸಿ ಹೇಳಿ, ಅದೇ ಪ್ರಶ್ನೆಗಳನ್ನು ಮತ್ತೆ ಮತ್ತೆ ಕೇಳಿದಾಗ ಅಲ್ಲಾಸಾನಿ ಮಾತ್ರ ಭಾರವಾದ ಧ್ವನಿಯಿಂದ ಹೇಳತೊಡಗಿದಳು. ನನ್ನ ದೇಹದಿಂದ ಒಸರಿದ ರಕ್ತ ನಾನುಟ್ಟ ಲಂಗದ ಮೇಲೆ ಅಂಟಿಕೊಂಡಾಗ ನಡುಮನೆಯಲ್ಲಿ ಕೂರಿಸಿದ್ದರು. ಪಕ್ಕದಲ್ಲಿ ಹಳೆ ಚಪ್ಪಲಿ, ಕುಡಗೋಲು ಇಟ್ಟಿದ್ದರು. ಹಾಗಿಟ್ಟರೆ ಮಾತ್ರ ಮೈನೆರೆದ ಹುಡುಗಿಗೆ ದೆವ್ವ, ಪಿಶಾಚಿಯ ಕಾಟ ತಟ್ಟುವುದಿಲ್ಲವಂತೆ. ದಿನವೂ ಕೊಬ್ಬರಿ, ಬೆಲ್ಲ, ಎಳ್ಳುಂಡೆ, ಖರ್ಜೂರ ಮೊದಲಾದ ಸಿಹಿ- ಸಿಹಿ ಭಕ್ಷಗಳನ್ನು ಕೊಟ್ಟಾಗ ಖುಷಿಯಾಗುತ್ತಿತ್ತು. ಮನೆಯವರೆಲ್ಲಾ ವಿಶೇಷ ರೀತಿಯಲ್ಲಿ ಸಂಭ್ರಮಿಸಿದ್ದರು. ಪ್ರತಿದಿನ ಮುತ್ತೈದೆಯರನ್ನು ಕರೆದು ಹೂ ಮುಡಿಸಿ ಆರತಿ ಬೆಳಗುತ್ತಿದ್ದರು. ಹೂ ಮುಡಿಸಿ, ಹಾಡಿ ಸಂಭ್ರಮದ ವಾತಾವರಣ ಕಟ್ಟಲು ಮನೆಯ ಹಿರಿಯರು ಯತ್ನಿಸುತ್ತಿದ್ದರೂ ಮುಂಬರುವ ಬದುಕಿನ ಕುರಿತು ಒಳಒಳಗೆ ಹೆದರಿಕೆ ಇತ್ತು. ನಮ್ಮ ಮನೆಯ ವಾತಾವರಣ ಅದನ್ನು ಅರ್ಥೈಸಿಕೊಳ್ಳುವಷ್ಟು ಪ್ರೌಢತೆಯನ್ನು ಆ ಎಳೆಯ ವಯಸ್ಸಿನಲ್ಲೇ ನೀಡಿತ್ತು. ಇದು ನಮ್ಮ ಜನರ ಧಾರ್ಮಿಕ ಕಾರ್ಯವಲ್ಲ. ನಾವು ಫಲವತ್ತತೆಗೆ ಯೋಗ್ಯವಾದುದನ್ನು ಸಾರುವ ಡಂಗುರದ ಕಾರ್ಯಕ್ರಮವಿದಾಗಿತ್ತು. ಮನೆಯ ಒಳಗೆ ಕರೆದುಕೊಳ್ಳುವ ಕಾರ್ಯಕ್ರಮವನ್ನು ನೆನಪಿಸಿಕೊಂಡರೆ ಈಗಲೂ ಅಪಮಾನದಿಂದ ನನ್ನ ದೇಹ ಒಡಿಯಾದಂತೆ ಅನಿಸುತ್ತದೆ. ಮನೆಯ ಹಿರಿಯಳಾದ

ನನ್ನಜ್ಜ, ಊರ ಪ್ರಮುಖರೆನಿಸಿಕೊಂಡ ಮಾಮ್ಲೇದಾರ್, ಸುಬೇದಾರ್, ಗೌಡರು ಕುಲಕರ್ಣಿಯವರನ್ನು ವಿಶೇಷ ಆಹ್ವಾನವಿತ್ತು ಕರೆಸಿದ್ದರು. ಅರಿಶಿಣದ ಉಪಚಾರದಿಂದ ನಿಂಬೆಹಣ್ಣಿನ ಬಣ್ಣಕ್ಕೆ ತಿರುಗಿದ ನನ್ನ ಮೈಗೆ ಕಡು ಹಸಿರು ಬಣ್ಣದ ರೇಷ್ಮೆ ಸೀರೆ ಚೆನ್ನಾಗಿ ಒಪ್ಪಿತ್ತು. ಅಂದು, ಅಲ್ಲಿಗೆ ವಿಶೇಷ ಅಲಂಕಾರದೊಂದಿಗೆ ಆಗಮಿಸಿದ ಪ್ರಮುಖರೆಲ್ಲರೂ ಆಸೆಗಣ್ಣಿನಿಂದ ನನ್ನನ್ನೇ ನೋಡುತ್ತಿದ್ದರು. ಅವರ ಸಂಭ್ರಮ ನಮ್ಮ ಮನೆಯವರ ಸಂಭ್ರಮಕ್ಕಿಂತ ಭಿನ್ನವಾಗಿತ್ತು. ಬಹುಶಃ ಅಂದೇ ನಮ್ಮ ಮುಂದಿನ ಬದುಕು ನಿರ್ಧಾರವಾಗುತ್ತಿತ್ತು. ನಮ್ಮ ಮನೆಯ ಹಿರಿಯಳೇ ಮುಂದೆ ನಾವು ನಚ್ಚಿಕೊಂಡು ಬಾಳಬೇಕಾದ ವ್ಯಕ್ತಿಯನ್ನು ಆರಿಸುತ್ತಿದ್ದಳು. ಯೌವನಸ್ಥ ಮತ್ತು ಶ್ರೀಮಂತ ವ್ಯಕ್ತಿಯ ಆಯ್ಕೆಯಾಗುತ್ತಿತ್ತು. ನಮ್ಮ ಮನೆತನದ ಹೆಣ್ಣು ಮಕ್ಕಳೊಂದಿಗಿದ್ದ ವ್ಯಕ್ತಿಗಳೆಲ್ಲ ಪ್ರತಿಷ್ಠಿತ ಬ್ರಾಹ್ಮಣರೇ. "ಲಿಂಗವಂತರು ಮುಸಲ್ಮಾನರನ್ನು, ಕ್ರಿಸ್ತೀ ಜನರನ್ನು ಕರೆಕೊಳ್ಳುವುದಿಲ್ಲ. ತೆಲುಗರು ಮುಸಲ್ಮಾನರನ್ನು ಕರೆದುಕೊಳ್ಳುತ್ತಾರೆ. ಕ್ರಿಸ್ತೀ ಜನರನ್ನು ಕರೆಕೊಳ್ಳುವುದಿಲ್ಲ. ಮುಸಲ್ಮಾನರು ಬೇಕಾದ ಜಾತಿಯವರನ್ನು ಕರೆದುಕೊಳ್ಳುತ್ತಾರೆ" [ಗ್ಯಾರೆಝಟೀಯರು (ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು), ಪು. ೧೯೮ ೧೯೮೪ ].

## ವಿವಾಹ ಮತ್ತು ಲೈಂಗಿಕ ದೀಕ್ಷೆ

"ನಾನು ಋತುಮತಿಯಾದ ಎರಡನೆಯ ವರ್ಷಕ್ಕೆ ನನಗೂ ಮದುವೆಯಾಯಿತು. ಆದರೆ ಎಲ್ಲರಂತಲ್ಲ. ನಮ್ಮ ಮದುವೆ ಹುಡುಗಿಯೊಟ್ಟಿಗೆ ನಡೆಯುತ್ತದೆ. ಗಂಡು ಇಲ್ಲದೆ ನಡೆಯುವ ಮದುವೆ ನಮ್ಮದು. ಮುಂದೆ ನನ್ನೊಂದಿಗೆ ವಿವಾಹಬಾಹಿರವಾಗಿ ಕೂಡ ಬಯಸುವವನೇ ನನ್ನ ವಿವಾಹದ ಎಲ್ಲ ಖರ್ಚನ್ನು ನೋಡಿಕೊಳ್ಳಬೇಕಾಗುತ್ತಿತ್ತು. ಆಗಿನ ಕಾಲದಲ್ಲಿ ನನ್ನ ಮದುವೆಗೆ ಸಾವಿರ ಮೇಲ್ಪಟ್ಟು ಖರ್ಚಾಗಿತ್ತು. ಚೊಣ್ಣದ ಕಾರ್ಯ, ಹಲ್ಲಿಟ್ಟಿನ ಕಾರ್ಯ, ಸೋಭನ ಕಾರ್ಯ ಹೀಗೆ ಮೂರು ಕಾರ್ಯಗಳೊಂದಿಗೆ ಮೂರು ದಿನಗಳವರೆಗೆ ವಿವಾಹ ನಡೆಯುತ್ತಿತ್ತು. 'ಚೊಣ್ಣದ ಕಾರ್ಯ'ದಲ್ಲಿ ಪೈಜಾಮ ಅಂಗಿ ತೊಡಿಸಿ ಸಂಗೀತವಾದ್ಯಗಳಾದ ತಂಬೂರಿ, ತಬಲಾ, ಪಿಯಾನ (ಹಾರ್ಮೋನಿಯಂ) ಪೆಟ್ಟಿಗೆಯೊಂದಿಗೆ ಮದುವೆ ಮಾಡುತ್ತಿದ್ದರು. 'ಹಲ್ಲಿಟ್ಟಿನ ಕಾರ್ಯ'ದಲ್ಲಿ ಹಲ್ಲಿಟ್ಟನ್ನು (ಕಪ್ಪಾಗಿರುತ್ತಿತ್ತು) ಹಚ್ಚಿ ಸಂಗೀತವಾದ್ಯಗಳೊಂದಿಗೆ ವಿವಾಹ ಮಾಡುತ್ತಿದ್ದರು. 'ಶೋಭನ ಕಾರ್ಯ'ದಂದು ಒಳ್ಳೆಯ ಬೆಲೆ ಬಾಳುವ ರೇಷ್ಮೆ ಸೀರೆ ಉಡಿಸಿ ಮದುವೆ ಮಾಡುವರು. ಆ 'ಮಡಿ'ಯನ್ನು ಮುಂದೆ ನನ್ನೊಂದಿಗಿರುವ ವ್ಯಕ್ತಿಯೇ ತರಬೇಕಾಗುತ್ತಿತ್ತು. ಕೆಂಪುವರ್ಣದ ರೇಷ್ಮೆ ಸೀರೆ ತಂದಿದ್ದ. ಮಡಿ ಉಡಿಸಿದ ನನಗೆ ನನ್ನಂತೆ ಇರುವ ಮತ್ತೊಬ್ಬ ಹುಡುಗಿಗೆ ಗಂಡಸಿನ ವೇಷ ಹಾಕಿ, ಆಕೆಯ ಕೈಯಲ್ಲಿ ಕತ್ತಿಯನ್ನು ನೀಡಿದ್ದರು. ನನ್ನದು, ಆ ಹುಡುಗಿಯೊಂದಿಗೆ ಎಲ್ಲ ಸಂಪ್ರದಾಯಸ್ಥ ವಿಧಿ ವಿಧಾನಗಳಂತೆ ಮದುವೆ ನಡೆದು ಹೋಯಿತು. ತಾಳಿಕಟ್ಟುವ ಸಂದರ್ಭದಲ್ಲಿ ಊರಿನ ಪಂಚಮರು ಏನೋ ಹಾಡಿದರು. ಅದು ನನಗೆ ನೆನಪಿಲ್ಲ. ಅವರು ಹಾಡುವ ಹಾಡೇ ನಮ್ಮ ಮದುವೆಯ ಮಂತ್ರವಾಗಿದ್ದಿತು. ಪ್ರಸ್ತ ಮನೆಯಲ್ಲೇ ನಡೆಯುತ್ತಿತ್ತು. ನಮ್ಮ ಮೊದಲ ಪ್ರಸ್ತಕ್ಕೆ ಬಂದ ವ್ಯಕ್ತಿಯೊಡನೆ ಜೀವಮಾನವಿಡಿ ಮದುವೆಯಾದ ಧರ್ಮ ಪತ್ನಿಯಂತೆ ಜೀವನ ಸಾಗಿಸುತ್ತಿದ್ದೆವು. ಆತನ ಧರ್ಮಪತ್ನಿ ಮತ್ತು ನಾನು ಒಡಹುಟ್ಟಿದ ಅಕ್ಕತಂಗಿಯರಂತಿದ್ದೆವು. ಬಹುಶಃ ಅದು ನಮ್ಮಿಬ್ಬರಿಗೂ ಅನಿವಾರ್ಯವಾಗಿತ್ತು ಕೂಡ. ನನಗೆ ಮಕ್ಕಳಾಗಲಿಲ್ಲ. ಆಗಾಗ ನನ್ನಲ್ಲಿ ಬರುತ್ತಿದ್ದ ಆಕೆಯ ಮಕ್ಕಳನ್ನೇ ನನ್ನ ಮಕ್ಕಳಂತೆ ಮುದ್ದಿಸುತ್ತಿದ್ದೆನು. ಸಮಾಜದವರು ನಮ್ಮನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದರು. ಅದಕ್ಕಾಗಿಯೇ ಅಂತಹ ಬದುಕನ್ನು ಬಾಳಿ

ಬಂದೆನು. ಈಗಿನವರು ನಮ್ಮನ್ನು ನೋಡುವ ದೃಷ್ಟಿಯೇ ನಮ್ಮನ್ನು ಇರಿಯುತ್ತದೆ." ಇಷ್ಟು ಹೇಳಿ, ಅಲ್ಲಾಸಾನಿ ಬಹು ದೀರ್ಘವಾದ ಮೌನವನ್ನು ತಾಳಿದಳು.

ಮೂಲದಲ್ಲಿ ಇವರ ವಿವಾಹ ಮತ್ತು ಲೈಂಗಿಕ ದೀಕ್ಷೆಯ ಅಸ್ತಿತ್ವದ ಸ್ವರೂಪ ಭಿನ್ನವಾಗಿದ್ದಿತು. ದೇವಸ್ಥಾನದಲ್ಲಿ ಪುರೋಹಿತನೇ ವಿವಾಹದ ಏರ್ಪಾಡುಗಳೆಲ್ಲವನ್ನೂ ಮಾಡುತ್ತಿದ್ದನು. ರಾಜಮುದ್ರೆಯನ್ನೊಳಗೊಂಡ ಬೆಳ್ಳಿನಾಣ್ಯವನ್ನು ಪುರೋಹಿತನು, ಪಾತರದ ಸಂಪ್ರದಾಯಕ್ಕೆ ಒಳಪಡುವ ಹೆಣ್ಣಿಗೆ ನೀಡುತ್ತಿದ್ದನು. ರಂದ್ರ ಮಾಡಿ ದಾರದಿಂದ ಕೊರಳಿಗೆ ಕಟ್ಟಿಕೊಳ್ಳುತ್ತಿದ್ದ ಅದನ್ನೇ ತಾಳಿಯೆಂದು ಪರಿಗಣಿಸುತ್ತಿದ್ದರು. ಪುರೋಹಿತಶಾಹಿ, ರಾಜ್ಯಶಾಹಿಗಳ ಪ್ರಭುತ್ವದಲ್ಲೇ ಅಸ್ತಿತ್ವದಲ್ಲಿತ್ತು ಎಂಬುದು ರಾಜಮುದ್ರೆಯ ಬೆಳ್ಳಿನಾಣ್ಯ ಮತ್ತು ಪುರೋಹಿತ ಈ ಎರಡು ಹೊರ ಆಕೃತಿಗಳು ಸ್ಪಷ್ಟಪಡಿಸುತ್ತವೆ. ಬೆಳ್ಳಿನಾಣ್ಯವನ್ನು 'ಲಕ್ಷ್ಮೀ' ಎಂದೇ ಪರಿಗಣಿಸಲಾಗುತ್ತದೆ. ಕಾಲಕ್ರಮೇಣ ಇದೇ ರೂಪಾಂತರಗೊಂಡು ಹೆಣ್ಣಿನೊಂದಿಗಿನ ವೈವಾಹಿಕ ಸಂಪ್ರದಾಯ ಅಸ್ತಿತ್ವದಲ್ಲಿ ಬಂದಿರಬಹುದು. (ಹೆಚ್ಚಿನ ವಿವರಗಳಿಗೆ-ಮುನಿಶಾಮಪ್ಪ, ನಟುವರ ಸಂಸ್ಕೃತಿ ಪು. ೬೪-೭೨, ೧೯೯೩)

ಭಾರತೀಯ ಸಂಸ್ಕೃತಿಯಲ್ಲಿ, ಹೆಣ್ಣಿನ ಜೀವನದಲ್ಲಿ ಲೈಂಗಿಕ ದೀಕ್ಷೆ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸುತ್ತದೆ. ವಿಧಿಬದ್ಧ ವಿವಾಹಿತ ಹೆಣ್ಣು ಮಾತ್ರ ಈ ಪರಿಧಿಗೆ ಬರುವುದಿಲ್ಲ. ಪಾತರದವರಿಗೂ ದೇವದಾಸಿಯರಿಗೂ ಧಾರ್ಮಿಕ ಪದ್ಧತಿಯಡಿಯಲ್ಲಿಯೇ ಲೈಂಗಿಕ ದೀಕ್ಷೆ ನೀಡಲಾಗುವುದು. ಅವರು ನೇರವಾಗಿ ತಮಗೆ ಬೇಕೆನಿಸಿದಾಗ ಲೈಂಗಿಕ ಜೀವನವನ್ನು ಆರಂಭಿಸುವುದಿಲ್ಲ. ಅಂತಹದನ್ನು ನಮ್ಮ ಸಂಸ್ಕೃತಿ ಸಮ್ಮತಿಸುವುದೂ ಇಲ್ಲ. ಮೊದಲು, ಪಾತ್ರದವರಲ್ಲಿ ಲೈಂಗಿಕ ದೀಕ್ಷೆ ವಿಭಿನ್ನವಾಗಿತ್ತು. "ದಿವ್ಯ ಸ್ವರೂಪ" ಎಂದೇ ಪರಿಗಣಿಸಲ್ಪಟ್ಟ ಪುರೋಹಿತನು, ಪಾತ್ರದ ಸಂಪ್ರದಾಯದಂತೆ ವಿವಾಹವಾದ ಹೆಣ್ಣನ್ನು ದೇವಸ್ಥಾನದ ಗರ್ಭಗುಡಿಯಲ್ಲಿ ಉಪಭೋಗಿಸುತ್ತಿದ್ದನು. ಮೂರು ದಿನಗಳವರೆಗೆ ಆಕೆ ಗರ್ಭಗುಡಿಯಲ್ಲೇ ಪುರೋಹಿತನೊಂದಿಗೆ ಬದುಕು ಸಾಗಿಸಬೇಕಿತ್ತು. (Edger; cast and Tribe in southern India Vol II, 1987) ನಂತರ, ಇಷ್ಟವಿದ್ದರೆ ಅದೇ ಪುರೋಹಿತನೊಂದಿಗೆ ಇಲ್ಲದಿದ್ದರೆ ತನಗೆ ಸೂಕ್ತವೆನಿಸಿದ ವ್ಯಕ್ತಿ ಇಲ್ಲವೆ ವ್ಯಕ್ತಿಗಳೊಂದಿಗೆ ಜೀವನ ಸಾಗಿಸುತ್ತಿದ್ದಳು. ಭಗವಂತನ ಸ್ವರೂಪವೇ ಅರ್ಚಕನೆಂಬ ಸುಳ್ಳನ್ನು, ಧಾರ್ಮಿಕ ಮುಂಚೂಣಿಯಲ್ಲಿದ್ದ ಸ್ವತಃ ಪುರೋಹಿತನೇ ಸತ್ಯವೆಂದು ಸಾಧಿಸುತ್ತಾ ಬಂದವನಿಗೆ ರಾಜಾಶ್ರಯವಿತ್ತು. ಇವರಿಬ್ಬರ ಬೌದ್ಧಿಕ ಗ್ರಹಿಕೆಗಳು ರಾಜಕೀಯ ತಂತ್ರಗಳಿಂದಲೇ ರೂಪಗೊಂಡವುಗಳು. ನಮ್ಮ ಸಂಸ್ಕೃತಿಯ ರೂಪ ಬೆಳವಣಿಗೆಯಲ್ಲಿ ಇವೆರಡರ ಪ್ರಧಾನ ಪಾತ್ರವಿದೆ. ಇವರಿಬ್ಬರ ಕದಂಬ ಬಾಹುಗಳಲ್ಲಿ ನಿಜವಾದ ಅರ್ಥದಲ್ಲಿ ಸಿಕ್ಕಿ ನರಳಿದವರೆಂದರೆ ಎಲ್ಲ ವರ್ಗದ ಸ್ತ್ರೀಯರು. ಈಗ, ಆ ಲೈಂಗಿಕ ದೀಕ್ಷಾ ಪದ್ಧತಿ ಪಾತ್ರದವರಲ್ಲಿ ಇಲ್ಲ. ಮನೆಯಲ್ಲೇ, ಹಿರಿಯರಿಂದ ಆಯ್ಕೆಯಾದ ವ್ಯಕ್ತಿಯೊಂದಿಗೆ ಲೈಂಗಿಕ ಜೀವನವನ್ನು ಆರಂಭಿಸುವಳು. ಅದೇ ವ್ಯಕ್ತಿಯೊಂದಿಗೆ ಜೀವನಪರ್ಯಂತ ನಿಷ್ಠಾವಂತ ಸಂಬಂಧವನ್ನು ಹೊಂದುವಳು.

## ಗಂಡಾ ಕಟ್ಟುವುದು

'ನಾ ಹೋದ್ರು ಇಡೀ ಲಕ್ಷ್ಮೇಶ್ವರನ್ನ ಮುಳಗ್ತು ಅಂತ ತಿಳ್ಕೊ' ಎಂದು ಭಾವಪರವಶಳಾಗಿ ಬಚ್ಚ ಬಾಯಿಯಗಲಿಸಿ ನುಡಿದ ಅಲ್ಲಾಸಾನಿ ತನ್ನ ಕಲಾ ಬದುಕಿನ ಒಂದೊಂದು ಪದರುಗಳನ್ನು ಬಿಡಿಸತೊಡಗಿದಳು. ನೃತ್ಯವಾಗಲಿ, ಸಂಗೀತವಾಗಲಿ ಅದರಲ್ಲಿ ಪಾತರದ ಹೆಣ್ಣು ಪ್ರವೇಶ ಪಡೆಯುವ ಸಂದರ್ಭದಲ್ಲಿ 'ಗಂಡಾ ಕಟ್ಟುವುದು' ಎಂಬ ಧಾರ್ಮಿಕ ಪದ್ಧತಿಯನ್ನು ಮಾಡುವರು. ಅವರ ಕಲಾ ಪರಂಪರೆಯಲ್ಲಿ ಅತ್ಯಂತ ಪ್ರಮುಖವಾದ ಧಾರ್ಮಿಕ ಕಾರ್ಯಕ್ರಮವಿದಾಗಿತ್ತು. ಅವರಿಗೆ ಕಲೆಯ-ನೃತ್ಯ, ಸಂಗೀತ-ಶಿಕ್ಷಣ ನೀಡುವ ಗುರುಗಳೇ ಈ ಪದ್ಧತಿಯನ್ನು ನೆರವೇರಿಸುತ್ತಿದ್ದರು. ಗುರು, ಶಿಷ್ಯಳನ್ನು, ಶಿಷ್ಯಳು ಗುರುವನ್ನು ಒಪ್ಪಿಕೊಂಡ ಹಾಗೆ ಪ್ರತಿಜ್ಞೆಗೈಯುವ ಕಾರ್ಯಕ್ರಮವೇ ಗಂಡಾ ಕಟ್ಟುವುದು. ಅವರಿಬ್ಬರ ಮಧ್ಯೆ ಇಂತಿಷ್ಟು ವರ್ಷಗಳವರೆಗೆ ಶಿಕ್ಷಣದ ಸಂಬಂಧದ ಒಪ್ಪಂದವಿರುತ್ತದೆ. ಆ ಅವಧಿ ಮುಗಿಯುವವರೆಗೆ ಆಕೆ, ಬೇರೆ ಗುರುವನ್ನು ಸ್ವೀಕರಿಸುವಂತಿಲ್ಲ. ಗುರು, ಬೇರೆ ಶಿಷ್ಯೆಯರನ್ನು ಒಪ್ಪಿಕೊಳ್ಳಬಹುದು. ಈ ಒಪ್ಪಂದದ ಕುರುಹಾಗಿ ಗುರು, ಆಕೆಯ ಎಡಗೈಗೆ ಐದೆಳೆಯ ರೇಷ್ಮೆ ದಾರ ಅಥವಾ ಚಿನ್ನ ಇಲ್ಲವೆ ಬೆಳ್ಳಿಯ ಚೈನನ್ನು ಕಟ್ಟುವನು. ಇದೆಲ್ಲದರ ಖರ್ಚನ್ನು ಪಾತರದವರೇ ವಹಿಸಿಕೊಳ್ಳುತ್ತಿದ್ದರು. ಒಂದೊಂದು ಚೀಜ್‌ನ್ನು ಮೂರು ತಿಂಗಳವರೆಗೆ, ಕೆಲವೊಂದನ್ನು ಆರು ತಿಂಗಳವರೆಗೆ ಶ್ರಮಪಟ್ಟು ಲಕ್ಷ್ಮೇಶ್ವರದ ಅಲ್ಲಾಸಾನಿ ಸಿಂದಗಿಯ ಮುನ್ನಮ್ಮ ಕಲಿತಿರುವರು. ಫಯಾಜ್ ಮಾತ್ರ ಸಂಗೀತ ನೃತ್ಯಗಳೆರಡನ್ನೂ ಗುರುಗಳ ಒಂದು ಪಾಠದಿಂದಲೇ ತಕ್ಷಣ ಗ್ರಹಿಸಿ, ಅದನ್ನು ತನ್ನದನ್ನಾಗಿ ಮಾಡಿಕೊಳ್ಳುತ್ತಿದ್ದಳು.

ಸರಿಸುಮಾರು ಒಂಬತ್ತರ ಪ್ರಾಯದ ಹುಡುಗಿಗೆ ನಡೆಯುವ 'ಗಂಡಾಕಟ್ಟುವ ಸಂಪ್ರದಾಯ' ಪಾತ್ರದ ಜೀವನಕ್ಕೆ ಕಾಲಿಡುವ ಮುನ್ನ ನಡೆಯುವ ರಂಗತಾಲೀಮು. ಕುಟುಂಬದ ಹಿರಿಯಳು ಹದಿಹರಯಕ್ಕೆ ಕಾಲಿಡುವ ಹುಡುಗಿಗೆ, ಭವಿಷ್ಯದಲ್ಲಿ ನಡೆದುಕೊಳ್ಳಬೇಕಾದ ರೀತಿ-ನೀತಿ, ನಯ-ನಾಜೂಕು ಎಲ್ಲವನ್ನು ಕಲಿಸಿಕೊಡುತ್ತಾ ಪಾತರದ ಹೆಣ್ಣಂತೆ ರೂಪಿಸುವಳು. ಹೀಗೆ ರೂಪಿಸುವ ಕ್ರಿಯೆಯಲ್ಲಿ, ತೋರಿಕೆಗೆ ಅದೇ ಕುಟುಂಬದ ಹಿರಿಯಳು ಪ್ರಧಾನಳಂತೆ ತೋರಿದರೂ ತೆರೆಯ ಮರೆಯಲ್ಲಿ ಪುರೋಹಿತ, ಊರಿನ ಗಣ್ಯರು ಪ್ರಧಾನ ಸೂತ್ರಧಾರಿಗಳಾಗಿರುವರು.

ಪಾತರದವಳಿಗೆ ತನ್ನ ಬದುಕಿನ ನೋವುಗಳನ್ನೆಲ್ಲಾ ಮರೆಯಲು ಬಹುದೊಡ್ಡ ಆಸರೆಯೆಂದರೆ, ತನ್ನ ಜನಾಂಗಕ್ಕೆ ಅಂಟಿಕೊಂಡು ಬಂದ ಸಂಗೀತ, ನೃತ್ಯ ಕಲೆಗಳು. ತನ್ಮಯತೆಯಿಂದ ಹಾಡುವಾಗ ಭಾವತುಂಬಿ ಹರಿದ ಕಣ್ಣೀರಿನಲ್ಲಿ ಬದುಕಿನ ಕರಾಳತೆಯೆಲ್ಲ ಕರಗಿ ಹೋಗುತ್ತಿತ್ತು. ಅವರು ಸ್ವತಃ ಹಾಡುಕಟ್ಟಿ ಹಾಡುತ್ತಿರಲಿಲ್ಲ. ಹೆಚ್ಚಾಗಿ ದಾಸರ ಪದಗಳನ್ನು, ಹಿಂದಿ ಮರಾಠಿ ಭಜನ್‌ಗಳನ್ನು ಹಾಡುವರು. ಸಂಗೀತ ಸಾಧನೆಯಲ್ಲಿ ಗುರು- ಶಿಷ್ಯರಿಬ್ಬರ ಶ್ರಮವೂ ಪ್ರಧಾನವಾಗಿರುತ್ತಿತ್ತು. ಗಂಡುಳ್ಳ ಹೆಣ್ಣುಮಕ್ಕಳು ಶಾಸ್ತ್ರೀಯ ಸಂಗೀತವನ್ನು ಹಾಡುವಂತಿರಲಿಲ್ಲ. 'ಸಂಗೀತ ಕಲಿಲಿಕ್ಕೆ ನೀನೇನು

ಥಾಪೆ ಕಟ್ಟಕ್ಕೇನು?' ಎಂದು ಹಿಂದಿನ ಹಿರಿಯರು ಅಣಕವಾಡುತ್ತಿದ್ದರು.

ದೇವಸ್ಥಾನದಲ್ಲಿ ಮಾತ್ರವಲ್ಲದೆ ಪ್ರತಿಷ್ಠಿತರಾದ ದೇಸಾಯಿ, ದೇಸಗತಿಯರ ಮನೆಯಲ್ಲಿಯ ವಿವಾಹ ಕಾರ್ಯಗಳಲ್ಲಿ ಎರಡು, ಮೂರು ದಿನಗಳವರೆಗೆ ಪಾತರದವರಿಂದ ಹಾಡು ಕುಣಿತ ಇರುತ್ತಿತ್ತು. ಪಾತರದವರಿಲ್ಲದೆ ದೊಡ್ಡ ಮನೆತನಗಳ ವಿವಾಹವೇ ನಡೆಯುತ್ತಿರಲಿಲ್ಲ. ಅವರ ಜೀವನಾಡಿಯಲ್ಲಿ ಹರಿದು ಬಂದ ಸಂಗೀತ ನೃತ್ಯ ಕಲೆಯನ್ನು ಉಳ್ಳವರು, ದೇವರು ಧರ್ಮದ ಹೆಸರಿನಲ್ಲಿ ಬೇರೊಂದು ಸ್ವರೂಪ ಕೊಟ್ಟು ಅವುಗಳನ್ನು ತಮ್ಮ ಬದುಕಿನ ಮನರಂಜಕ ಸಾಧನಗಳನ್ನಾಗಿ ಮಾರ್ಪಡಿಸಿದರು. 'ನಿತ್ಯ ಸುಮಂಗಲೆ'ಯರೆಂದು ಪರಿಗಣಿಸುವ ಇವರಿಗೆ ಮದುವೆಯಲ್ಲಿ ಪ್ರಧಾನ ಪಾತ್ರವಿತ್ತು. ಪಾತರದವಳು ತಾಳಿಪೋಣಿಸಿ ಆಶೀರ್ವದಿಸಿ ಕೊಟ್ಟ ನಂತರವೇ ವಧುವಿನ ಕೊರಳಿಗೆ ತಾಳಿ ಕಟ್ಟುತ್ತಿದ್ದರು. ದೇವಸ್ಥಾನದಲ್ಲಿ ಇವರಿಲ್ಲದೆ ಪೂಜೆ ಪ್ರಾರಂಭಗೊಳ್ಳುತ್ತಿರಲಿಲ್ಲ. ತುಂಬಿದ ಸಭೆಯಲ್ಲಿ ರಾಜ- ಮಹಾರಾಜರೆದುರಿಗೆ ಎಲೆಯಡಿಕೆ ಜಗಿಯುವಷ್ಟು ಸ್ವಾತಂತ್ರ್ಯ ಪಾತರದವಳಿಗೆ ಮಾತ್ರ ಇತ್ತು. ಪಾತರದವರ ಈ ಎಲ್ಲ ಜೀವನ ಚಟುವಟಿಕೆಗಳು ಮೇಲ್ನೋಟಕ್ಕೆ ಅವರಿಗಿದ್ದ ಸಾಮಾಜಿಕ, ಧಾರ್ಮಿಕ, ರಾಜಕೀಯ ಗೌರವಗಳಂತೆ ತೋರಿದರೂ ವಾಸ್ತವದಲ್ಲಿ ಅವುಗಳೆಲ್ಲ ಬರಿ ಭ್ರಮೆಗಳು ಮಾತ್ರ. ಪರರ ಸುಖಕ್ಕೆ ಹಾಡುವುದು ಕುಣಿಯುವುದರಲ್ಲಿ ಯಾವ ಮುಕ್ತತೆ ಕಾಣುವುದಿಲ್ಲ ಈ ಬದ್ಧ ಹೇರಿಕೆಗಳೆಲ್ಲ ಪುರೋಹಿತಶಾಹಿಯ ರೂಪಿಕೆಗಳು.

ಮೈಸೂರು ಮಹಾರಾಜನೆದುರು ಹಾಡಿ ನೂರುರೂಪಾಯಿ ಗಿಟ್ಟಿಸಿಕೊಂಡದ್ದನ್ನು ಸಂತೋಷದಿಂದ ಕಣ್ತುಂಬಿ ಹೇಳಿದ ಅಲ್ಲಾಸಾನಿಗೆ ಈಗ ತನ್ನ ಗೆಳತಿ ಸುಪ್ರಸಿದ್ಧ ಹಿಂದೂಸ್ತಾನಿ ಗಾಯಕಿಯಂತಾಗುವ ಪ್ರಬಲವಾದ ಆಸೆಯಿತ್ತು. ಆರ್ಥಿಕ ಅಡಚಣೆ ತನ್ನ ಸಾಧನೆಗೆ ಅಡ್ಡಗಾಲಾಗಿತ್ತು ಎಂಬ ನೋವು ಅಲ್ಲಾಸಾನಿಯ ಹೃದಯದಲ್ಲಿ ಹೆಪ್ಪುಗಟ್ಟಿತ್ತು. ಬಡೋದೆ, ಗ್ವಾಲಿಯರ್, ಪೂರವಿರಾಜ್ಯ ಹೀಗೆ ಹಲವಾರು ಕಡೆ ಮಹಾರಾಜರೆದುರಿಗೆ ಸಂಗೀತ ಕಾರ್ಯಕ್ರಮ ನೀಡಿದ ಮನ್ನಮ್ಮನಿಗೆ ಇನ್ನೂ ಬೆಳೆಯಬೇಕೆಂಬ ಅವಳ ಹಂಬಲವನ್ನು, ಆಕೆಯನ್ನು ಉಪಪತ್ನಿಯಾಗಿಸಿಕೊಂಡವನು ಮೊಟಕುಗೊಳಿಸಿದ್ದನ್ನು ಬೇಸರದಿಂದ ನೆನಪಿಸಿಕೊಂಡ ಅವಳ ಕಣ್ಣಲ್ಲಿ ಕಣ್ಣೀರು ತೆಳುವಾಗಿ ನಿಂತಿತ್ತು. ಅದು, ಹೊರನೋಟಕ್ಕೆ ಬಂಧನವಿಲ್ಲದ್ದಂತೆ ತೋರುವ ಆಕೆಯ ಬದುಕಿಗಿದ್ದ ಹಲವಾರು ಸಂಕೋಲೆಗಳನ್ನು ಬಯಲುಗೊಳಿಸುವಂತಿತ್ತು.

## ಸಾಮಾಜಿಕ ಸ್ಥಾನಮಾನ

ಪಾತರದವರ ಕುಟುಂಬ ಮಾತೃಮೂಲವಾದುದು. ಸ್ಥಿರಾಸ್ತಿಯ ಮೇಲೆ ಮಗಳಿಗೆ ಮಾತ್ರ ಹಕ್ಕಿರುತ್ತದೆ. ಹೆಣ್ಣು ಮಗುವಾಗದಿದ್ದರೆ ಒಕ್ಕಲಿಗ ಮೊದಲಾದ ಉತ್ತಮ ಕುಟುಂಬದಲ್ಲಿ ಹುಟ್ಟಿದ ಹೆಣ್ಣು ಮಗುವನ್ನು ಕೊಂಡು, ಅವಳಿಗೆ ತಮ್ಮ ಪಾರಂಪರಿಕ ವಿದ್ಯೆಯನ್ನು ಕಲಿಸಿಕೊಡುತ್ತಿದ್ದರು. ಅಂಬಿಗರಲ್ಲಿ 'ಹೆಣ್ಣು ಮಕ್ಕಳನ್ನು ಪಾತರದವರಿಗೆ ಕೊಡುವ ನಡಾವಳಿಯು ಮೊದಲು ಬಹಳ ಇತ್ತು. ಆದರೆ ಈಗ ಕಾಯಿದೆಯ ಭಯದಿಂದ

ಕಡಿಮೆಯಾಗುತ್ತಾ ಬಂದಿದೆ' [ಗ್ಯಾಜಿಟೀಯರ್, (ಮುಂಬಯಿ ಇಲಾಖೆ) ಅನು : ಕಟ್ಟಿ ಪು. ೧೮೩, ೧೯೮೪] ಸಾಮಾನ್ಯವಾಗಿ, ಓದು-ಬರಹ ಬರುವಷ್ಟು ಸಾಮಾನ್ಯ ಶಿಕ್ಷಣ ಹೊಂದಿರುವರು. ಪಾತರದ ಗಂಡು ಮಕ್ಕಳು ಸಂಗೀತ, ಸಾರಂಗ ಮೃದಂಗಗಳನ್ನು ಕಲಿಯುವರು. ಸಂಗೀತದಲ್ಲಿ ನೈಪುಣ್ಯ ಸಾಧಿಸಿದರೆ ಅವರೇ ತಮ್ಮ ಜನಾಂಗದ ಹೆಣ್ಣು ಮಕ್ಕಳ ಸಂಗೀತ ಗುರುಗಳಾಗುವರು. ಸಾರಂಗ, ಮೃದಂಗಗಳಲ್ಲಿ ಪ್ರಾವಿಣ್ಯತೆಯನ್ನು ಪಡೆದರೆ ದೇವಸ್ಥಾನದಲ್ಲಿ ತಮ್ಮ ಹೆಂಗಸರು ನೀಡುವ ಸಂಗೀತಕ್ಕೆ ಹಿನ್ನೆಲೆ ವಾದ್ಯವನ್ನು ನೀಡುವರು.

ಪಾತರದವರಿಗೆ ಪ್ರತಿಷ್ಠಿತರ ಮನೆ ತುಂಬಾ ಓಡಾಡುವ ಸ್ವಾತಂತ್ರ್ಯವಿತ್ತು. ಪಾತರದ ಹೆಂಗಸರು ಕಟ್ಟೆಗೆ ಕುಳಿತು ಹರಟೆ ಕೊಚ್ಚುತ್ತಿರಲಿಲ್ಲ. ದೇವರ ಸಂಗೀತ ಸೇವೆಗೆಂದು ನಿಗದಿ ಪಡಿಸಿದ ಅವಧಿಯ ಹೊರತು ಹೊರಗೆ ಕಾಣಿಸಿಕೊಳ್ಳುತ್ತಿರಲಿಲ್ಲ. ಕುಡುಕ, ಲಂಪಟ ವ್ಯಕ್ತಿಗಳೊಂದಿಗೆ ಮಾತನಾಡುತ್ತಿರಲಿಲ್ಲ. ಪ್ರತಿಷ್ಠಿತ ಗೌರವಸ್ಥ ವ್ಯಕ್ತಿಗಳೊಂದಿಗೆ ಮಾತ್ರ ಮಾತನಾಡುತ್ತಿದ್ದರು. ಎರಡು ಮೂರು ದಿನಗಳಿಗೊಮ್ಮೆ ಕಛೇರಿಯ ಜನ, ಕಛೇರಿ ಬಿಟ್ಟ ತಕ್ಷಣ ಪಾತರದವರಲ್ಲಿಗೆ ಬಂದು ತಮಗಿಷ್ಟವಾದ ಹಾಡುಗಳನ್ನು ಹಾಡಿಸಿಕೊಳ್ಳುತ್ತಿದ್ದರು. ಸಂಗೀತ ಕೇಳಿ, ಚಹಾ-ಪಾನೀಯ ಸೇವನೆ ಮಾಡಿ ಪಾನದಾನ (ಎಲೆ-ಅಡಿಕೆ ತಟ್ಟೆ) ದಲ್ಲಿ ಹತ್ತೋ, ಇಪ್ಪತ್ತೋ ರೂಪಾಯಿಗಳನ್ನಿಟ್ಟು ಹೋಗುತ್ತಿದ್ದರು. ಆಗಿನ ಜನಮಾತ್ರವಲ್ಲ ಉಪಪತ್ನಿಯಾಗಿಸಿಕೊಂಡವನೂ ಅವಳಲ್ಲಿಗೆ ಬಂದು ಹೋಗುವವರ ಕುರಿತಾಗಲಿ, ಪಾತರದವಳ ಕುರಿತಾಗಲಿ ಸಂಶಯಿಸುತ್ತಿರಲಿಲ್ಲ. ಅಗೌರವಿಸುತ್ತಿರಲಿಲ್ಲ. ತಾಳಿ ಕಟ್ಟಿದ ಹೆಂಡತಿಯಲ್ಲವಲ್ಲ ಎಂಬ ದಿವ್ಯ ನಿರ್ಲಕ್ಷ ಅವನ(ರ) ತಣ್ಣನೆಯ ಪ್ರತಿಕ್ರಿಯೆಗೆ ಕಾರಣವಾಗಿದ್ದಿರಬಹುದು.

ಆಗಿನ ಸಮಾಜದಲ್ಲಿ ಪಾತರದವಳನ್ನು ಇಟ್ಟುಕೊಳ್ಳುವುದು ಪ್ರತಿಷ್ಠೆಯ ಸಂಕೇತವಾಗಿತ್ತು. ಮನೆ, ಹೊಲ, ಬೆಳ್ಳಿ, ಬಂಗಾರದಂತೆ ಅವಳನ್ನೂ ಒಂದು ಆಸ್ತಿಯೆಂದೇ ಪರಿಗಣಿಸಲಾಗುತ್ತಿತ್ತು. ಸಾಮಾನ್ಯವಾಗಿ ಪಾತರದವಳನ್ನು ದೊಡ್ಡ ಮನೆತನದವರೇ ಇಟ್ಟುಕೊಳ್ಳುತ್ತಿದ್ದರು. ಕಾರಣ ಅವಳನ್ನು ಸಾಕುವುದೆಂದರೆ ಬಿಳಿ ಆನೆ ಸಾಕಿದಂತೆ. ಹಾಲು-ತುಪ್ಪ ಉಂಡು, ಬೆಳ್ಳಿ, ಬಂಗಾರ ಇಟ್ಟುಕೊಂಡು ರೇಷ್ಮೆ ಸೀರೆ ಉಟ್ಟುಕೊಂಡು ಶ್ರೀಮಂತ ಜೀವನ ನಡೆಸಿದವರು. 'ಪಾತರದಾಕಿನ ಹ್ಯಾಂಗ ಇಟಕೊಂಡಿದಿ ಆಕಿ ಮೈಮ್ಯಾಲಾ ಒಂದು ಚಲೊ ಅರಿವಿ ಇಲ್ಲ' ಎಂದು ಯಾರಾದರೂ ಹೇಳಿದರೆ ಆತನ ಮರ್ಯಾದೆ ಹೋಗುತ್ತಿತ್ತು. ಆಕೆ ತೊಡುವ ಒಡವೆ-ವಸ್ತ್ರ, ಸಾಗಿಸುವ ಜೀವನ ಮಟ್ಟ ಹೀಗೆ ಆಕೆಯ ಬದುಕಿನ ಒಂದೊಂದು ಎಳೆಯೂ ಆತನ ವೈಯಕ್ತಿಕ ಪ್ರತಿಷ್ಠೆ ಮತ್ತು ಸಾಮಾಜಿಕ ಗೌರವಗಳನ್ನು ಕಾಯ್ದುಕೊಳ್ಳುವ ಮಾನದಂಡಗಳಾಗಿದ್ದವೇ ವಿನಃ ಅವಳ ಬೇಕು-ಬೇಡಗಳ ಒತ್ತಾಸೆಗಳಾಗಿರಲಿಲ್ಲ.

## ಮಾತೃಮೂಲ ನೆಲೆ

ಮೇಲ್ನೋಟಕ್ಕೆ ಪಾತರದವರ ಕುಟುಂಬ ವ್ಯವಸ್ಥೆ ಮಾತೃಪ್ರಧಾನದಂತೆ ತೋರಿದರೂ

ಅಂತರ್ಯದಲ್ಲಿ ಪುರುಷ ಪ್ರಧಾನ್ಯತೆಯನ್ನು ಜಾಗ್ರುತೆಯಿಂದಲೇ ಕಾಯ್ದುಕೊಂಡಿದೆ. ದೇವಸ್ಥಾನದಿಂದ ಉಂಬಳಿಯಾಗಿ ಬಂದ ಹೊಲ ಹಾಗೂ ತಾನು ನೀಡಿದ ಹೊಲದ ಉಳುಮೆಯನ್ನು ನೋಡುವ ಮೇಳು ಜವಾಬ್ದಾರಿ, ಪಾತರದವಳ ಕುಟುಂಬ, ಉಡುಗೆ-ತೊಡುಗೆ, ಲೈಂಗಿಕ ನಿಷ್ಠೆ ಮತ್ತು ಮಾನಸಿಕ ನಿಷ್ಠೆಗಳ ಮೇಲಿನ ಹಕ್ಕು ಅವಳನ್ನು ಉಪಪತ್ನಿಯಾಗಿಸಿಕೊಂಡವನದ್ದು. ಮಕ್ಕಳನ್ನು ಸಾಕುವುದು, ದೇವಸ್ಥಾನದ ಪೂಜಾ ವೇಳೆಯಲ್ಲಿ, ಪ್ರತಿಷ್ಠಿತರ ವಿವಾಹ ಕಾರ್ಯಗಳಲ್ಲಿ, ಇಟ್ಟುಕೊಂಡವನು ಇಷ್ಟಪಟ್ಟಾಗ ಹಾಡುವುದು, ಕುಣಿಯುವುದು, ದೇವಸ್ಥಾನದ ಉಂಬಳಿಯಿಂದ ಬಂದಷ್ಟು ಆತ ಕೊಟ್ಟಷ್ಟು ಹಣದಲ್ಲೇ ಜೀವನವನ್ನು ಜಾಣತನದಿಂದ ಸಾಗಿಸುವುದು ಪಾತರದವಳ ಬಾಧ್ಯತೆಗಳಾಗಿವೆ. 'ಅವಳ' ದೈಹಿಕ, ಆರ್ಥಿಕತೆ ಮೇಲೆ 'ಆತನ' ಹಕ್ಕು ಸದಾ ರಾಜಕೀಯ ನೆಲೆಯಲ್ಲಿ ಕೆಲಸ ಮಾಡುತ್ತಿದ್ದರೆ, ಆತನ ಸಾಮಾಜಿಕ ಗೌರವಕ್ಕೆ ಒಂದಿಷ್ಟೂ ಚ್ಯುತಿ ಬರದಂತೆ, ಕುಟುಂಬಕ್ಕೆ ತಾನೊಬ್ಬಳೇ ತಂದೆ-ತಾಯಿಯರಿಬ್ಬರ ದ್ವಿಪಾತ್ರಗಳನ್ನು ನಿಭಾಯಿಸುವ ಬಾಧ್ಯತೆಗಳನ್ನು ಹೊತ್ತ ಶೋಷಿತೆ ಅವಳಾಗಿದ್ದಾಳೆ. ಅವಳ ಲೈಂಗಿಕ ನಿಷ್ಠೆ ಮತ್ತು ಮಾತೃತ್ವದ ಹೊಣೆ ಎರಡೂ ಪುರುಷ ಪ್ರಧಾನ್ಯತೆಯನ್ನೇ ಎತ್ತಿ ಹಿಡಿಯುತ್ತದೆ. ಮಕ್ಕಳನ್ನು ತನ್ನ ಹೆಸರಿನ ಮೂಲದಿಂದಲೇ ಗುರುತಿಸುತ್ತಾರೆ ಎನ್ನುವ ನೆಮ್ಮದಿಯನ್ನು ಬಿಟ್ಟರೆ ಅವಳಿಗೇನಿದೆ? ಅದಕ್ಕಾಗಿ, ಪಾತರದವರ ಮಾತೃಮೂಲದ ಔಚಿತ್ಯವನ್ನು ಪ್ರಶ್ನಿಸಬೇಕಿದೆ. ಸಮಾಜವು ಪರಿಗಣಿಸಿದ ನೈತಿಕ ಬಾಹಿರ ಮಕ್ಕಳಿಗೆ ತಾನೇ ತಂದೆ ಎನ್ನುವ ಸತ್ಯದ ಬಾಧ್ಯತೆಯಿಂದ ನುಣುಚಿಕೊಳ್ಳುವ, ತನ್ನಾಸ್ತಿ ಅವಳ ಮಕ್ಕಳಿಗೆ ಹಂಚಿಹೋಗದಂತೆ ನೋಡಿಕೊಳ್ಳುವ ರಾಜಕೀಯ ಕುತಂತ್ರ ಪಾತರದವರ ಮಾತೃಮೂಲ ಕುಟುಂಬದಲ್ಲಡಗಿದೆ. ತಂದೆಯ ಹೆಸರನ್ನು ಬಹಿರಂಗಪಡಿಸುವುದೆಂದರೆ ಪಾತರದವರ ಕುರಿತು ಪುರುಷ ನಿರ್ಮಿತ ಸಾಮಾಜಿಕ ಮೌಲ್ಯಗಳನ್ನು ಮುರಿಯುವುದೇ ಆಗಿದೆ. ಪಾತರದವರಲ್ಲಿಯ ಮಾತೃಮೂಲದಿಂದಲೇ ಮಕ್ಕಳನ್ನು ಗುರುತಿಸುವ ಪದ್ಧತಿ ಅವರ ಕುರಿತಿರುವ ಪುರುಷರ ಸಾಮಾಜಿಕ ವ್ಯವಸ್ಥೆಯನ್ನ ಪೋಷಿಸುವುದೇ ಆಗಿದೆ. ಅಲ್ಲಾಸಾನಿಯಾಗಲಿ, ಮನ್ನಮ್ಮನಾಗಲಿ, ಫಯಾಜ್ ಆಗಲಿ 'ಇಟ್ಟುಕೊಂಡವರ' ಹೆಸರನ್ನು ಬಹಿರಂಗಪಡಿಸಲೇ ಇಲ್ಲ. ಅವರ ಈ ಪ್ರತಿಕ್ರಿಯೆಯ ಅಂತರ್ಯದಲ್ಲಿ ತಮ್ಮನ್ನು ಇಟ್ಟುಕೊಂಡ ಗಂಡಸರ ಸಾಮಾಜಿಕ ಪ್ರತಿಷ್ಠೆಯನ್ನು ಕಾಯ್ದುಕೊಳ್ಳುವ ಉದ್ದೇಶವೇ ಪ್ರಧಾನವಾಗಿತ್ತು. ಜೊತೆಗೆ ಬಹಿರಂಗಪಡಿಸಿದರೆ ಅವರಿಂದ ದೊರೆಯುತ್ತಿದ್ದ ಆರ್ಥಿಕ ಬೆಂಬಲವೆಲ್ಲಿ ತಪ್ಪಿ ಹೋಗುತ್ತದೆಂಬ ಭಯವೂ ಇತ್ತು.

## ಆಧುನಿಕತೆ : ಸಾಂಸ್ಕೃತಿಕ ಪಲ್ಲಟಗಳು

ಶೋಷಣೆಯ ತಳಪಾಯದಲ್ಲೇ ತಲೆಯೆತ್ತಿ ನಿಂತ ದೇವಾಲಯಕ್ಕೆ ಜನಸಮುದಾಯವನ್ನು ಆಕರ್ಷಿಸಲು ಪುರೋಹಿತನು ಧಾರ್ಮಿಕ ಸೋಗಿನಲ್ಲಿ ಹೆಣ್ಣನ್ನು ಕುಣಿತ, ಸಂಗೀತಕ್ಕೆ ಬಳಸಿಕೊಂಡನು. ಹೀಗೆ ಸ್ತ್ರೀಯನ್ನು ಮನರಂಜಕ ವಸ್ತುವನ್ನಾಗಿಸಿಕೊಂಡು ತನ್ನ ಅಗತ್ಯಕ್ಕೆ ಅಂತಹ ಒಂದು ಜನಾಂಗವನ್ನೇ ಸೃಷ್ಟಿಸಿ

ಸಮಾಜದಲ್ಲಿ ಅಲಂಕಾರಿಕ ಸ್ಥಾನ ನೀಡಿ ಬೆಳೆಸಿದ್ದೊಂದು ದೊಡ್ಡ ದುರಂತ. ದೈವಿಕದ, ಅಲಂಕಾರಿಕ ಬಂಧನವನ್ನು ಕಳಚಿದಾಗ, ಅದರೊಳಗಿರುವ ವಿಕಾರ-ಕ್ರೂರ ರೂಪಗಳ ಸತ್ಯ ಬಹಿರಂಗಗೊಳ್ಳುತ್ತದೆ. ಧಾರ್ಮಿಕ ಬೆಳವಣಿಗೆಗೆ ಮೂಲ ಆಕರ್ಷಕ ಕೇಂದ್ರಬಿಂದುವಾಗಿ ಬಳಕೆಗೊಂಡ ಹೆಣ್ಣು, ಚರಿತ್ರೆಯುದ್ದಕ್ಕೂ ಧರ್ಮ ಬಹಿಷ್ಕೃತಳಾಗಿ ಉಳಿದುಕೊಂಡು ಬಂದುದೊಂದು ವಾಸ್ತವ ವಿಪರ್ಯಾಸ. ಬ್ರಿಟಿಷ್ ಶಿಕ್ಷಣ, ವೈದಿಕ ಪ್ರಧಾನ ಭಾರತೀಯ ಸಂಸ್ಕೃತಿಯನ್ನು ಪ್ರಶ್ನಿಸಿ, ಆ ಮೂಲಕವೇ ಸಾಂಸ್ಕೃತಿಕ ಬದಲಾವಣೆಯನ್ನು ಬಯಸುವ ಬೌದ್ಧಿಕ ತಾಕತ್ತನ್ನು ನೀಡಲಾಗಿದ್ದುದನ್ನು ಅಲ್ಲಗಳೆಯಲಾಗುವುದಿಲ್ಲ. ಭಾರತದ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಪಾತರದವರ ಸಾಮಾಜಿಕ ಸ್ಥಾನಮಾನ, ಅಲಂಕಾರಿಕ ಗೌರವ ಬದಲಾವಣೆಗೆ ಒಳಪಟ್ಟಂತೆ ತೋರುತ್ತದೆ.

> "ಹೆಣ್ಣು ಹುಡುಗರ ಸಾಲಿ ಸಂಸ್ಥಾನ ಹಳ್ಯಾಗ ಇಲ್ಲರಿ ಪೂರ
> ಪಾತರದವರಿಗೆ ಬೇಡಿದಷ್ಟು ಕೊಟ್ಟು ನಾಚ ಮಾಡಲಿಕ್ಕೆ ಹಚ್ಚುವರು"
>
> (ಗುಬ್ಬಣ್ಣನವರ ; ಲಾವಣಿ ಸಾಹಿತ್ಯ ರಾಷ್ಟ್ರೀಯತೆ, ಪು. ೮೦, ೧೯೯೧)

ಧರ್ಮ ಸಾಪೇಕ್ಷವಾದ ಪುರೋಹಿತರ ರಾಜಕೀಯ ಕುತಂತ್ರಗಳನ್ನು ಧರ್ಮನಿರಪೇಕ್ಷ ನೆಲೆಯಲ್ಲಿಟ್ಟು ಚಿಂತನೆಗೆ ಈಡು ಮಾಡುವ ಪ್ರಯತ್ನ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲೇ ನಡೆಯಿತು ಎನ್ನುವ ಸತ್ಯವನ್ನು ಲಾವಣಿಯ ಈ ಸಾಲುಗಳು ಬೆಂಬಲಿಸುತ್ತವೆ. ಸ್ವಾತಂತ್ರ್ಯ ಪೂರ್ವದಲ್ಲಿ ಅವರಿಗಿದ್ದ ಗೌರವ(?), ಅವರುಗಳೇ ನಿಷ್ಠೆಯಿಂದ (?) ಸಲ್ಲಿಸುತ್ತಿದ್ದ ಸೇವೆ ಸ್ವಾತಂತ್ರ್ಯಾ ನಂತರ ಕುಸಿಯ ತೊಡಗಿತು. ಪುರೋಹಿತಶಾಹಿ ಮತ್ತು ರಾಜ್ಯಶಾಹಿಗಳ ಧರ್ಮದ ದಿವ್ಯ ಮೋಡಿಯಿಂದ ಎಚ್ಚೆತ್ತ ಪಾತರದವರು ಏಕಕಾಲದಲ್ಲಿ ಧರ್ಮಾವಲೋಕನ, ಸಮಾಜಾವಲೋಕನ, ಆತ್ಮಾವಲೋಕನಗಳಿಗೆ ತೊಡಗಿಕೊಂಡರು. ಸ್ವಾತಂತ್ರ್ಯಾನಂತರದಲ್ಲಿ ಧಾರ್ಮಿಕ ಹಾಗೂ ರಾಜಕೀಯ ಸಂಸ್ಥಾನಗಳು ತಮ್ಮ ಮೊದಲಿನ ವರ್ಚಸ್ಸನ್ನು ಕಳೆದುಕೊಂಡವು. ಹೀಗೆ ತೀವ್ರವಾಗಿ ಬದಲಾದ ರಾಜಕೀಯ, ಧಾರ್ಮಿಕ ಪರಿಸ್ಥಿತಿಗಳಿಂದಾಗಿ ಬಲವಾಗಿ ತತ್ತರಿಸಿದವರೆಂದರೆ ಪಾತರದವರೇ. ಕಾರಣ, ಅವುಗಳೇ ಅವರ ಉಪಜೀವನದ ಮೂಲಕೇಂದ್ರಗಳಾಗಿದ್ದವು. ಶ್ರೀಮಂತ ಜೀವನಕ್ರಮ ಸಾಗಿಸಿದ ಅವರಿಗೆ ಅದನ್ನು ಕಾಯ್ದುಕೊಳ್ಳುವುದು ದುಸ್ತರವಾಯಿತು. ಬಡತನದ ಜೀವನಕ್ಕೆ ಒಗ್ಗಿಕೊಳ್ಳುವುದು ಕಷ್ಟವಾಯಿತು. ವಿದ್ಯಾವಂತರಾದ ಮಕ್ಕಳೂ ಆ ಪದ್ಧತಿಯನ್ನು ವಿರೋಧಿಸತೊಡಗಿದರು. ಇದ್ದೂರಿನಲ್ಲಿ ಕೂಲಿ ಕುಂಬಳಿ ಮಾಡಿ ಜೀವನ ಸಾಗಿಸಲು ಸಂಕೋಚಿಸಿದ ಕೆಲವು ಪಾತರದ ಹೆಣ್ಣು ಮಕ್ಕಳು ಪರ ಊರಿಗೆ ಹೋದರು. ಹೆಚ್ಚಿನವರು ವೇಶ್ಯಾವೃತ್ತಿಯನ್ನು ಅಪ್ಪಿಕೊಂಡರು.

ರಾಜಕೀಯ ಬದಲಾವಣೆಗಳೊಂದಿಗೆ ಪಾತರದವರ ಜೀವನಗತಿಯೂ ಬದಲಾವಣೆಗೊಳಗಾಯಿತು. ಸರಿಸುಮಾರು ೧೯೭೫ರ ಹೊತ್ತಿಗೆ ಹೆಚ್ಚು ಕಡಿಮೆ ಈ ಸಂಪ್ರದಾಯ ನಿಂತಿತು. ಕೆಲವು ಕಡೆ ಮಾತ್ರ ಇನ್ನೂ ಉಸಿರು ಹಿಡಿದುಕೊಂಡು ಬದುಕಿದೆ.

ಯಾಕೆಂದರೆ ಭಾರತೀಯ ಸಂಸ್ಕೃತಿಯಲ್ಲಿನ ಧಾರ್ಮಿಕ ಬೇರುಗಳನ್ನು ಸಡಿಲಿಸುವುದು ಅಷ್ಟು ಸುಲಭವಲ್ಲ. ಇಂದಿಗೂ ಇದು ಕರ್ನಾಟಕದಲ್ಲಿ ವಿಜಾಪುರ ಜಿಲ್ಲೆಯ ಸಿಂದಗಿಯ ನೀಲಗಂಗಾ ದೇವಸ್ಥಾನದಲ್ಲಿ, ತೇರದಾಳದ ಪ್ರಭುದೇವ ದೇವಸ್ಥಾನದಲ್ಲಿ, ರಾಯದುರ್ಗದ ಚಿಂಚಲಿಯ ಮಾಯಮ್ಮ ದೇವಸ್ಥಾನದಲ್ಲಿ, ಗೋವೆಯ ಕಾಮಾಕ್ಷಿ ದೇವಾಲಯ, ಮಲ್ಯದ ವಿಷ್ಣು ದೇವಸ್ಥಾನದಲ್ಲಿ ಜೀವಂತವಾಗಿರುವುದು ದುರಂತ ಸತ್ಯ.

ದುಡ್ಡು-ಆಸ್ತಿ ಕಾಯ್ದಿಟ್ಟುಕೊಂಡ ಕೆಲವರು, ವಿವಾಹಿತರಾಗಿ ಸಮಾಜದಲ್ಲಿ ತಲೆಯೆತ್ತಿ ಬದುಕಲು ಪ್ರಯತ್ನಿಸಿದರು. ಆದರೂ ಕುಲಪರಂಪರೆಯನ್ನು ಸೂಚಿಸುವ ಪಾತರದವರು, ಕಲಾವಂತರು, ಇಟಕೊಂಡವರು ಮೊದಲಾದ ಅಡ್ಡಹೆಸರುಗಳು ಸಾಮಾಜಿಕ ಗೌರವವನ್ನು ಮಣ್ಣುಗೂಡಿಸುವ ಮಾನದಂಡಗಳಾದವು. ಅದಕ್ಕಾಗಿ ಅನೇಕರು ತಮ್ಮ ಅಡ್ಡ ಹೆಸರನ್ನು ಬದಲಾಯಿಸಿದರು. ಅಡ್ಡ ಹೆಸರನ್ನು ಬದಲಾಯಿಸಿದರೂ ಮೂಲದಿಂದಲೇ ಗುರುತಿಸತೊಡಗಿದಾಗ, ಪರ ಊರಿಗೆ ಹೋಗಿ ನೆಲೆ ನಿಂತು ತಾವು ಬದಲಾವಣೆಗೊಳಪಡಿಸಿದ ಅಡ್ಡ ಹೆಸರಿನಿಂದ ಗುರುತಿಸಿಕೊಳ್ಳತೊಡಗಿದರು. 'ದೊಡ್ಡ ಆಸ್ತಿ' ಮಾಡಿಕೊಂಡು ಒಂದೆಡೆ ಸ್ಥಿರವಾಗಿ ನೆಲೆನಿಂತವರು ತಮ್ಮೂರಿನವರೆಲ್ಲರನ್ನು ಕರೆದು ಊಟ, ಕಾಣಿಕೆ ನೀಡಿ ಬದಲಾಯಿಸಿದ ಅಡ್ಡ ಹೆಸರಿನಿಂದಲೇ ಕರೆಯಬೇಕೆಂದು ಒತ್ತಾಯಿಸಿದರು. ಇಷ್ಟಾದರೂ ಅವರ ಅಡ್ಡ ಹೆಸರು ದಾಖಲಾತಿಯಲ್ಲಿ ಬದಲಾಗಿದೆ ವಿನಃ ಸಮಾಜವು ಅವರನ್ನು ಗುರುತಿಸುವ ಮೂಲದಿಂದ ಅಲ್ಲ.

ಧರ್ಮನಿರಪೇಕ್ಷ ನೆಲೆಗಟ್ಟಿನಲ್ಲಿ ತನ್ನನ್ನು ತಾನು ನಿರ್ವಚಿಸಿಕೊಳ್ಳಬಯಸುವ ಇಂದಿನ ಮಹಿಳೆ ಧಾರ್ಮಿಕ ಕರಾಳ ಮುಖವಾಡದಲ್ಲಿ ಜೀವಂತವಾಗಿರುವ ಈ ಪರಂಪರೆಯನ್ನು ಮುಟ್ಟುಗೋಲು ಹಾಕಬೇಕಿದೆ. ಧರ್ಮದ ಹೆಸರಿನಲ್ಲಿ ಲೈಂಗಿಕ ದಮನಕ್ಕೊಳಗಾದವರನ್ನು ಎಚ್ಚರಿಸುವ ಗುರುತರ ಜವಾಬ್ದಾರಿ ನಮ್ಮ ಮೇಲಿದೆ. ಧರ್ಮದ ಚಿನ್ನದ ಚೌಕಟ್ಟಿನೊಳಗೆ ಸಾಮಾಜಿಕ ಸ್ತರದಲ್ಲಿ ಪಾತರದ ಹೆಣ್ಣನ್ನು ಮಾತ್ರ ಕಾಮ ಪ್ರಚೋದಕ ವಸ್ತುವನ್ನಾಗಿಸಿ ಶೋಷಿಸಿಲ್ಲ ; ಅದನ್ನು ವಿಸ್ತರಿಸಿ ಏಕಸೂತ್ರಕ್ಕೆ ಅಳವಡಿಸಿ ಜಾಗ್ರತೆಯಿಂದ ಗಮನಿಸಿದರೆ ಇಡೀ ಭಾರತೀಯ ಸ್ತ್ರೀಕುಲವೇ ಅದೇ ಶೋಷಣೆಗೆ ಒಳಗಾದ ಕಹಿಸತ್ಯ ಬೆತ್ತಲಾಗಿ ನಿಲ್ಲುತ್ತದೆ. ಅವರು ಧರಿಸಿದ ಸಾಮಾಜಿಕ ವೇಷಗಳು ಭಿನ್ನವಾಗಿರಬಹುದು. ಆದರೆ ತುಳಿತ ಒಂದೇ ಮೂಲದಲ್ಲಿ ನಡೆದಿದೆ. ತನ್ನ ಉಪಭೋಗಕ್ಕೆಂದೇ ಸ್ತ್ರೀ ಸೃಷ್ಟಿಯಾಗಿದ್ದಾಳೆಂಬ ಪುರುಷ ಪ್ರಧಾನ ವ್ಯಾಖ್ಯೆಯನ್ನು ಈಗ ಸ್ತ್ರೀಯರು ಬದಲಿಸಿ ತನ್ನ ವ್ಯಕ್ತಿತ್ವದ ಇತರ ಆಯಾಮ, ಸಾಧ್ಯತೆಗಳನ್ನು ತೋರುತ್ತ ಭಿನ್ನ ರೀತಿಯಲ್ಲಿ ತನ್ನನ್ನು ನಿರ್ವಚನಿಸಿಕೊಳ್ಳಬೇಕಾಗಿದೆ. ಆ ಮೂಲಕವೇ ಲಿಂಗ ತಾರತಮ್ಯದಿಂದಾದ ಸ್ತ್ರೀ ಕುರಿತ ಪುರುಷ ವ್ಯಾಖ್ಯಾನಗಳನ್ನು ಭ್ರಮನಿರಸನಗೊಳಿಸಬಹುದು. ಅಂದಾಗ ಮಾತ್ರ ಪುರುಷ ಆರೋಪಿತ ಜೀವಶಾಸ್ತ್ರೀಯ ಸ್ತ್ರೀತ್ವದಿಂದ ಬಿಡುಗಡೆ ಹೊಂದಿ ತನ್ನ ಶರೀರದ ಮೇಲೆ ತನ್ನದೇ ಸ್ವಾಮ್ಯವನ್ನು ಸ್ಥಾಪಿಸಲು ಸಾಧ್ಯ.

## ಗ್ರಂಥ ಋಣ

೧. ಮುನಿಶಾಮಪ್ಪ ಹೊಸೂರು ; 'ನಟುವರ ಸಂಸ್ಕೃತಿ'. ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೧೯೯೩.

೨. ಡಾ. ಚೆನ್ನಕ್ಕ ಎಲಿಗಾರ ; 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ'. ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೯೦.

೩. ಅನು : ವೆಂಕಟರಂಗೋಕಟ್ಟಿ ; 'ಗ್ಯಾರ್ಝೀಟಿಯರು' (ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು) ಏಷಿಯನ್ ಎಜುಕೇಶನಲ್ ಸರ್ವೀಸಸ್, ಹೊಸ ದೆಹಲಿ. ೧೯೮೪.

೪. ಡಾ. ಶಿವಾನಂದ ಗುಬ್ಬಣ್ಣನವರ್ ; 'ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆ'. ಅಕ್ಷಯ ಪ್ರಕಾಶನ, ಧಾರವಾಡ. ೧೯೯೧.

೫. ಅನು : ಭೀಮ ಭಟ್ಟ ; 'ಕಲ್ಹಣನ ರಾಜತರಂಗಿಣಿ '. ಅಭ್ಯುದಯ ಪ್ರಕಾಶನ, ದಕ್ಷಿಣ ಕನ್ನಡ. ೧೯೯೨.

೬. ಅನು : ಡಾ. ಡಿ. ಎನ್. ಶಾನಭಾಗ ; 'ಮೇಘದೂತ'. ಭಾರತ ಬುಕ್ ಡಿಪೊ, ಧಾರವಾಡ.

7. A.S. Altekar ; `The Position of Women in Hindu Civilization'. Motilal Banarsi Das, Benaras. 1956.

8. Edger Thurston ; `Cast and Tribe in Southern India'. Asian Educational Services, New Delhi. 1987.



# ಭಾರತೀಯ ಮಹಿಳೆಯರ ಬದಲಾಗುತ್ತಿರುವ ಸ್ಥಿತಿಗತಿಗಳು

ಡಾ. ಎಚ್. ಎಸ್. ಶ್ರೀಮತಿ

ಮಾನವಶಾಸ್ತ್ರ, ಮನಃಶಾಸ್ತ್ರ, ಜನಸಂಖ್ಯಾ ಶಾಸ್ತ್ರಗಳಂತಹ ಕ್ಷೇತ್ರಗಳು ಮಹಿಳೆಯ ಸ್ಥಿತಿಗತಿಗಳನ್ನು ಕುರಿತ ಅಧ್ಯಯನಗಳಲ್ಲಿ ಆಸಕ್ತಿಯನ್ನು ತಳೆಯುವುದು ಅನಿವಾರ್ಯ. ಸಮಾಜ ಶಾಸ್ತ್ರದ ಆಧುನಿಕ ಅಧ್ಯಯನಗಳು ಮಹಿಳೆಯ ಸ್ಥಿತಿಗತಿಗಳನ್ನು ಅಧ್ಯಯನ ಮಾಡುವಷ್ಟಕ್ಕೆ ನಿಲ್ಲದೆ ಸಮಾಜದಲ್ಲಿ ಅವಳ ಪಾತ್ರದ ಮಹತ್ವವೇನು ಎಂದು ಗುರುತಿಸುವುದರ ಕಡೆಗೆ ಹಾಗೂ ಸ್ತ್ರೀ ಪುರುಷರಲ್ಲಿ ಸಮಾನತೆ ಸಾಧ್ಯವಾಗಬೇಕೆಂಬ ಬಗೆಗೆ ಹೆಚ್ಚುಹೆಚ್ಚು ಆಸಕ್ತಿಯನ್ನು ತಳೆಯುತ್ತಿವೆ. ಇಂತಹ ಅಧ್ಯಯನಗಳು ಸ್ತ್ರೀವಾದಿ ಚಿಂತನೆಗೆ ಹೆಚ್ಚು ಉಪಯುಕ್ತವೆನಿಸುವ ಆಯಾಮಗಳನ್ನು ಒದಗಿಸುವ ಪರಿಕರಗಳೆನಿಸಿವೆ. ಮಹಿಳೆಯು ಸಮಾಜದಲ್ಲಿ ಪುರುಷನಿಗೆ ಸಮಾನವಾದ ಸ್ಥಾನಮಾನಗಳನ್ನು ಪಡೆಯಬೇಕೆಂಬ ಸ್ತ್ರೀವಾದಿ ಚಿಂತನೆಗಳು ಮೊದ ಮೊದಲಿಗೆ ಹೋರಾಟ ಮತ್ತು ಆಕ್ರಮಣಗಳ ಹಾದಿ ಅನಿವಾರ್ಯವೆಂಬಂತೆ ಸಾಗಿದವಾದರೂ ಕ್ರಮೇಣ ಅನುಸಂಧಾನದ ಹಾದಿಯು ಹೆಚ್ಚು ಆರೋಗ್ಯಕರವೂ, ಉಪಯುಕ್ತವೂ ಆಗಬಲ್ಲುದೆಂದು ಗುರುತಿಸಲು ತೊಡಗಿವೆ. ಅದಕ್ಕನುಗುಣವಾದ ಕಾರ್ಯವಿಧಾನಗಳನ್ನು, ನಿತ್ಯ ಬಳಕೆಗೆ ಅನುಕೂಲವಾದ ಹುನ್ನಾರಗಳನ್ನು ಕುರಿತು ಯೋಚಿಸಲಾರಂಭಿಸಿವೆ.

ನಮ್ಮನಾಡಿನ ಹಿರಿಯ ಸಮಾಜಶಾಸ್ತ್ರಜ್ಞರಾದ ಎಂ. ಎನ್. ಶ್ರೀನಿವಾಸ್ ಅವರು ನೀಡಿದ 'ಭಾರತೀಯ ಮಹಿಳೆಯರ ಬದಲಾಗುತ್ತಿರುವ ಸ್ಥಿತಿಗತಿಗಳು' ಎಂಬ ಭಾಷಣವು ಅವರ ಲೇಖನ ಸಂಗ್ರಹವೊಂದರಲ್ಲಿದೆ. (Essays in Social Anthropology' 1996) ನಮ್ಮಲ್ಲಿ ಪ್ರಸ್ತುತ ನಡೆದಿರುವ ಸ್ತ್ರೀವಾದಿ ಚಿಂತನೆಗೆ ಹೊಸ ಆಯಾಮಗಳನ್ನು ಒದಗಿಸುವ ಹಲವಾರು ಅಂಶಗಳು ಈ ಲೇಖನದಲ್ಲಿವೆ. ಇಲ್ಲಿ ಆ ಅಂಶಗಳನ್ನು ಸಂಗ್ರಹಿಸಿ ಚರ್ಚಿಸಲಾಗಿದೆ. ಸುಮಾರು ಇಪ್ಪತ್ನಾಲ್ಕು ವರ್ಷಗಳಷ್ಟು ಹಿಂದೆ ಎಂ. ಎನ್. ಶ್ರೀನಿವಾಸ್ ಅವರು ಈ ಭಾಷಣವನ್ನು ಮಾಡಿದ್ದು. ಆದರೆ ಈ ಹೊತ್ತು ಕೂಡ ನಮ್ಮ ಸ್ತ್ರೀವಾದಿ ಚಿಂತನೆಗಳಿಗೆ, ಸಿದ್ಧಾಂತಗಳಿಗೆ ಹಾಗೂ ಕಾರ್ಯವಿಧಾನಗಳಿಗೆ ಪ್ರಸ್ತುತವೆನಿಸುವ ಮುಖ್ಯ ಅಂಶಗಳನ್ನು ಇಲ್ಲಿ ಗುರುತಿಸಬಹುದಾಗಿದೆ.

ಭಾರತೀಯ ಮಹಿಳೆಯ ಸ್ಥಿತಿಗಳು ಎಂಬ ಮಾತು ಸರ್ವಸಾಮಾನ್ಯ ಎಂಬಂತೆ ಕಲ್ಪಿಸುವುದು ಅಸಾಧ್ಯವೆಂಬಷ್ಟು ಸಂಕೀರ್ಣವಾದುದು. ಜಾತಿ, ವರ್ಗ, ಧರ್ಮ, ಗ್ರಾಮ ನಗರಗಳೆಂಬ ಪ್ರಾದೇಶಿಕತೆಗಳಂತಹ ಹಲವು ಪದರಗಳಲ್ಲಿ ವ್ಯಾಪಿಸಿರುವ

ಭಾರತೀಯತೆಯನ್ನು ಯಾವುದಾದರೊಂದು ಕೇಂದ್ರದಲ್ಲಿ ಗುರುತಿಸಲು ತೊಡಗುವುದು ಸುಲಭವಲ್ಲ. ಸ್ತ್ರೀಯರ ಸಾಕ್ಷರತೆ, ಶಿಕ್ಷಣ, ಸ್ತ್ರೀಪುರುಷರಲ್ಲಿನ ಸಂಖ್ಯಾ ಪ್ರಮಾಣ, ಹೆಣ್ಣುಮಕ್ಕಳ ವಿವಾಹದ ವಯಸ್ಸು, ಆರ್ಥಿಕ ಪ್ರಕ್ರಿಯೆಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ-ಇಂತಹ ಸಂಗತಿಗಳ ವಿಚಾರಕ್ಕೆ ಬಂದರೆ ಅತ್ಯಂತ ವಿಸ್ತಾರವಾಗಿ ಉತ್ತರದಲ್ಲಿ ಹರಡಿರುವ ಹಿಂದೀ ಪ್ರದೇಶಗಳು ಹಿಂದುಳಿದವೆನ್ನಿಸಿಕೊಳ್ಳುತ್ತವೆ. ದಕ್ಷಿಣದ ಕೇರಳದಂತಹ ಪ್ರದೇಶಗಳನ್ನು ಪರಿಗಣಿಸಿದರೆ ಉತ್ತರದ ಮಹಿಳೆಯರ ಸಾಕ್ಷರತೆ ತೀರಾ ಹಿಂದುಳಿದದ್ದು. ಎಂ. ಎನ್. ಶ್ರೀನಿವಾಸ್ ಅವರು ೨೪ ವರ್ಷಗಳ ಹಿಂದಿನ ಅಂಕಿ ಅಂಶಗಳನ್ನು ನೀಡಿದ್ದಾರೆ. ಇಂದಿಗೆ ಅಕ್ಷರಸ್ಥರ ಸಂಖ್ಯೆಯಲ್ಲಿ ಏರಿಕೆ ಇರುವುದು ನಿಜವಾದರೂ ಶೇಕಡಾವಾರು ಪ್ರಮಾಣದಲ್ಲಿ ಅಂದಿನ ಏರುಪೇರುಗಳು ಮುಂದುವರೆದಿವೆ. ಉತ್ತರ -ದಕ್ಷಿಣ ಪ್ರದೇಶಗಳಲ್ಲಿನ ಈ ಏರುಪೇರುಗಳ ಗುಣ ಗ್ರಾಮ ನಗರಗಳ ವಿಚಾರದಲ್ಲೂ ನಿಜ. ಆಯಾ ಪ್ರದೇಶಗಳಲ್ಲಿ ಮತ್ತು ವಿವಿಧ ಜಾತಿ ಸಮುದಾಯಗಳಲ್ಲಿ ರೂಢಿಯಲ್ಲಿರುವ ಸಾಂಸ್ಥಿಕ ರೀತಿ ರಿವಾಜುಗಳು ಆಯಾ ಮಹಿಳೆಯರ ಜೀವಿತಗಳನ್ನು ಪ್ರಭಾವಿಸುತ್ತವೆ. ಅದು ಬಹುಪತ್ನಿತ್ವ, ವಿಧವಾ ವಿವಾಹಗಳಂತಹ ಸಂಗತಿಗಳಿಗೆ ಸಂಬಂಧಿಸಿರಬಹುದು ; ಅಥವಾ ಕೇರಳದಲ್ಲಿ ಮತ್ತು ಇತರ ಕೆಲವು ಬುಡಕಟ್ಟು ಜನಾಂಗಗಳಲ್ಲಿ ಮಾತ್ರವೇ ವಿರಳವಾಗಿ ರೂಢಿಯಲ್ಲಿರುವ ಮಾತೃಪ್ರಧಾನ ಕುಟುಂಬ ವ್ಯವಸ್ಥೆಗೆ ಸಂಬಂಧಿಸಿರಬಹುದು.

ಪ್ರಾದೇಶಿಕತೆಗೆ ಅಥವಾ ಜಾತಿ ಸಮುದಾಯಗಳಿಗೆ ಸಂಬಂಧಿಸಿದ ಸಂಕೀರ್ಣತೆಗಳಾದರೂ ಸ್ವಲ್ಪ ಮಟ್ಟಿಗೆ ಗ್ರಹಿಕೆಗೆ ದಕ್ಕುತ್ತವೆ. ಪರಂಪರಾಗತವಾಗಿ ನಮ್ಮ ಚಾರಿತ್ರಿಕ ದಾಖಲೆಯೆನಿಸಿ ಹರಿದು ಬಂದಿರುವ ಪವಿತ್ರ ಸಾಹಿತ್ಯಗಳನ್ನಾಧರಿಸಿ ಹಲವು ಆದರ್ಶಗಳನ್ನು, ನೀತಿ ನಿಯಮಗಳನ್ನು ಸಮಾಜವು ರೂಪಿಸಿಕೊಂಡು ಬಳಕೆಗೆ ತರುತ್ತದೆ. ಭಾರತದಲ್ಲಿ ಹೀಗೆ ಸಾಮಾಜಿಕರ ನಡತೆ ಮತ್ತು ವರ್ತನೆಗಳ ಮೇಲೆ ನೀತಿ ನಿಯಮಗಳನ್ನು ಜಾರಿಗೊಳಿಸುವ ಬೌದ್ಧಿಕ ವರ್ಗವೆಂದರೆ ಸಂಸ್ಕೃತವನ್ನು ಸಾಧನವಾಗಿ ಬಳಸಿದ ಮೇಲುಜಾತಿಗಳವರು. ಈ ಗುಂಪಿಗೆ ನಮ್ಮ ಪರಂಪರಾಗತ ಸಾಹಿತ್ಯದ ತಿಳಿವು ಇದ್ದರೂ ಅದರ ಅಪಬಳಕೆಯಾದದ್ದೇ ಹೆಚ್ಚು. ಉದಾಹರಣೆಗೆ ಇಪ್ಪತ್ತರ ದಶಕದ ಮೈಸೂರಿನ ಬ್ರಾಹ್ಮಣರಿಗೂ ಅಂದಿನ ಸುಧಾರಣಾವಾದಿಗಳಿಗೂ ಒಂದು ಚರ್ಚೆ ಬಿತ್ತು. ಹೆಣ್ಣು ಋತುಮತಿಯಾಗುವ ವೇಳೆಗೆ ಮದುವೆಯಾಗದೆ ಉಳಿದಿದ್ದರೆ ಅದೊಂದು ಪಾಪ ಎಂಬುದು ಸಂಪ್ರದಾಯಸ್ಥರ ನಿಲುವು. (ಮದುವೆಯಾಗುವುದು, ನಿಷೇಕವಾಗುವುದು ಬೇರೆ ಬೇರೆ ಎಂಬುದನ್ನು ಗಮನಿಸಬೇಕು. ಬಾಲ್ಯದ ಯಾವುದೇ ವಯಸ್ಸಿನಲ್ಲಿ ಮದುವೆಯಾಗಿ, ಋತುಮತಿಯಾದ ಮೇಲೆ ನಿಷೇಕಕ್ಕೆ ಪ್ರತ್ಯೇಕ ಶುಭದಿನವನ್ನು ಗೊತ್ತು ಮಾಡಲಾಗುವುದು). ಅಂದಿನ ಸುಧಾರಣಾವಾದಿಗಳು ವೇದಗಳನ್ನು ಆಧರಿಸಿಯೇ ಅವರ ನಿಲುವನ್ನು ವಿರೋಧಿಸಿದರು. ಆದರೆ ಬ್ರಾಹ್ಮಣರು ವೇದಗಳಿಗಿಂತ ತೀರಾ ಇತ್ತೀಚಿನವಾದ ಧರ್ಮಶಾಸ್ತ್ರಗಳಿಂದ ತಮ್ಮ ನಿಲುವನ್ನು ಸಮರ್ಥಿಸಿದರು. ಅಂದಂದಿಗೆ ಅನುಕೂಲವೆನಿಸಿದಂತೆ ಶಾಸ್ತ್ರ ಸಂಗತಿಗಳನ್ನು ತಿರುಚಿ ಬಳಸಿದ ಪ್ರಸಂಗಗಳಿಗೆ ಇಂತಹ

ಬೇಕಾದಷ್ಟು ನಿದರ್ಶನಗಳು ದೊರೆಯುತ್ತವೆ. ಮದುವೆಯಾದ ಗಂಡು ಹೆಣ್ಣುಗಳ ಕರ್ತವ್ಯಗಳ ಬಗೆಗೆ ನಿರ್ದೇಶನಗಳನ್ನು ಜಾರಿಗೊಳಿಸಿದ ಸಂದರ್ಭಗಳು ಕಾಲಗತಿಯಲ್ಲಿ ಪುರುಷನಿಗೆ ಅನುಕೂಲ ಸಿಂಧುಗಳಾಗಿಯೇ ಹರಿದು ಬಂದಿವೆ. ಆದರೆ ತರ್ಕ ಬದ್ಧವಾದ ನಿಯಮಗಳೆಂಬ ಸೋಗನ್ನು ಮಾತ್ರ ತಪ್ಪದೆ ಧರಿಸಿವೆ.

ಹಾಗಾಗಿಯೇ ಕಾನೂನು ಮತ್ತು ವಾಸ್ತವ, ಸಿದ್ಧಾಂತ ಮತ್ತು ಅನ್ವಯ-ಇವುಗಳನ್ನು ಸ್ಪಷ್ಟವಾಗಿ ಗುರುತಿಸುವ ಅಗತ್ಯವಿದೆ. ಅಲ್ಲದೆ ಔಪಚಾರಿಕ ಮತ್ತು ಅನೌಪಚಾರಿಕ ಸಂಬಂಧಗಳನ್ನು ಕುರಿತಂತೆಯೂ ಈ ಸ್ಪಷ್ಟತೆಯ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಮಾತ್ರವೇ ಭಾರತೀಯ ಸಮಾಜದ ವಿವಿಧ ಪದರಗಳಲ್ಲಿ ಮಹಿಳೆಯ ಸ್ಥಿತಿಗತಿಗಳೇನು ಎಂಬುದನ್ನು ಅರ್ಥಮಾಡಿಕೊಳ್ಳುವುದು ಸಾಧ್ಯ. ಈವರೆಗೂ ಮಹಿಳೆಯರ ಸ್ಥಾನಮಾನಗಳನ್ನು ಕಾನೂನು, ಸಿದ್ಧಾಂತ ಮತ್ತು ಔಪಚಾರಿಕ ಸಂಬಂಧಗಳಿಗೆ ಅನ್ವಯಿಸಿ ಮಾತ್ರವೇ ನೋಡುತ್ತಿದ್ದೇವೆ. ಸ್ತ್ರೀ-ಪುರುಷರ ವಾಸ್ತವ ಸಂಬಂಧಗಳ ಬಗ್ಗೆ ಮತ್ತು ಕಾಲಗತಿಯಲ್ಲಿ ಅವು ತೋರುತ್ತಿರುವ ವಿವಿಧ ಆಯಾಮಗಳ ಬಗ್ಗೆ ನಾವು ಅಷ್ಟಾಗಿ ಗಮನ ಹರಿಸುತ್ತಿಲ್ಲ. ಮೊದಲು ಹೇಳಿದ ಬಗೆಯ ಅಧ್ಯಯನಗಳು ಸೆನ್ಸಸ್ ಅಥವಾ ನ್ಯಾಷನಲ್ ಸ್ಯಾಂಪಲ್ ಸರ್ವೆಗಳಂತಹ ಮಾಹಿತಿಗಳನ್ನು ಆಧರಿಸಿ ಒಂದು ಹಂತದ ಚೌಕಟ್ಟನ್ನೇನೋ ರೂಪಿಸಬಲ್ಲವು. ಆದರೆ ಆಯಾ ನಗರ, ಗ್ರಾಮ, ಸಮುದಾಯಗಳ ವಿಭಿನ್ನ ಪರಿಸರಗಳಲ್ಲಿ ಸ್ತ್ರೀ ಪುರುಷ ಸಂಬಂಧ ಪ್ರಭಾವಗಳನ್ನು ಸೂಕ್ಷ್ಮ ಅಧ್ಯಯನಗಳು ಮಾತ್ರವೇ ಗ್ರಹಿಸಬಲ್ಲವು. ವಿವಿಧ ನೆಲೆಗಳಲ್ಲಿ ರೂಪು ತಳೆಯುವ ವಿಭಿನ್ನ ಸಾಮಾಜಿಕ, ಸಾಂಸ್ಕೃತಿಕ ಪ್ರಕ್ರಿಯೆಗಳನ್ನು ಅವುಗಳ ಸಂಬಂಧಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಈ ಗ್ರಹಿಕೆಗಳು ನೆರವಾಗುವುದು ಸಾಧ್ಯ. ಉದಾಹರಣೆಗೆ ಆಧುನಿಕತೆಯ ಒಂದು ಪ್ರಕ್ರಿಯೆ ನಗರೀಕರಣ. ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯ ಆಶಯದ್ದು. ಸರ್ಕಾರ ಅಥವಾ ವಾಲಂಟರಿ ಸಂಸ್ಥೆಗಳ ಯಾವ ಕಾರ್ಯಕ್ರಮಗಳಿಂದಾಗಿ ಗ್ರಾಮಗಳಲ್ಲಿ ಈ ಬದಲಾವಣೆ ಕಾಣಲಾರಂಭಿಸಿತು, ಮಹಿಳೆಯ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಮೇಲೆ ಈ-ಪ್ರಕ್ರಿಯೆಯ ನಿಜವಾದ ಪರಿಣಾಮ ಯಾವ ಬಗೆಯಲ್ಲಾಯಿತು, ಇಂತಹ ಪ್ರಶ್ನೆಗಳನ್ನು ಹಾಕಿಕೊಂಡು ಅಧ್ಯಯನಗಳು ಅಷ್ಟಾಗಿ ನಡೆದಿಲ್ಲ. ಕ್ಷೇತ್ರಕಾರ್ಯಗಳು, ಮಾಹಿತಿ ಸಂಗ್ರಹಗಳು ಏನೂ ಲಭ್ಯವಿಲ್ಲದ ಹಿನ್ನೆಲೆಯಲ್ಲಿ ಮಹಿಳೆಯರ ಸ್ಥಿತಿಗತಿಗಳಲ್ಲಿ ಬದಲಾವಣೆಗಳಾಗುತ್ತಿವೆಯೇ, ಆಗುತ್ತಿದ್ದರೆ ಅದರ ಸ್ವರೂಪವೇನು, ಎಂಬಂತಹ ಚರ್ಚೆ ದೊಡ್ಡ ಸವಾಲೇ ಸರಿ. ಆದರೂ ಇಂಥದೊಂದು ಚರ್ಚೆಗೆ ತೊಡಗಬೇಕಾದ ಅಗತ್ಯವಂತೂ ಇದೆ. ಇಲ್ಲಿನ ಚರ್ಚೆಗಾಗಿ ಮುಖ್ಯವಾಗಿ ಹಿಂದೂ ಮಹಿಳೆಯರು ಎಂಬ ಮಾದರಿಯನ್ನಷ್ಟೇ ತೆಗೆದುಕೊಳ್ಳಲಾಗಿದೆ. ಸಂಖ್ಯೆಯ ದೃಷ್ಟಿಯಿಂದ, ಸಂಕೀರ್ಣತೆಯ ದೃಷ್ಟಿಯಿಂದ ಸಾಕಷ್ಟು ವ್ಯಾಪ್ತಿಯುಳ್ಳದ್ದು ವೆಂಬುದಕ್ಕೆ ಮಾತ್ರ ಈ ಮಾದರಿಯನ್ನು ಆಯ್ದುಕೊಳ್ಳಲಾಗಿದೆ. ಇನ್ನಷ್ಟು ವ್ಯಾಪ್ತಿಗೆ ಇಂತಹ ಅಧ್ಯಯನವನ್ನು ವಿಸ್ತರಿಸಬೇಕಾದ ಅಗತ್ಯ ಮತ್ತು ಸಾಧ್ಯತೆಗಳ ಬಗೆಗೆ ಪ್ರತ್ಯೇಕವಾಗಿಯೇನೂ ಹೇಳಬೇಕಾಗಿಲ್ಲ.

ಭಾರತ ಗ್ರಾಮೀಣದೇಶ. ಶೇಕಡ ಎಂಬತ್ತಾರು ಮಂದಿ ಕೃಷಿಯಲ್ಲಿ ತೊಡಗಿರುವವರಾಗಿದ್ದಾರೆ. ಇದೇ ಸಮಾನ ಪ್ರಮಾಣದಲ್ಲಿ ಮಹಿಳೆಯರೂ ವ್ಯವಸಾಯದಲ್ಲಿ ತೊಡಗಿರುವ ಶ್ರಮಿಕ ವರ್ಗದವರಾಗಿದ್ದಾರೆ. ಗ್ರಾಮವಾಸ ಮತ್ತು ವ್ಯವಸಾಯ ಎಂಬ ಸಂಗತಿಗಳು ಇಡೀ ಭಾರತಕ್ಕೆ ಸಮಗ್ರವಾಗಿ ಎಂಬಂತೆ ಅನ್ವಯವಾಗುತ್ತವೆ. ಪ್ರದೇಶದಿಂದ ಪ್ರದೇಶಕ್ಕೆ ಪ್ರಮಾಣದಲ್ಲಿ ಅಷ್ಟಿಷ್ಟು ವ್ಯತ್ಯಾಸಗಳಿರಬಹುದಷ್ಟೆ. ಹಾಗಾದರೆ ಭಾರತದ ಗ್ರಾಮೀಣ ಮಹಿಳೆಯರನ್ನೇ ಪ್ರಧಾನವಾಗಿ ಪರಿಗಣಿಸಿ ಭಾರತದ ಮಹಿಳೆಯರ ಸ್ಥಿತಿಗತಿಗಳ ಸ್ವರೂಪವನ್ನು ಗ್ರಹಿಸಿ ಬಿಡಬಹುದಲ್ಲವೇ ಎನಿಸಬಹುದು. ಆದರೆ ಸಾರಾಸಗಟಾಗಿ ಒಂದೇ ಒಂದು ಮಾದರಿಯಲ್ಲಿ ಮಹಿಳೆಯರನ್ನು ಕೂಡಿಸುವುದು ಅಸಾಧ್ಯದ ಮಾತು. ಹಾಗೆಂದು ಕಸುಬು, ವ್ಯಾಪಾರ, ಸೇವಾಕ್ಷೇತ್ರದ ಜಾತಿಗಳೆಂದು ಪ್ರತ್ಯೇಕ ಪ್ರತ್ಯೇಕವಾಗಿ ಮಾದರಿಗಳನ್ನು ಇಟ್ಟುಕೊಳ್ಳುವುದೂ ಸಾಧ್ಯವಾಗುವುದಿಲ್ಲ. ಹಾಗಾಗಿ ಈ ಮುಂದೆ ಅಧ್ಯಯನದ ಅನುಕೂಲಕ್ಕಾಗಿ ಮಾತ್ರ ವ್ಯವಸಾಯದ ಮಾದರಿಯನ್ನಷ್ಟೇ ಪರಿಗಣಿಸಲಾಗಿದೆ.

ಈ ಮಾದರಿಯಲ್ಲಿ ನಾಲ್ಕು ಬಗೆಗಳನ್ನು ಗುರುತಿಸಬಹುದು :

೧. ದೊಡ್ಡ ಜಮೀನುದಾರರು : ಇವರು ಕೂಲಿನಾಲಿಗಳನ್ನಿರಿಸಿಕೊಂಡು ವ್ಯವಸಾಯವನ್ನು ಸಾಗಿಸುತ್ತಾರೆ. ಸ್ವತಃ ಯಾವ ಹಂತದಲ್ಲೂ ದುಡಿಯುವುದಿಲ್ಲ.

೨. ಚಿಕ್ಕ ಜಮೀನುದಾರರು: ಸ್ವತಃ ಜಮೀನು ಮಾಡುತ್ತಾರೆ. ನಿರ್ದಿಷ್ಟ ಹಂತಗಳಲ್ಲಿ ಮಾತ್ರ ಕೂಲಿಗಳನ್ನಿರಿಸಿಕೊಳ್ಳುತ್ತಾರೆ. ಇವರು ದೊಡ್ಡ ಜಮೀನುದಾರರಿಂದ ಸ್ವಲ್ಪ ಭೂಮಿಯನ್ನು ಗುತ್ತಿಗೆಗೂ ಪಡೆದಿರಬಹುದು.

೩. ಗುತ್ತಿಗೆದಾರರು: ಜಮೀನನ್ನು ಗುತ್ತಿಗೆಗೆ ಪಡೆದು ದುಡಿಯುತ್ತಾರೆ. ಕೆಲವು ಸಮಯಗಳಲ್ಲಿ ಜಮೀನುದಾರರಲ್ಲಿ ತಾತ್ಕಾಲಿಕವಾಗಿ ಕೂಲಿಗಳಾಗಿಯೂ ದುಡಿಯುತ್ತಾರೆ.

೪. ಭೂವಿಹೀನ ಕೂಲಿಗಳು: ದಿನಗೂಲಿಗಳಾಗಿಯೋ, ನಿಶ್ಚಿತ ಹಂತಗಳಲ್ಲಿಯೋ ಜಮೀನುಗಳಲ್ಲಿ ಕೂಲಿಗಳಾಗಿ ದುಡಿಯುವವರು. (ಇಲ್ಲಿ ಜೀತಗಾರರನ್ನು ಪರಿಗಣಿಸಿಲ್ಲ). ಇಲ್ಲಿನ ಮೊದಲ ಮತ್ತು ನಾಲ್ಕನೆಯ ಗುಂಪುಗಳು ಮಾತ್ರ ನಿಶ್ಚಿತ ಗುಣದವು. ಮೂರು ಮತ್ತು ನಾಲ್ಕನೆಯ ಗುಂಪು ಪರಸ್ಪರ ಬೆರೆಯುತ್ತಲಿರುವಂಥವು.

ವ್ಯವಸಾಯ ಕ್ಷೇತ್ರದ ರೈತ ಸಮುದಾಯದಲ್ಲಿ ಸ್ತ್ರೀಪುರುಷರಿಗೆ ವಿಶಿಷ್ಟವೆಂದು ಗುರುತಿಸಲಾದ ಸ್ಪಷ್ಟ ಶ್ರಮ ವಿಭಜನೆ ಇದೆ. ಈ ವಿಭಜನೆ ಮನೆಯ ಒಳಗೂ ಮತ್ತು ಹೊರಗೂ ಅನ್ವಯವಾಗುತ್ತದೆ. ಎಲ್ಲ ಚಟುವಟಿಕೆಗಳೂ ಪರಸ್ಪರ ಪೂರಕವೆಂದು ಪರಿಗಣಿತವಾಗುತ್ತವೆ. ವ್ಯವಸಾಯ ಒಟ್ಟಾರೆಯಾಗಿ ಒಂದು ಕುಟುಂಬದ ಚಟುವಟಿಕೆ ಎಂಬುದು ತುಂಬಾ ಗಮನಾರ್ಹವಾದ ಸಂಗತಿ. ಅಂದರೆ ರೈತನೊಬ್ಬ ಸ್ವತಃ ಮದುವೆಯಾದವನಿರಬೇಕು ಅಥವಾ ಅವನು ತನ್ನ ಮೂಲ ಕುಟುಂಬದ ಭಾಗವಾಗಿ

ದುಡಿಯ ಬೇಕು. ಜಮೀನನ್ನು ಹೊಂದಿರುವ ಕುಟುಂಬವು, ಮನೆಯ ಮಗನು ಜಮೀನಿನಲ್ಲಿ ಬೇಸಾಯ ನಡೆಯುವ ಬಗ್ಗೆ, ಜಮೀನು ಕುಟುಂಬದ ಕೈಯಲ್ಲಿ ಭದ್ರವಾಗಿದೆ ಎಂಬ ಬಗ್ಗೆ ನಿಗಾ ವಹಿಸಬೇಕೆಂದು ನಿರೀಕ್ಷಿಸುತ್ತದೆ. ಕುಟುಂಬ ಮತ್ತು ಜಮೀನುಗಳ ಸಂಬಂಧ ಅತ್ಯಂತ ಗಾಢವಾದದ್ದು. ಕುಟುಂಬದ ಆರ್ಥಿಕ, ರಾಜಕೀಯ, ಸಾಮಾಜಿಕ ಸ್ಥಿತಿಗತಿಗಳು ಅನಿವಾರ್ಯವಾಗಿ ಅದರ ಜಮೀನನ್ನೇ ಅವಲಂಬಿಸಿರುತ್ತದೆ. ಗ್ರಾಮದ ಸಂಪ್ರದಾಯಗಳು, ಪೂಜೆ ಪುನಸ್ಕಾರಗಳಂತಹ ಧಾರ್ಮಿಕ ವಲಯಗಳಿಗೂ ಈ ವರ್ಚಸ್ಸೇ ವ್ಯಾಪಿಸುವುದು. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಇಡೀ ವ್ಯವಸಾಯ ವೃತ್ತಿ ಒಟ್ಟಾರೆಯಾಗಿ ಕುಟುಂಬದ ಚಟುವಟಿಕೆಯಾದ್ದರಿಂದ ಸ್ತ್ರೀ ಪುರುಷರಲ್ಲಿ ಅವಲಂಬನೆಎನ್ನುವುದು ಪರಸ್ಪರ ಅನಿವಾರ್ಯವಾಗುತ್ತದೆ. ವೃತ್ತಿಯಲ್ಲಿ ತೊಡಗುವುದೆಂದರೆ ಮದುವೆಯಾಗಲೇಬೇಕು ಎಂಬಂತಹ ಅನಿವಾರ್ಯ ಅಲ್ಲಿದೆ. ಗ್ರಾಮೀಣ ಭಾರತದಲ್ಲಿ ಗಂಡಸು ಸನ್ಯಾಸಿಯಾಗಿ ದೇಶಾಂತರ ಹೋಗಿಬಿಟ್ಟ ಹೊರತು ಅವಿವಾಹಿತನಾಗಿ ಉಳಿಯುವುದು ಅಸಾಧ್ಯ. ವಿಧುರನಾದವನೂ ತೀರಾ ಮುದುಕನೆನ್ನಿಸಿದ ಸಂದರ್ಭ ಬಿಟ್ಟು ಮರು ಮದುವೆ ಮಾಡಿಕೊಂಡೇ ಮಾಡಿಕೊಳ್ಳುತ್ತಾನೆ.

ಮೇಲಿನ ಎಲ್ಲ ವರ್ಗಗಳಲ್ಲೂ ಮಹಿಳೆಯ ಪಾಲಿನ ಕೆಲಸ ಮುಖ್ಯವಾಗಿ ಅಡಿಗೆ ಮಾಡುವುದು, ಬಡಿಸುವುದೇ ಆಗಿದೆ. ಅಡಿಗೆ ಕೆಲಸವೆಂದರೆ ಅದು ಕಾಳುದಾನ್ಯಗಳನ್ನು ಚೊಕ್ಕ ಮಾಡುವುದು, ಕುಟ್ಟುವುದು, ಕೇರುವುದು, ಬೀಸುವುದು, ನೀರು ಹೊರುವುದು, ಉರುವಲು ಹೊಂದಿಸಿಕೊಳ್ಳುವುದು ಎಲ್ಲವನ್ನೂ ಒಳಗೊಳ್ಳುತ್ತದೆ. ಇನ್ನು ದನಕರು, ಮಕ್ಕಳುಮರಿ, ಅತಿಥಿ, ಅಭ್ಯಾಗತರು, ಆಳುಕಾಳುಗಳು, ಹಬ್ಬ ಹರಿದಿನಗಳು ಇಂತಹ ಬೇಕಾದಷ್ಟು ನಿರ್ವಹಣೆಗಳಂತೂ ಇದ್ದೇ ಇರುತ್ತವೆ. ಇವೆಲ್ಲದರ ಜೊತೆಗೆ ಜಮೀನಿನ ಕೆಲಸಗಳಿಗೂ ಅವಳು ಧಾವಿಸಬೇಕು. ಬಿತ್ತನೆ ಸಮಯಗಳಲ್ಲಿ ಅಪರಾತ್ರಿಯಲ್ಲೇ ಎದ್ದು ಮನೆಯ ಕೆಲಸಗಳನ್ನು ಮುಗಿಸಿಟ್ಟು, ನೀರಿನಲ್ಲಿ ಕಾಲುಗಳನ್ನು ಸತತವಾಗಿ ಮುಳುಗಿಸಿಕೊಂಡೇ ನಿಂತಿರಬೇಕಾದ ಬಿತ್ತನೆ ಕೆಲಸಕ್ಕೆ ತಯಾರಾಗಬೇಕು. ಸಂಜೆ ಮನೆಗೆ ಬಂದು ಮತ್ತೆ ಅಡಿಗೆ ಕೆಲಸಗಳಲ್ಲಿ ತೊಡಗಬೇಕು. ಬಿತ್ತನೆಯಂತೆಯೇ ಕಳೆ ಕೀಳುವ ಕೆಲಸವೂ ಮಹಿಳೆಯ ಪಾಲಿಗೇ ಬೀಳುವ ಕೆಲಸ. ಸುಗ್ಗಿಯ ಕಣದಲ್ಲಿ ಗಂಡಸರ ಜೊತೆ ಜೊತೆಯ ಕೆಲಸ. ಸುಗ್ಗಿ ಕಳೆಯಿತೆಂದರೆ ಭೂರಹಿತ ರೈತರಿಗಂತೂ ಬಿಡುವಿನ ವೇಳೆಯೆಂದೇನಿಲ್ಲ. ವಿವಿಧ ಕಾಮಗಾರಿಗಳಲ್ಲಿ ಸ್ತ್ರೀ ಪುರುಷರಿಬ್ಬರೂ ಕೂಲಿ ಕೆಲಸ ಮಾಡಲು ಹೋಗುತ್ತಾರೆ.

ಮೇಲಿನ ವಿವರಣೆಯಲ್ಲಿ ಗಮನಿಸಬೇಕಾದ ಸಂಗತಿಯೊಂದಿದೆ. ಕೃಷಿಯಲ್ಲಾಗಲೀ, ಇನ್ನಿತರ ಕೆಲಸಗಳಲ್ಲಾಗಲೀ ಒಳ ಮತ್ತು ಹೊರ ಕೆಲಸಗಳಲ್ಲಿ ಗಂಡಸು ಮತ್ತು ಹೆಂಗಸರಿಗೆ ಅನ್ವಯವಾಗುವ ಶ್ರಮ ವಿಭಜನೆಯನ್ನು ನಿಯಂತ್ರಿಸುವ ಹಲವು ಸೂಕ್ಷ್ಮ ವಿಚಾರಗಳಿವೆ. ಗಂಡ ಹೆಂಡತಿಯರ ವರಮಾನಗಳಲ್ಲಿ ಇದು ನನ್ನದು, ಇದು ನಿನ್ನದು ಎಂಬ ಗೆರೆ ಸ್ಪಷ್ಟವಾಗಿದೆ. ಹೆಂಗಸಿಗೇ ಮೀಸಲಾದ ಉಪವೃತ್ತಿಗಳಿರುವಂತೆಯೇ ಅವುಗಳ

ವರಮಾನವೂ ಅವಳಿಗೇ ಸೇರುವಂಥದ್ದು. ಉದಾಹರಣೆಗೆ ಕೋಳಿ ಸಾಕುವುದು, ಹಸು ಎಮ್ಮೆಗಳನ್ನು ಸಾಕುವುದಿರಬಹುದು. ಹೆಂಡತಿಯ ಹಣ, ಒಡವೆಗಳನ್ನು ಗಂಡನು ವಿಶೇಷ ಸಂದರ್ಭಗಳಲ್ಲಿ ಸಾಲದಂತೆ ಪಡೆದು ಬಳಸಿದರೂ, ಅದನ್ನು ಮತ್ತೆ ಅವಳಿಗೆ ಹಿಂತಿರುಗಿಸುವ ಹೊಣೆ ಅವನದಾಗಿರುತ್ತದೆ. ಅವಳ ಈ ಹಕ್ಕನ್ನು ಗ್ರಾಮೀಣ ಸಮಾಜವು ಸಮರ್ಥಿಸುತ್ತದೆ.

ಕೂಲಿನಾಲಿಗಳಲ್ಲಿ ಜಮೀನುದಾರ ಕುಟುಂಬದ ಹೆಂಗಸರು ತೊಡಗುವಂತಿಲ್ಲ. ಅಲ್ಲದೆ ಮೇಲು ಜಾತಿಯುವರೂ ಕೂಡ ಎಂಥ ಕಷ್ಟಕಾಲದಲ್ಲೂ ಕೂಲಿಗೆ ಇಳಿಯುವಂತಿಲ್ಲ. ಜಮೀನುದಾರಿಕೆಯಿಂದಲೋ, ಜಾತಿಯಿಂದಲೋ ಮೇಲು ಸ್ತರಕ್ಕೆ ಸೇರಿದ ಕುಟುಂಬದ ಮಹಿಳೆಯರಿಗೆ ಸ್ವಂತ ಸಂಪಾದನೆ ಎಂಬುದು ಇರುವುದಿಲ್ಲ. ಹಾಗೆಂದ ಮಾತ್ರಕ್ಕೆ ಇವರು ಕೆಲಸವಿಲ್ಲದೆ ಕುಳಿತ ಸೋಮಾರಿಗಳೆಂದೇನಲ್ಲ. ಇವರಿಗೆ ದುಡಿತವಿದೆ. ಸಂಪಾದನೆ ಇಲ್ಲ. ಕೆಳಸ್ತರದವರ ದುಡಿತಕ್ಕೆ ಸಂಪಾದನೆ ಇದೆ ಎಂದಷ್ಟೇ ಅರ್ಥ. ದೊಡ್ಡ ಜಮೀನುದಾರರು ಮತ್ತು ಅತ್ಯುಚ್ಚ ಜಾತಿಯವರಲ್ಲೇ ಒಟ್ಟು ಕುಟುಂಬಗಳ ಪರಿಪಾಠ ಹೆಚ್ಚು. ಈ ಕುಟುಂಬಗಳ ಹೆಂಗಸರಿಗೆ ಅಡಿಗೆ ಕೆಲಸವೇ ಅಗಾಧವಾದುದಾಗಿರುತ್ತದೆ. ಹಿರಿಯ ಹೆಂಗಸರಿಗೆ ನೇರವಾಗಿ ದೈಹಿಕ ಕೆಲಸ ಅಷ್ಟಾಗಿ ಇರದಿದ್ದರೂ ಮನೆಯ ಇಡೀ ಕೆಲಸ ಕಾರ್ಯಗಳನ್ನು ಅಲ್ಲಿನ ಜನಸಾಗರವನ್ನೂ ಹೊಂದಿಸಿಕೊಂಡು ಹೋಗುವಂತೆ ನಿರ್ವಹಿಸಬೇಕಾದ ವಿಪರೀತದ ಹೊಣೆ ಇರುತ್ತದೆ. ಇಲ್ಲಿನ ಹೆಂಗಸರು ಹಲವೊಮ್ಮೆ ಮನೆಯಲ್ಲಿನ ಪದಾರ್ಥಗಳನ್ನು ಗುಟ್ಟಾಗಿ ಮಾರಿ ಅಥವಾ ಚಿಕ್ಕಪುಟ್ಟ ರೀತಿಯಲ್ಲಿ ಲೇವಾದೇವಿ ವ್ಯವಹಾರಗಳನ್ನು ನಡೆಸಿ ಕೈ ಹಣವನ್ನು ಹೊಂದಿಸಿಕೊಳ್ಳುತ್ತಾರೆ.

ಜಮೀನುದಾರಿಕೆ ಮತ್ತು ಜಾತಿಗಳೇ ನಮ್ಮ ಹೆಂಗಸರ ಸ್ಥಿತಿಗತಿಗಳ ಪ್ರಧಾನ ಸೂಚಕ ಸಂಗತಿಗಳಾಗಿ ಪ್ರವರ್ತಿಸುತ್ತಾ ಇದ್ದದ್ದರಿಂದ ಸ್ವಲ್ಪ ಮಟ್ಟಿಗೆ ಮೇಲಿನ ಲಕ್ಷಣಗಳು ಸ್ಥಿರವೆಂಬಂತೆ ಈಚಿನವರೆಗೂ ನಡೆದು ಬಂತು. ಭಕ್ತಿ ಚಳುವಳಿಯ ಸುಧಾರಣಾವಾದಿ ಚಿಂತನೆಗಳಿಂದ, ಬ್ರಿಟಿಷರು ಜಾರಿಗೊಳಿಸಿದ ರಾಜಕೀಯ ವ್ಯವಸ್ಥೆಗಳಿಂದ ಮಹಿಳೆಯರ ಸ್ಥಿತಿಗತಿಗಳಲ್ಲಿ ಒಂದು ಬಗೆಯ ಚಲನೆ, ಬದಲಾವಣೆ ಕಾಣತೊಡಗಿತು. ವೃತ್ತಿ ಕಸುಬುಗಳನ್ನಾಧರಿಸಿದ್ದ ಜಾತಿ ವ್ಯವಸ್ಥೆಯಲ್ಲಿ ವಿವಧ ಬಗೆಯ ವೈಪರೀತ್ಯಗಳು ಬೆರೆಯತೊಡಗಿದವು. ಬ್ರಿಟಿಷರ ರಾಜ್ಯ ವ್ಯವಸ್ಥೆಯಲ್ಲಿ ಮೇಲುಜಾತಿಯವರು ಮೊದ ಮೊದಲು ಫಲಾನುಭವಿಗಳೆನಿಸಿ ಸಾಮಾಜಿಕವಾಗಿ ಮೇಲು ಮೇಲಕ್ಕೆ ಚಲಿಸಿದರೆಂಬುದು ನಿಜವಾದರೂ, ಕ್ರಮೇಣ ರೈತಜಾತಿಗಳೇ ಮೊದಲಾಗಿ ಹತ್ತು ಹಲವು ಸಣ್ಣ ಸಮುದಾಯುಗಳೂ ಹೀಗೆ ಚಲಿಸತೊಡಗಿದವು. ರಾಜಕೀಯ ಅಧಿಕಾರ, ಶಿಕ್ಷಣಗಳ ಅವಕಾಶಗಳನ್ನು ಪಡೆದು ಅಧಿಕಾರದ ವಿವಿಧ ಹಂತಗಳನ್ನು ಪ್ರವೇಶಿಸಿದರು.

ಸ್ವಾತಂತ್ರಾನಂತರದ ಭಾರತದಲ್ಲಿ ಹಿಂದುಳಿದ ಜಾತಿ, ಪಂಗಡಗಳವರಿಗೂ ಈ ಅವಕಾಶ ವಿಸ್ತರಿಸಿತು. ಹಸಿರು ಕ್ರಾಂತಿಯಂತಹ ಸರ್ಕಾರಿ ಕಾರ್ಯ ವಿಧಾನಗಳಿಂದಾಗಿ ಗ್ರಾಮೀಣ ಕೃಷಿ ಚಟುವಟಿಕೆಯಲ್ಲಿ ಹೊಸ ಬದಲಾವಣೆಗಳು ಬಂದವು. ಆರ್ಥಿಕವಾಗಿ

ಮುನ್ನಡೆಯತೊಡಗಿದ ಗ್ರಾಮೀಣ ಸಮಾಜದ ಕೆಲವು ಭಾಗಗಳು ನಗರದ ಮಧ್ಯಮ ವರ್ಗದ ಮತ್ತು ಮೇಲುಜಾತಿಯ ಜೀವನ ವಿಧಾನಗಳನ್ನು ಆರೋಪಿಸಿಕೊಳ್ಳತೊಡಗಿದವು. ಕೆಳಜಾತಿ ಹಾಗೂ ವರ್ಗಗಳು ಸರ್ಕಾರದ ಜಾತ್ಯಾತೀತ ಕಾರ್ಯಕ್ರಮಗಳಿಂದಾಗಿ ಆರ್ಥಿಕವಾಗಿ ಮುನ್ನಡೆದರೂ ಸಾಮಾಜಿಕ ಮನ್ನಣೆಗಾಗಿ ಮೇಲು ಜಾತಿಯ ಅನುಕರಣೆಗೆ ತೊಡಗಿ ತಮ್ಮ ವೃತ್ತಿ ಕಸುಬುಗಳಲ್ಲಷ್ಟೇ ಅಲ್ಲದೆ ಆಹಾರ, ದೇವರು ದಿಂಡಿರುಗಳಲ್ಲೂ ಬದಲಾವಣೆಗಳನ್ನು ತಂದರು.

ಕೃಷಿ ಸಮಾಜದಲ್ಲಿ ಮೇಲುಸ್ತರದ ಗಂಡಸರೂ, ಹೆಂಗಸರೂ ದೈಹಿಕ ಶ್ರಮಗಳಲ್ಲಿ ತೊಡಗುತ್ತಿರಲಿಲ್ಲವೆಂಬುದನ್ನು ಈ ಮೊದಲೇ ವಿವರಿಸಲಾಗಿದೆ. ದೈಹಿಕ ಶ್ರಮಕ್ಕೆ ಮೀಸಲಾಗಿದ್ದ ಕೆಳಸ್ತರದವರೂ ಕೂಡ ಮೇಲುಸ್ತರಕ್ಕೆ ಚಲಿಸಲು ಸಿಕ್ಕಿದ ಅವಕಾಶಗಳಿಂದಾಗಿ, ಮೇಲು ಜಾತಿಯ ಜೀವನ ಶೈಲಿಯನ್ನುಅಳವಡಿಸಿಕೊಳ್ಳುವುದನ್ನು ಮೊದಲು ಮಾಡಿದಾಗ ಅವರ ಜೀವನ ವಿಧಾನದಲ್ಲಿ ಆದ ಬದಲಾವಣೆಗಳ ತೀವ್ರ ಸ್ವರೂಪಗಳು ಮಹಿಳೆಯರಲ್ಲೇ ಹೆಚ್ಚು ವ್ಯಕ್ತವಾದವು. ಮೇಲು ಜಾತಿಯಲ್ಲಿ 'ಮಡಿ'ಯ ಕಲ್ಪನೆ ಅತಿ ಸೂಕ್ಷ್ಮ ಬಗೆಯದು. ಈ ಮಡಿ ಮೈಲಿಗೆಗಳೇ ಪ್ರಧಾನವಾದ ಸಂಪ್ರದಾಯದ ಹಲವು ಆಚರಣೆಗಳು ವರ್ಷದುದ್ದಕ್ಕೂ ಹರಡಿರುತ್ತವೆ. ಕುತೂಹಲಕರ ಸಂಗತಿಯೆಂದರೆ ಮನೆಯಲ್ಲಿ ಈ ಮಡಿ ಮೈಲಿಗೆಗಳ ಸಂರಕ್ಷಣೆಯ ಪೂರ್ಣ ಹೊಣೆಯನ್ನು ಮಹಿಳೆಯರೇ ವಹಿಸುತ್ತಾರೆ. ಸಂಪ್ರದಾಯದ ಆಚರಣೆಗಳ ಸಂರಕ್ಷಕರೆನಿಸಿ ಮಹಿಳೆಯರು ಕೆಲಮಟ್ಟಿನ ಅಧಿಕಾರಗಳನ್ನು ಪಡೆಯುತ್ತಾರೆ. ಮನೆಯಲ್ಲಿ ನಡೆಯುವ ಯಾವುದೇ ಧಾರ್ಮಿಕ ಆಚರಣೆಗಳಲ್ಲಿ ಮಹಿಳೆಯರು ಪ್ರಧಾನ ಪಾತ್ರ ವಹಿಸುತ್ತಾರೆ. ಮಹಿಳೆಯರು ನೇರವಾಗಿ ಭಾಗವಹಿಸದ ಕೆಲವು ಆಚರಣೆಗಳಿವೆಯಾದರೂ, ಪೂರ್ವ ಸಿದ್ಧತೆಯ ಹಂತದ ಭಾಗವಹಿಸುವಿಕೆಯಾದರೂ ಅವರಿಗೆ ಇದ್ದೇ ಇರುತ್ತದೆ. ಪಾತ್ರೆ, ಬಟ್ಟೆ, ಮನೆ ಮುಂತಾದವನ್ನು 'ಮಡಿ' ಮಾಡುವ, 'ಮಡಿ'ಯಲ್ಲಿ ಅಡಿಗೆ ಮಾಡಿ ಒದಗಿಸುವ ರೀತಿಯ ಕೆಲಸಗಳು. ಪೂಜೆ, ಆಚರಣೆಗಳಿಗೆ ಸಂಬಂಧಿಸಿದ ಸಕಲ ಸಾಮಗ್ರಿಗಳನ್ನು ಅಣಿ ಮಾಡಿಕೊಡುವ ಕೆಲಸವೂ ಅವಳದೇ. ಇನ್ನು ಹೆಂಡತಿಯು ಪಕ್ಕದಲ್ಲಿಲ್ಲದೆ ಪೂರ್ಣವಾಗದೆಂಬ ಬಗೆಯ ಅನೇಕ ಆಚರಣೆಗಳೂ ಇವೆ. ಅಲ್ಲದೇ, ಮಹಿಳೆ ಮಾತ್ರವೇ ಆಚರಿಸುವ ವ್ರತ ನಿಯಮಗಳೂ ಇವೆ. ಈ ಕೊನೆಯ ಬಗೆಯದರಲ್ಲಿ ಸಾಮಾನ್ಯವಾಗಿ ಮಂತ್ರಗಳ ಬಳಕೆ ಇರುವುದಿಲ್ಲ. ಬದಲಿಗೆ ಸ್ತೋತ್ರ, ಹಾಡುಗಳು ಇರುತ್ತವೆ.

ಬಹುತೇಕ ಎಲ್ಲ ಹಿಂದೂ ವ್ರತಾಚರಣೆಗಳೂ ಲೌಕಿಕವಾದ ಆಸೆ ಆಕಾಂಕ್ಷೆಗಳನ್ನು ನೆರವೇರಿಸಿಕೊಳ್ಳುವ ಉದ್ದೇಶವನ್ನೇ ಹೊಂದಿವೆ. ಈ ಸಂದರ್ಭಗಳು ಮಹಿಳೆಯರು ಸ್ನೇಹವಲಯಗಳಲ್ಲಿ ಸಾಮಾಜಿಕವಾಗಿ ಬೆರೆಯುವ ಅವಕಾಶಗಳನ್ನು ಕಲ್ಪಿಸುತ್ತವೆ. ವ್ರತಾಚರಣೆಗಳನ್ನು ನಡೆಸಿಕೊಂಡು ಹೋಗುವ ಹೊಣೆಯನ್ನು ಗಂಡಸು ಸಂಪೂರ್ಣವಾಗಿ ಹೆಂಗಸಿಗೆ ವಹಿಸಿಬಿಟ್ಟಾಗ ಅವಳಿಗೆ ಆದ ಅನುಕೂಲವೆಂದರೆ ಸ್ವಲ್ಪಮಟ್ಟಿಗೆ ಮನೆಯ ಕೇಂದ್ರದಲ್ಲಿ ಗಂಡಸಿಗಿಂತ ಹೆಚ್ಚಿನ ಅಧಿಕಾರ, ಮನ್ನಣೆ ದೊರೆತಂತಾದದ್ದು. ಇಲ್ಲಿ ಗಂಡಸು ಅವಳನ್ನು 'ಅರ್ಧಾಂಗಿ' ಎಂದು ಕರೆದು ಗೌರವಿಸಿದ್ದಾನೆ. ಆದರೆ ಹೆಂಗಸು ಮಾಡುವ ಈ

ಎಲ್ಲ ವ್ರತಾಚರಣೆಗಳ ಉದ್ದೇಶ ಮನೆ, ಮಕ್ಕಳು, ಗಂಡ ಇವರ ಶ್ರೇಯೋಭಿವೃದ್ಧಿಗಾಗಿ ಮಾತ್ರ. ಅವಳದೆಂದು ಯಾವ ಪ್ರತ್ಯೇಕ ಆಕಾಂಕ್ಷೆಯೂ ಇಲ್ಲಿ ವ್ಯಕ್ತವಾಗುವುದಿಲ್ಲ. ಪೂಜೆಯ ಕೇಂದ್ರವೆಂದರೆ ಅವಳ ಯಜಮಾನನೂ, ದೈವವೂ ಆದ ಪತಿಯೇ. ಈ ಪತಿ ಕುಡುಕ, ಜೂಜುಕೋರನಾಗಿದ್ದರೂ ತನ್ನನ್ನು ಹಿಡಿದು ಸದೆ ಬಡಿಯುವವನಾದರೂ, ರೋಗಿಷ್ಠನೋ, ಅಂಗವಿಕಲನೋ ಆದರೂ 'ದೈವ' ವೇ ಆಗಿರುತ್ತಾನೆ.

ಗಂಡ ಹೆಂಡಿರ ಸಂಬಂಧವೆಂಬುದು ತೀವ್ರತರ ಅಸಮಾನತೆಯನ್ನು ಪ್ರತಿನಿಧಿಸುವ ಬಗೆಯದು. ಹೆಣ್ಣು ಮದುವೆಗೆ ಮುಂಚೆ ಶುದ್ಧ ಕನ್ನಿಕೆಯಾಗಿರಬೇಕು. ಮದುವೆಯಾಯಿತೋ ಅದೆಂಥದೇ ಸಂದರ್ಭದಲ್ಲೂ ಪತಿಯನ್ನು ಬಿಡುವಂತಿಲ್ಲ. ಇನ್ನು ವಿಧವೆಯಾಗಿ ಬಿಟ್ಟರೂ ಅವಳಿಗೆ ಅವನಿಂದ ಬಿಡುಗಡೆ ಇಲ್ಲ. ಅವನ ಹಿಂದೆಯೇ ಅವಳು ತನ್ನ ಸುಖ ಸರ್ವಸ್ವವನ್ನು ತ್ಯಜಿಸಿ ಬಳೆ, ಕುಂಕುಮ, ಮಾಂಗಲ್ಯ, ಬಣ್ಣದ ಸೀರೆಗಳಂತಹ ದಿನ ನಿತ್ಯದ ಸಂತೋಷದ ಅಲಂಕಾರಗಳನ್ನೂ ತೆಗೆದು ಹಾಕಿ ಬಿಡಬೇಕು. ಕೇಶ ಮುಂಡನ, ಒಪ್ಪತ್ತಿನ ಊಟಗಳಂತಹ ನಿರ್ಬಂಧಗಳಿಗೂ ಒಳಗಾಗಬೇಕು. ಉಳಿದ ಬಾಳಿನುದ್ದಕ್ಕೂ ಅಪವಿತ್ರಳೆನಿಸಿ ದಿನಗಳೆಯುವುದು ಅವಳ ಹಣೆ ಬರಹ. ಆದರೆ ಇವೆಲ್ಲ ಅನ್ವಯವಾಗುವುದು ಮೇಲು ಜಾತಿಯವರಲ್ಲಿ ಮಾತ್ರ.

ಎಲ್ಲಾ ವ್ರತಾಚರಣೆ ಸಂಪ್ರದಾಯಗಳಲ್ಲಿ ಹೆಂಡತಿಯನ್ನು 'ಅರ್ಧಾಂಗಿ' ಎಂದು ವ್ಯವಹರಿಸುವ ಈ ಮೇಲು ಜಾತಿ ಪುರುಷ, ಆಕೆ ವಿಧವೆಯಾದಾಗ ಅವಳಿಂದ ಪೂರ್ಣ ಆತ್ಮವಿನಾಶವನ್ನು ನಿರೀಕ್ಷಿಸುತ್ತಾನಾದರೆ, ತಾನು ವಿದುರನಾದಾಗ ತನ್ನ ಮೇಲೆ ಈ ನಿರ್ಬಂಧವನ್ನು ಹೇರಿಕೊಳ್ಳುವುದಿಲ್ಲ. ಬದಲಿಗೆ 'ಗೃಹಕೃತ್ಯ' ಗಳು ಸಾಂಗವಾಗಿ ನೆರವೇರಬೇಕೆಂಬ ನೆಪದಲ್ಲಿ ವಿಳಂಬ ಮಾಡದೆ ಮರು ಮದುವೆಯಾಗಿ ಬಿಡುತ್ತಾನೆ. ಜಾತಿಯ ಸ್ತರ ಕೆಳಗಿನದಾಗುತ್ತಾ ಈ ಪಕ್ಷಪಾತದ ನ್ಯಾಯನಿರ್ಣಯವಿಲ್ಲವೆಂಬುದು ಗಮನಾರ್ಹ. ಅಲ್ಲಿ ಹೆಣ್ಣಿನ ಶೀಲ, ಅವಳ ಮರು ಮದುವೆ, ಸಮಯ ಬಂದರೆ ಗಂಡನನ್ನು ಬಿಡುವ ಹಕ್ಕು- ಇವೆಲ್ಲವನ್ನೂ ಗಂಡಿಗೆ ಸಮಾನವಾಗಿಯೇ ನಿರ್ಣಯಿಸಲಾಗುತ್ತದೆ.

ದೇಶದ ರಾಜಕೀಯ ಹಾಗೂ ಆರ್ಥಿಕ ರಂಗಗಳಲ್ಲಾದ ಬದಲಾವಣೆಗಳಿಂದಾಗಿ ವ್ಯಾಪಿಸತೊಡಗಿದ ನಗರೀಕರಣ ಪ್ರಕ್ರಿಯೆಯಲ್ಲಿ ಮಹಿಳೆಯ ಸ್ಥಿತಿಗತಿಗಳಲ್ಲಿ ತೀವ್ರತರ ಬದಲಾವಣೆಗಳು ಕಾಣಲಾರಂಭಿಸಿದೆ. ಮಹಿಳೆಗೆ ದೊರಕಿದ ಶಿಕ್ಷಣ ಹಾಗೂ ಉದ್ಯೋಗದ ಅವಕಾಶಗಳಿಂದಾಗಿ ಅವಳೀಗ ಪುರುಷನಿಗೆ ಸಮಾನವಾದ ಸ್ಥಾನಮಾನಗಳಲ್ಲಿ ಪ್ರವೇಶಗಳನ್ನು ಪಡೆಯುತ್ತಿದ್ದಾಳೆ. ನಗರದ ಮಹಿಳೆಯು ದಕ್ಕಿಸಿಕೊಳ್ಳುತ್ತಿರುವ ಹೊಸ ಹೊಸ ಪಾತ್ರಗಳನ್ನು ಪುರುಷನು ಅನಿವಾರ್ಯವಾಗಿ ಒಪ್ಪಬೇಕಾಗಿದೆ.

ಹಾಗೆ ನೋಡಲು ಹೋದರೆ ಇಂದಿಗೂ ಶಿಕ್ಷಣ, ಉದ್ಯೋಗಗಳಲ್ಲಿ ಮಹಿಳೆಯರ ಪ್ರವೇಶ, ಸಾಧನೆಗಳು ಅಷ್ಟೇನೂ ತೀವ್ರವಾಗಿಲ್ಲವೆಂಬುದನ್ನು ಅಂಕಿ ಅಂಶಗಳು ತೋರಿಸಬಲ್ಲವು. ಆದರೂ ಮಹಿಳೆಯ ಸ್ಥಿತಿಗತಿಗಳಲ್ಲಿ ಕಾಣುತ್ತಿರುವ ಮೇಲುಚಲನೆ ನಿರ್ಲಕ್ಷಿಸುವಂಥದ್ದೂ ಅಲ್ಲ. ಅವಳ ಸ್ಥಿತಿಗತಿಗಳು ಅನಾದಿಕಾಲದಿಂದಲೂ ಎಂಬಷ್ಟು

ಹಿಂದಿನಿಂದಲೂ ಚಲನೆಯೇ ಸಾಧ್ಯವಿಲ್ಲವೆಂಬಷ್ಟು ಜಡವಾಗಿಬಿಟ್ಟಿದ್ದಾಗ, ದೇಶದ ಸ್ಥಿತಿಗತಿಗಳಲ್ಲಿ ಕಾಣಿಸಿದ ಪ್ರಧಾನ ಬದಲಾವಣೆಯಾಗಿ 'ನಗರೀಕರಣ' ಮೊದಲಾದದ್ದು, ಪ್ರಾಸಂಗಿಕವಾಗಿ ಎಂಬಂತೆ ಮಹಿಳೆಯ ಸ್ಥಿತಿಗತಿಗಳಿಗೂ ಹೊಸದೊಂದು ಚಾಲನೆಯನ್ನು ಒದಗಿಸಿಬಿಟ್ಟಿದ್ದು ನಿಜ. ಮನೆಯ ನಾಲ್ಕು ಗೋಡೆಗಳಿಂದ ಪಾರಾಗಿ ಬರಲು ದಾರಿಯೊಂದು ನಿರ್ಮಾಣವಾದದ್ದೂ ನಿಜ.

ನಗರೀಕರಣ ಪ್ರಕ್ರಿಯೆಯು ಪುರುಷನ ಜೀವನ ಶೈಲಿಯಲ್ಲೂ ಬದಲಾವಣೆಯನ್ನು ತಂದಿತು. ಶಿಕ್ಷಣಕ್ಕೆ ತೆರೆದುಕೊಂಡ ಯುವಕನು ತನ್ನ ಮನೆಯ ವೃತ್ತಿ ಕಸುಬು ಕೃಷಿಗಳಿಗೆ ಹಿಂತಿರುಗಿ ಹೋಗಲು ಅಸಾಧ್ಯವಾಗಿ ಬಿಡುತ್ತದೆ. ಅವನ ಶಿಕ್ಷಣಕ್ಕೆ ಅನುಗುಣವಾದ ಉದ್ಯೋಗಾವಕಾಶ ಹಳ್ಳಿಯಲ್ಲಿ ಸಾಧ್ಯವಿಲ್ಲ, ಹಳ್ಳಿಯಲ್ಲಿನ ವೃತ್ತಿಗೆ ತಕ್ಕ ತರಬೇತಿಯಿಂದ ಅವನು ದೂರ ಬಂದುಬಿಟ್ಟಿದ್ದಾನೆ. ಇದು ಅವನ ಸಂದಿಗ್ಧ. ಆದರೂ ಈಗೀಗಿನ ಸರ್ಕಾರಿ ಕಾರ್ಯಯೋಜನೆಗಳು, ಉಳುವವನೇ ಭೂಮಿಯ ಒಡೆಯನಾಗುತ್ತಾನೆ ಎಂಬಂತಹ ಕಾನೂನುಗಳು ಶಿಕ್ಷಿತ ಯುವಜನರನ್ನೂ ಹಳ್ಳಿಗಳಿಗೆ ಆಕರ್ಷಿಸುವುದರಲ್ಲಿ ಸ್ವಲ್ಪ ಮಟ್ಟಿಗೆ ನೆರವಾಗುತ್ತಿವೆ. ಆ ಮಾತಿರಲಿ.

ಇಷ್ಟಾದರೂ ಹೆಣ್ಣು ಮತ್ತು ಗಂಡು ಮಕ್ಕಳ ಬಗೆಗಿನ ನಮ್ಮ ಸಾಮಾಜಿಕ ಅಭಿಪ್ರಾಯಗಳಿಂದಾಗಿ ಹೆಣ್ಣು ಮಕ್ಕಳು ವಿದ್ಯಾಭ್ಯಾಸವನ್ನೂ ಮುಂದುವರೆಸುವುದೇನೂ ಸಹಜದ ಮಾತಲ್ಲ. ವಾಸ್ತವದಲ್ಲಿ ಶಿಕ್ಷಣದ ಉನ್ನತ ಹಂತಗಳನ್ನು ತಲುಪಿದ ಹೆಣ್ಣು ಮಕ್ಕಳ ಸಾಧನೆ ಸಾಮರ್ಥ್ಯಗಳು ಗಂಡು ಹುಡುಗರನ್ನು ಮೀರಿಸುತ್ತಿವೆ ಎಂಬ ಅಂಕಿ ಅಂಶಗಳೇನೋ ಇವೆ. ಇಷ್ಟಾದರೂ ಅವಳ ಶಿಕ್ಷಣಕ್ಕೆ ಕುಟುಂಬದಲ್ಲೇ ಹಲವು ಕಂಟಕಗಳಿವೆ. ಅಷ್ಟೇನೂ ಬುದ್ಧಿವಂತನಲ್ಲದ ಮಗ, ರ್‍ಯಾಂಕ್ ಪಡೆವ ಮಗಳು -ಇವರಿಬ್ಬರಲ್ಲಿ ಉನ್ನತ ಶಿಕ್ಷಣದ ಅವಕಾಶ ದೊರೆಯುವುದು ಮೊದಲು ಮಗನಿಗೆ. ಉಳಿದರೆ ಮಗಳಿಗೆ, ಕೆಲವೊಮ್ಮೆ ಆರ್ಥಿಕ ಅನುಕೂಲವಿದ್ದರೂ ಜಾಸ್ತಿ ಓದಿದರೆ ಗಂಡು ಸಿಗಲಾರನೆಂಬ ಕಾರಣ ಅವಳ ಅವಕಾಶವನ್ನು ಮೊಟಕು ಮಾಡುತ್ತದೆ. ಗಂಡ-ಹೆಂಡತಿಯರಲ್ಲಿ ಯಾವ ಬಗೆಯಲ್ಲೂ ಹೆಂಡತಿ ಗಂಡನನ್ನೂ ಮೀರಿಸುವಂತಿರಬಾರದು. ಅವಳ ಜಾತಿಯಲ್ಲಿ ಹೆಚ್ಚು ಓದಿದ ಗಂಡಸರು ಇಲ್ಲವೆಂದರೆ ಇವಳ ಓದು ಮುಂದುವರೆಯುವುದಿಲ್ಲ. ಇನ್ನೊಂದು ವಿಪರ್ಯಯದ ಕಾರಣದಲ್ಲಿ ಅವಳು ಒಂದು ಹಂತಕ್ಕಾದರೂ ಓದುವುದೂ ಅಪೇಕ್ಷಣೀಯವೆನಿಸಿಬಿಡುತ್ತದೆ. ಮಧ್ಯಮ ವರ್ಗದ ಎಲ್ಲ ವರಗಳೂ ತಮ್ಮ ಆದಾಯಕ್ಕೆ ಪೂರಕವಾಗಿ ಹೆಂಡಂದಿರ ವರಮಾನವಿರಲಿ ಎಂದು ಅಪೇಕ್ಷಿಸುತ್ತಾರೆ. ಇಲ್ಲಿ ಹೆಣ್ಣು ಓದಿರಲೂ ಬೇಕು, ಹಾಗೆಂದು ವರನ ಓದನ್ನು ಮೀರಿ ಅವನ ನೌಕರಿಯ ಸ್ತರವನ್ನು ಮೀರಿ ಮುಂದೆ ಹೋಗಿ ಬಿಡಬಾರದು. ಇವೆಲ್ಲ ನಗರದ ಮಧ್ಯಮ ವರ್ಗದ ಮೇಲುಜಾತಿಯ ಸಮುದಾಯಗಳಿಗೇ ಹೆಚ್ಚಾಗಿ ಅನ್ವಯವಾಗುತ್ತಿದೆ ಎಂಬುದು ನಿಜವಾದರೂ, ಉಳಿದ ಜಾತಿ ವರ್ಗಗಳಿಗೂ ಈ ಲಕ್ಷಣ ಹಬ್ಬುತ್ತಿದೆ ಎಂಬುದು ತೀರಾ ಅಸ್ಪಷ್ಟವಾಗೇನೂ ಉಳಿದಿಲ್ಲ.

ಶಿಕ್ಷಣ, ಉದ್ಯೋಗ, ನಗರೀಕರಣದಂತಹ ಆಧುನಿಕ ಪ್ರಕ್ರಿಯೆಗಳಲ್ಲಿ, 'ಮದುವೆ'ಗಾಗಿ ನಡೆಯುವ ಆಯ್ಕೆಯ ಅವಕಾಶಗಳೂ ಸಂಕೀರ್ಣಗೊಳ್ಳುತ್ತಿವೆಯಾಗಿ, ಜಾತಿ ಜಾತಿಗಳ ಒಳಪ್ರಭೇದಗಳಲ್ಲಿ ಅದೊಂದು ಬಗೆಯ ಒಡಂಬಡಿಕೆಯೂ ತೋರತೊಡಗಿದೆ. ಸಣ್ಣ ಸಣ್ಣ ಗುಂಪುಗಳು ಒಂದಾಗುವುದಕ್ಕೆ ಸಮುದಾಯದ ಒಪ್ಪಿಗೆಯೂ ದೊರೆಯಲಾರಂಭಿಸಿದೆ. ಈಗಿನ ಜೀವನ ಶೈಲಿಯ ಆಯ್ಕೆಯಲ್ಲಿ ಶಿಕ್ಷಣ, ವರ್ಗ, ಅಂತಸ್ತುಗಳೇ ಮುಖ್ಯವೆನಿಸಿ ಜಾತಿ ಸಂಬಂಧಗಳಂತಹ ಸಂಗತಿಗಳನ್ನು ಪಕ್ಕಕ್ಕೆ ಸರಿಸುವ ಅಂಶಗಳಾಗುತ್ತವೆ.

ಹೀಗೆಂದಾಗ ಮಹಿಳೆಯರಿಗೆ ದೊರೆಯುವ ಶಿಕ್ಷಣಾವಕಾಶಗಳು ಬಹುಮಟ್ಟಿಗೆ ಒಳ್ಳೆಯ ಗಂಡನನ್ನು ಹುಡುಕುವ ಉದ್ದೇಶದ್ದಾಗಿರುತ್ತದೆ ಎಂಬ ಮಾತೇ ಪ್ರಧಾನವಾದುದು. ಸರ್ಕಾರದ ಕಾಯಿದೆ ಕಾನೂನುಗಳು ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ವಿಶೇಷ ಸೌಲಭ್ಯ, ಸವಲತ್ತುಗಳನ್ನು ಮೀಸಲಿರಿಸಬಹುದು. ತಂದೆ ತಾಯಿಯರು ತಮ್ಮ ಹೆಣ್ಣು ಮಕ್ಕಳನ್ನು ಶಾಲೆ ಕಾಲೇಜುಗಳಿಗೆ ಕಳಿಸಲೂಬಹುದು. ಆದರೆ ಸೂಕ್ತ ವರನನ್ನು ಪಡೆಯುವಷ್ಟಕ್ಕೆ ಅವಳ ಶಿಕ್ಷಣ ಸೀಮಿತವಾಗಿಬಿಡುತ್ತದೆ. ಆ ಹುಡುಗಿ ಪದವಿ ಪಡೆಯುತ್ತಾಳೆ. ವರನಿಗೆ ಅಗತ್ಯವಾದರೆ ಪೂರಕ ಸಂಪಾದನೆಗಾಗಿ ನೌಕರಿ ಸೇರುತ್ತಾಳೆ. ಇಲ್ಲವೇ ಅವನ ಮನೆಯ ಅಲಂಕಾರವಾಗಿ ಕಲಿತದ್ದನ್ನು ಪಕ್ಕಕ್ಕಿಟ್ಟು ಜೀವನ ಸಾಗಿಸುತ್ತಾಳೆ. ವರನ ಸ್ಥಾನಮಾನ ಏರುತ್ತಾ ಹೋದಂತೆ ಹುಡುಗಿ ಅತ್ಯುನ್ನತ ಪ್ರತಿಭೆ, ಪದವಿಗಳನ್ನು ಪಡೆದಿದ್ದರೂ ಅವನ್ನೆಲ್ಲ ಉಪ್ಪಿನಕಾಯಿ ಹಾಕಿಟ್ಟು ಬದುಕಬೇಕಾಗುತ್ತದೆ. ಈ ಪರಿಸ್ಥಿತಿಯಲ್ಲೂ ಕ್ರಮೇಣದ ಬದಲಾವಣೆಗಳಾಗುತ್ತಿವೆ. ಡಾಕ್ಟರ್, ಇಂಜಿನಿಯರ್, ಐಎಎಸ್ ವರರು ಅದೇ ಸ್ತರದ ವಧುಗಳನ್ನು ಅಪೇಕ್ಷಿಸತೊಡಗಿದ್ದಾರೆ. ಆದರೆ ಈ ಗುಂಪಿಗೆ ಸೇರಿದ ಭಾಗ್ಯಶಾಲಿಗಳು ಇಡೀ ಭಾರತದಲ್ಲಿ ಕೇವಲ ಕೆಲವರು. ಉಳಿದ ಪ್ರಧಾನ ಜನಸಮುದಾಯ ಈ ಗುಂಪನ್ನು ಒಂದು ಬಗೆಯ ಅಸೂಯೆಯಿಂದ, ಬೆರಗಿನಿಂದ ಕಾಣಬಹುದಷ್ಟೆ.

ಭಾರತದ ಮಹಿಳೆಗೆ ಒದಗಿ ಬಂದ ಶಿಕ್ಷಣಾವಕಾಶಕ್ಕೆ ವಿಚಿತ್ರವಾದೊಂದು ಚರಿತ್ರೆ ಇದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಸುಧಾರಣಾವಾದಿಗಳಿಂದಾಗಿ ಮಹಿಳೆಗೆ ಶಿಕ್ಷಣಾವಕಾಶಗಳು ತೆರೆದುಕೊಳ್ಳಲಾರಂಭಿಸಿದ್ದು. ಉನ್ನತ ಜಾತಿಗಳಲ್ಲಿ ಎಳೆಯ ವಯಸ್ಸಿನ ವಿಧವೆಯರಿಗೆ ಜೀವನದ ಗುರಿಯೊಂದನ್ನು ಕಾಣಿಸುವ ಪ್ರಯತ್ನವಾಗಿ ಕಲ್ಕತ್ತದ ಅಂದಿನ ಸುಧಾರಣಾವಾದಿಗಳು ಈ ಮಹಿಳೆಯರಿಗೆ ಶಿಕ್ಷಣದ ಅವಕಾಶ ದೊರೆಯುವಲ್ಲಿ ದೊಡ್ಡ ಪ್ರಯತ್ನಗಳನ್ನು ಮಾಡಿದರು. ಹಾಗೆ ನಮ್ಮ ಮಹಿಳೆಯರಲ್ಲಿ ಮೊದ ಮೊದಲು ಶಿಕ್ಷಣಾವಕಾಶಗಳು ದೊರೆತದ್ದು ಈ ಬಾಲ ವಿಧವೆಯರಿಗೆ. ಎರಡನೆಯದಾಗಿ, ಉನ್ನತ ಪದವಿಗಳನ್ನು ಪಡೆದು ದೊಡ್ಡ ಹುದ್ದೆಗಳಲ್ಲಿದ್ದ ಪುರುಷರು ವಿದ್ಯೆಯ ಗಂಧವಿಲ್ಲದ ಹೆಣ್ಣುಗಳನ್ನು ಕಟ್ಟಿಕೊಂಡು ಏಗುವುದರಲ್ಲಿ ಬೇಸತ್ತರು. ಅಗಾಧವಾದ ಮಾನಸಿಕ, ಬೌದ್ಧಿಕ ಅಂತರಗಳ ಕಷ್ಟವನ್ನು ಸರಿಪಡಿಸಬೇಕೆಂದರೆ ವಿದ್ಯಾವತಿಯಾದ ಹೆಣ್ಣು ಬೇಕೆಂದು ಆಶಿಸತೊಡಗಿದರು. 'ಉನ್ನತ ವರಗಳೆನಿಸಿದ' ಇವರ

ಅಪೇಕ್ಷೆಗಳಿಗನುಗುಣವಾಗಿ ಹೆಣ್ಣು ಮಕ್ಕಳ ಮನೆಯವರು ತಮ್ಮ ಹೆಣ್ಣು ಮಕ್ಕಳನ್ನು ಶಾಲೆ ಕಾಲೇಜುಗಳಿಗೆ ಕಳಿಸುವುದೂ ಅನಿವಾರ್ಯವಾಯಿತು. ಈ ವಿದ್ಯಾವತಿಯರು ನೌಕರಿಗಳನ್ನು ಅಪೇಕ್ಷಿಸುವ ವರ್ಗವಾಗದೆ, ಮನೆಯ ಗೌರವ ಹಾಗೂ ಪರಂಪರೆಗಳನ್ನು ಕಾಯ್ದುಕೊಳ್ಳುತ್ತಾ ಮನೆತನದ ಪ್ರತಿಷ್ಠೆಗೆ ಧಕ್ಕೆ ಬಾರದಂತೆ ಮನೆಮಂದಿಯ ಹಿತಗಳನ್ನು ಸಂರಕ್ಷಿಸುವಲ್ಲಿ ಮುಂಚಿಗಿಂತಲೂ ಹೆಚ್ಚು ಸಮರ್ಥರೆನಿಸಿ ಬಾಳುವ ಗುಣವತಿಯರಾಗುತ್ತಾರೆಂಬ ಸಾಮಾಜಿಕ ನಿರೀಕ್ಷೆ ಇದ್ದೇ ಇತ್ತು.

ವರದಕ್ಷಿಣೆಯ ಅಪರಾವತಾರಗಳು ಹಾಗೂ ಪರಿಣಾಮಗಳನ್ನು ಕುರಿತ ಚರ್ಚೆ ಕೊನೆಮೊದಲಿಲ್ಲದೆ ನಡೆಸಬಹುದಾದದ್ದು. ಆದರೆ ಪ್ರಸಕ್ತದಲ್ಲಿ ವರದಕ್ಷಿಣೆಯು ಭಾರತದ ಮಹಿಳೆಯ ಶಿಕ್ಷಣವನ್ನು ಕುರಿತಂತೆ ಬೀರಿದ ಪರಿಣಾಮವನ್ನು ಸ್ವಲ್ಪ ಗಮನಿಸಬಹುದು. ನಮ್ಮಲ್ಲಿ ಬಹುಮಟ್ಟಿಗೆ ಹಿಂದೆ ಪ್ರಚಲಿತವಿದ್ದದ್ದು ವಧೂದಕ್ಷಿಣೆಯ ಪದ್ಧತಿ. ಆದರೆ ಕ್ರಮೇಣವಾಗಿ ವರದಕ್ಷಿಣೆಯ ರೂಢಿ ಬಂದದ್ದಕ್ಕೇ ಹಲವು ಕಾರಣಗಳು ಕೂಡಿ ಬಂದವು. ಹುಡುಗಿಯ ಮದುವೆ ಆಕೆ ಋತುಮತಿಯಾಗುವ ಮೊದಲೇ ಆಗಬೇಕು ಎಂಬ ನಿಯಮವಿದ್ದದ್ದು ಹುಡುಗಿಯ ತಂದೆ ತಾಯಿಯರನ್ನು ದೊಡ್ಡ ಆತಂಕಕ್ಕೆ ಸಿಲುಕಿಸುವ ಸಂಗತಿಯಾಗಿಬಿಟ್ಟಿತು. ಜಾತಿಯೊಳಗೇ ಸೂಕ್ತ ವರನನ್ನು ಹುಡುಗಿ ದೊಡ್ಡವಳಾಗುವ ಮುಂಚೆ ಹುಡುಕುವ ಪ್ರಯಾಸವನ್ನು ಭರಿಸಲಾಗದೆ ಹುಡುಗಿಯನ್ನು ಕುರುಡ, ಕುಂಟ, ಮುದುಕ, ನಿರ್ಗತಿಕ -ಯಾರೆಂದರವರಿಗೆ ಒಪ್ಪಿಸುವುದು ಸಾಮಾನ್ಯವಾಗಿತ್ತು. ಆದರೆ ಈ ಪ್ರಶ್ನೆ ಅತಾರ್ಕಿಕ, ಅಸಹಜವೆಂಬಷ್ಟು ಕ್ರೂರವಾಗಿ ಬೆಳೆದುಬಿಟ್ಟಾಗ, ತಂದೆ ತಾಯಿಯರಲ್ಲಿ ಈ ನಿಯಮವನ್ನು ಪಾಲಿಸಲಾರೆವು ಎಂಬಂತಹ ಅಸಹಾಯಕತೆಯ ಮೂಲದ ಪ್ರತಿರೋಧ ಹುಟ್ಟಿತು. ಋತುಮತಿಯಾದ ಮೇಲೂ ಹೆಣ್ಣು ಮಗಳು ಮನೆಯಲ್ಲಿ ಉಳಿಯ ತೊಡಗಿದಳು. ಸಮಾಜವು ಕಣ್ಣು ಮುಚ್ಚಿದಂತೆ ನಟಿಸಬೇಕಾಯಿತು. ಸೂಕ್ತ ವರನ ಶೋಧನೆಯಲ್ಲಿ ದಕ್ಷಿಣೆಯನ್ನು ಕೊಡುವ ರೂಢಿ ಬಂತು. ವರದಕ್ಷಿಣೆ ಹಾಗೂ ಮದುವೆಯ ಇತರ ಖರ್ಚುಗಳನ್ನು ಹೊಂದಿಸಿಕೊಳ್ಳಲು ವಧುವಿನ ತಂದೆಗೆ ಸಾಕಷ್ಟು ಸಮಯಾವಕಾಶ ಬೇಕಿತ್ತು. ಈ ಮಧ್ಯೆ ಬೆಳೆದ ಹುಡುಗಿಯನ್ನು ಸುಮ್ಮನೆ ಇಟ್ಟುಕೊಳ್ಳುವುದು ಕಷ್ಟವೆಂಬ ಕಾರಣಕ್ಕೆ, ಮದುವೆಯಾಗುವವರೆಗೆ ಶಾಲೆ ಕಾಲೇಜಿಗೆ ಹೋಗಲಿ ಎಂಬಷ್ಟಕ್ಕೆ ಬಂತು. ಈ ಕಲಿತ ಹೆಣ್ಣುಗಳನ್ನು ಬಯಸುವ ವಿದ್ಯಾವಂತ ಗಂಡುಗಳೂ ಇದ್ದೇ ಇದ್ದರು. ವರದಕ್ಷಿಣೆಯು ಬೆಳೆ ಬೆಳೆಯುತ್ತಾ ಹುಡುಗಿಯರ ಮದುವೆಯ ವಯಸ್ಸು ಕೂಡ ಹೆಚ್ಚುತ್ತಲೇ ಹೋಗಬೇಕಾಯಿತು. ಇದೂ ಕೂಡ ಹುಡುಗಿಯರ ಶಿಕ್ಷಣಾವಕಾಶಕ್ಕೆ ಕಾರಣವಾಗಿ ಒದಗಿ ಬಂದಿತೆಂಬುದು ಗಮನಾರ್ಹ.

ಇನ್ನು ಗಾಂಧಿಯವರು ಸ್ವಾತಂತ್ರ್ಯ ಚಳುವಳಿಯಲ್ಲಿ ನಾಡಿನ ಮಹಿಳೆಯರನ್ನು ತೊಡಗಿಸಿದ್ದರ ಪರಿಣಾಮದಿಂದಾಗಿ ಭಾರತದ ಮಹಿಳೆಯರ ಸ್ಥಿತಿಗತಿಗಳಲ್ಲಿ ಆದ ಬದಲಾವಣೆಗಳೂ ಕೂಡ ಗಮನಾರ್ಹ. ಒಟ್ಟು ಚಳುವಳಿಯ ಪರಿಣಾಮ ಎಂಬುದಕ್ಕಿಂತ ಅದರ ನೇತಾರರಾಗಿದ್ದ ಗಾಂಧಿಯವರ ವ್ಯಕ್ತಿತ್ವವೇ ಹೆಣ್ಣುಮಕ್ಕಳ ಹಾಗೂ ಅವರ

ಕುಟುಂಬದವರ ಮೇಲೆ ಹೆಚ್ಚಿನ ಪ್ರಭಾವ ಬೀರಿದ್ದು. ಭಾರತೀಯರಿಗೆ ಗಾಂಧಿಯಲ್ಲಿ ಕಂಡದ್ದು ಸನ್ಯಾಸಿಯ, ಮಹಾತ್ಮನ ವ್ಯಕ್ತಿತ್ವ. ಆತನು ಹೆಣ್ಣು ಮಕ್ಕಳನ್ನು ಚಳುವಳಿಯಲ್ಲಿ ಭಾಗವಹಿಸಬೇಕೆಂದು ಕರೆ ಇತ್ತಿದ್ದಾನೆಂದರೆ ತಮ್ಮ ಹೆಣ್ಣು ಮಕ್ಕಳು ಖಂಡಿತವಾಗಿಯೂ ಭಾಗವಹಿಸಬಹುದು ಎಂಬ ಒಪ್ಪಿಗೆಗೆ ಇದು ಕಾರಣವಾಯಿತು. ಚಳುವಳಿಯು ಸ್ವಾತಂತ್ರ್ಯವನ್ನು ತಂದಿತು. ಬ್ರಿಟಿಷರು ಭಾರತಕ್ಕೆ ಅಧಿಕಾರವನ್ನು ಹಸ್ತಾಂತರಿಸಿದರು. ಇವೆಲ್ಲ ಹಂತಗಳಲ್ಲಿ ಭಾಗಿಗಳಾಗಿದ್ದ ಮಹಿಳೆಯರಿಗೆ ಪ್ರಜಾಪ್ರಭುತ್ವದ ಕಲ್ಪನೆ ಅಂತರ್ಗತವಾಗುವುದು ಸಾಧ್ಯವಾಯಿತು. ಒಟ್ಟು ಪ್ರಕ್ರಿಯೆಯಲ್ಲಿ ಮಹಿಳೆಯರು ಪ್ರಜಾಪ್ರತಿನಿಧಿಗಳಾಗಿ ಅಧಿಕಾರಗಳನ್ನು ವಹಿಸಿಕೊಂಡರು. ಸಂಖ್ಯೆಯ ದೃಷ್ಟಿಯಿಂದ ಹೆಚ್ಚಿಲ್ಲದಿದ್ದರೂ, ಭಾರತದ ರಾಜಕೀಯ ಕ್ಷೇತ್ರದಲ್ಲಿ ಅತ್ಯಂತ ಪ್ರಧಾನವಾದ ಅವಕಾಶಗಳು ನಮ್ಮ ಮಹಿಳೆಯರಿಗೆ ತೆರೆದುಕೊಂಡವು. ಕ್ರಮೇಣವಾಗಿ ರಾಜಕೀಯ ಕ್ಷೇತ್ರದ ಎಲ್ಲ ನೆಲೆಗಳಲ್ಲೂ ನಮ್ಮ ಮಹಿಳೆಯರು ಸಕ್ರಿಯವಾಗಿ ಭಾಗವಹಿಸಲಾರಂಭಿಸಿದರು.

ಭಾರತದ ಮಹಿಳೆಯರು ಇಲ್ಲಿನ ರಾಜಕೀಯ ಮತ್ತು ಉದ್ಯೋಗ ಕ್ಷೇತ್ರಗಳಲ್ಲಿ ಅದೆಷ್ಟು ಸಹಜವಾಗಿ ಬೇರೂರಿ ಬೆಳೆದು ಬರುತ್ತಿದ್ದಾರೆಂಬುದು ತುಂಬಾ ಸಂತೋಷದ ಹಾಗೂ ಕುತೂಹಲದ ಸಂಗತಿ. ಇಂಥ ಮಹಿಳೆಯರು ಬಹುಮಟ್ಟಿಗೆ ನಗರದ ಮಧ್ಯಮವರ್ಗದ ಮೇಲು ಜಾತಿಗಳಿಗೇ ಸೇರಿದ್ದಾರೆಂಬುದೇನೋ ನಿಜವೇ. ಮಹಿಳೆಯ ಈ ಮುನ್ನಡೆಯನ್ನು ತಡೆಯುವ ಪ್ರಯತ್ನಗಳು ಪರೋಕ್ಷವಾಗಿ ನಡೆಯುತ್ತಲೇ ಇವೆ. ಪುರುಷ ಪ್ರಧಾನ ವ್ಯವಸ್ಥೆಗೆ ಇದನ್ನು ಅಷ್ಟು ಸಹಜವಾಗಿ ಅರಗಿಸಿಕೊಳ್ಳಲು ಸಾಧ್ಯವಾಗಿಲ್ಲದಿರಬಹುದು. ಆದರೆ ಮಹಿಳೆಯ ಮುನ್ನಡೆಯು ವಿವಿಧ ಜಾತಿ, ವರ್ಗ, ಗ್ರಾಮಗಳ ಹಂತಕ್ಕೂ ವಿಸ್ತರಿಸುತ್ತಾ ಸಾಗಿರುವುದನ್ನು ಈ ಸಮಾಜವು ಅನಿವಾರ್ಯವಾಗಿಯಾದರೂ ಒಪ್ಪಿಕೊಳ್ಳಲೇ ಬೇಕಾಗಿದೆ.

ಭಾರತದ ಶಿಕ್ಷಿತ ಮಹಿಳೆಯರು ಅತ್ಯಂತ ಜವಾಬ್ದಾರಿಯ ಉದ್ಯೋಗ ನೌಕರಿಗಳಲ್ಲಿದ್ದು ಸಮರ್ಥವಾಗಿ ನಿರ್ವಹಿಸುತ್ತಿದ್ದಾರೆ. ತಮ್ಮ ಎಂದಿನ ಹೊಣೆಯನ್ನು ಬಿಡದೆ ಉತ್ತಮ ಗೃಹಿಣಿಯರಾಗಿಯೂ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾರೆಂಬುದು ಪ್ರಶಂಸನೀಯ. ಎರಡೆರಡು ಹೊಣೆಗಳನ್ನು ಹೀಗೆ ನಿಭಾಯಿಸುವಲ್ಲಿ ಈ ಶಿಕ್ಷಿತ ಮಹಿಳಾ ವರ್ಗಕ್ಕೆ ನೆರವಾಗಿ ಒದಗಿರುವವರು ಶಿಕ್ಷಿತರಲ್ಲದ ವರ್ಗದವರಾದ ಮನೆಗೆಲಸದ ಹೆಣ್ಣುಗಳು. ಸಮಯ ಸಂದರ್ಭಗಳಲ್ಲಿ ಸಂಬಂಧಿಕರಾದ ಹೆಂಗಸರು. ಹೆರಿಗೆ, ಬಾಣಂತನಗಳಂತಹ ಕಷ್ಟ ಸಮಯಗಳಲ್ಲಿ ತಾಯಿಯೋ, ಅಕ್ಕನೋ ನೆರವಾಗುತ್ತಾರೆ. ವಿದೇಶಗಳಿಗೆ ಹೋಗಿ ನೆಲೆಸಿರುವ ಮಹಿಳೆಯರು ಹೆರಿಗೆ ಬಾಣಂತನಗಳಿಗೆ ತಾಯಿ, ಅತ್ತೆ, ಅಕ್ಕ ಹೀಗೆ ಯಾರನ್ನಾದರೂ ಕರೆಸಿಕೊಳ್ಳುವ ಪ್ರಸಂಗಗಳು ಹೆಚ್ಚುತ್ತಿವೆ. ಇಂತಹ ನೆರವಿನಿಂದಾಗಿ ಉದ್ಯೋಗಸ್ಥ ಮಹಿಳೆಯರು ಬಲು ಬೇಗನೆ ಚೇತರಿಸಿಕೊಂಡು ತಮ್ಮ ಕೆಲಸಗಳಿಗೆ ಹಿಂತಿರುಗುವುದು ಸಾಧ್ಯವಾಗುತ್ತದೆ.

ಕ್ರಮೇಣ ಶಿಕ್ಷಣ, ಉದ್ಯೋಗಾವಕಾಶಗಳು ಹೆಚ್ಚು ವ್ಯಾಪ್ತಿಯ ಮಹಿಳೆಯರಿಗೆ ದೊರಕುವಂತಾದಾಗ ಮನೆಗೆಲಸದ ನೆರವಿಗೆ ಹೆಣ್ಣಾಳುಗಳು ದೊರೆಯುವುದು ಕಷ್ಟವಾಗಬಹುದು, ಎಲ್ಲರೂ ಉದ್ಯೋಗ ನೌಕರಿಗಳಲ್ಲಿ ತೊಡಗುವಂತಾಗಿ ಕಷ್ಟ ತಾಪತ್ರಯಗಳ ಸಂದರ್ಭಗಳಿಗೆ ಧಾವಿಸಿ ಬರುವುದು ನೌಕರಿಗಳಲ್ಲಿರುವ ತಾಯಿಯರಿಗೂ ಸಾಧ್ಯವಾಗದಿರಬಹುದು -ಇವೆಲ್ಲದರ ನಡುವೆಯೂ ಭಾರತದ ಮಹಿಳೆಯು ಹೊಸ ಹೊಸ ಉಪಾಯಗಳನ್ನು ಹುಡುಕಿಕೊಳ್ಳುತ್ತಲೇ ತನ್ನ ಹೊಸ ಅವಕಾಶಗಳನ್ನು ಸಮರ್ಥವಾಗಿ ಬಳಸಿಕೊಳ್ಳುತ್ತಿದ್ದಾಳೆ. ಗೃಹಕೃತ್ಯದ ಹೊಣೆಗಾರಿಕೆಯನ್ನು ಸಂಭಾಳಿಸುತ್ತಿದ್ದಾಳೆ. ಪರಂಪರೆಯನ್ನು ಕಾಯ್ದು ಸಂರಕ್ಷಿಸುವ ಕರ್ತವ್ಯದೊಂದಿಗೆ ಆಧುನಿಕತೆಯನ್ನು ಸಮನ್ವಯಗೊಳಿಸುತ್ತಲೇ ಸಾಗಿರುವ ಭಾರತೀಯ ನಾರಿಯ ಮುನ್ನಡೆ ತೀರಾ ತ್ರಾಸದಾಯಕವಾದದ್ದೇನೋ ಹೌದು. ಆದರೆ ಮುಂದಿನ ಪೀಳಿಗೆಗೆ, ಒಟ್ಟಾರೆ ಸಮಾಜಕ್ಕೆ ಭರವಸೆಯನ್ನೊದಗಿಸುವ ಸಂಗತಿ ಇದೊಂದೇ ಆಗಿದೆ. ಭಾರತದ ನಾರಿಯ ಈ ಆದರ್ಶದ ಹೋರಾಟ ಅವಳ ವಿಕಸನಕ್ಕೂ, ಸಮಾಜದ ಒಳಿತಿಗೂ ಒಟ್ಟಿಗೇ ಮಾರ್ಗವನ್ನು ನಿರ್ಮಿಸುತ್ತಿದೆ. ಆಚಾರ ವಿಚಾರಗಳಲ್ಲಿ ಸಂಪ್ರದಾಯಗಳ ಸ್ಥೂಲವಿವರಗಳಲ್ಲಿ ಮೊದಲಿನಷ್ಟು ತೀವ್ರತೆ ಸಾಧ್ಯವಿಲ್ಲದೆ ಹೋಗುತ್ತಿರುವುದನ್ನಷ್ಟೇ ಗಮನಿಸಿ ಒಟ್ಟು ಸಂಸ್ಕೃತಿಗೇ ಏನೋ ದೊಡ್ಡ ಪ್ರಮಾದ ಸಂಭವಿಸುತ್ತಿದೆ ಎಂಬಂತೆ, ಇದಕ್ಕೆಲ್ಲ ಮಹಿಳೆಯೇ ಕಾರಣ ಎಂಬಂತೆ ಕೆಲವರು ದಾಂಧಲೆಯನ್ನೆಬ್ಬಿಸುತ್ತಿದ್ದಾರೆ.

ಆದರೆ ಸೂಕ್ಷ್ಮವಾಗಿ ಗಮನಿಸಿದರೆ ಭಾರತೀಯ ಮಹಿಳೆ ಅಂದಿಗೂ ಇಂದಿಗೂ ಕುಟುಂಬದ ಸಂರಕ್ಷಣೆಯ ಭಾರವನ್ನು, ಬರಲಿರುವ ಪೀಳಿಗೆಯನ್ನು ಸಮರ್ಥವಾಗಿ ಸಂಗೋಪನೆ ಮಾಡುವ ಹೊಣೆಯನ್ನು ಪ್ರಧಾನವಾಗಿಯೇ ಪರಿಗಣಿಸಿ ನಡೆದಿದ್ದಾಳೆಂಬುದು ತಿಳಿಯುತ್ತದೆ. ತನ್ನ ವ್ಯಕ್ತಿತ್ವ ವಿಕಸನಕ್ಕೆ ಹೊರಗಿನ ಉದ್ಯೋಗ ನೌಕರಿಗಳು ನೆರವಿಗೆ ಬರುವ ಬಹುತೇಕ ಸಂದರ್ಭಗಳನ್ನುಕೂಡ ಬಿಟ್ಟುಕೊಡಲು ಅವಳು ತಯಾರಾಗಿಯೇ ಇರುತ್ತಾಳೆ. 'ಮಹಿಳೆಯರು ಸ್ವಂತದ ಸಾಧನೆಗಳ ಮೇಲೆ ತಾವಾಗಿಯೇ ನಿರ್ಬಂಧಗಳನ್ನು ಹೇರಿಕೊಂಡಿದ್ದಾರೆ' ಎಂದು ಈ ಸಂದರ್ಭವನ್ನು ಖ್ಯಾತ ಸಮಾಜ ಶಾಸ್ತ್ರಜ್ಞೆ ನೀರಾದೇಸಾಯಿ ವಿವರಿಸಿದ್ದಾರೆ. ನಮ್ಮ ಮಹಿಳೆಯರ ಪಾಲಿಗೆ ಉದ್ಯೋಗ ಎಂದರೆ ಒಂದು ನೌಕರಿ ಎಂದಷ್ಟೇ ಹೊರತು, ಅದು ತಮ್ಮ ಸಾಧನೆಯ ಕ್ಷೇತ್ರ, ತಮ್ಮನ್ನು ಇಡಿಯಾಗಿ ತೊಡಗಿಸಿಕೊಂಡು ಬೆಳೆಯಬೇಕಾದ ಅವಕಾಶ ಎನ್ನುವಂಥದ್ದಾಗಲಾರದು. ತನ್ನ ಸಂಸಾರದಲ್ಲಿ ಹೆಂಡತಿಯಾಗಿ, ತಾಯಿಯಾಗಿ, ಗೃಹಿಣಿಯಾಗಿ ತಾನು ನಿರ್ವಹಿಸಬೇಕಾದ ಹೊಣೆಯನ್ನೇ ಅವಳು ಪ್ರಧಾನವಾಗಿ ಭಾವಿಸಬೇಕಾಗುತ್ತದೆಯಾಗಿ, ಹೊರಗೆ ಸ್ವತಂತ್ರ ಜವಾಬ್ದಾರಿಯ ಉನ್ನತ ಹುದ್ದೆಗಳನ್ನು ಒಪ್ಪಿಕೊಳ್ಳಲು ಹೋಗುವುದಿಲ್ಲ. ಅವಳು ಉನ್ನತ ಪದವಿಗಳನ್ನು, ಅರ್ಹತೆಗಳನ್ನು ಹೊಂದಿದ್ದರೂ ಪೂರ್ಣ ಕಾಲದ ಅಧ್ಯಾಪನ ಸಂಶೋಧನೆಗಳ ಅವಕಾಶಗಳನ್ನು ಸರಿಸಿ ಅರೆ ಕಾಲಿಕ ಅಧ್ಯಾಪಕಿಯಾಗುತ್ತಾಳೆ. ವೈದ್ಯ, ನ್ಯಾಯಶಾಸ್ತ್ರಗಳಂತಹ ವಿಶೇಷ ಪರಿಣತಿಯನ್ನು ಬೇಡುವ ಕ್ಷೇತ್ರಗಳಲ್ಲಿನ ಪದವಿಗಳಲ್ಲಿ ರ್‍ಯಾಂಕ್, ಪಡೆದ ಪ್ರತಿಭಾವಂತೆಯರೂ ತಮ್ಮ

ವೃತ್ತಿಗಳಲ್ಲಿ ಸ್ವತಂತ್ರವಾಗಿ ತೊಡಗಿ ಬೆಳೆಯುವ ಅವಕಾಶಗಳನ್ನು ನಿರಾಕರಿಸಿ ಯ್ಯಾವುದೋ ನರ್ಸಿಂಗ್ ಹೋಂನಲ್ಲಿ, ಯಾರೋ ಲಾಯರಲ್ಲಿ ಸಹಾಯಕರೆನಿಸಿ ದುಡಿಯುವುದನ್ನು ಆಯ್ದು ಕೊಳ್ಳುತ್ತಾರೆ. ಪ್ರತಿಭೆಯ ಪ್ರಕಾಶನಕ್ಕೆ ಅವಕಾಶವಿಲ್ಲ, ಸಂಪಾದನೆಯೂ ಅತ್ಯಲ್ಪ. ಆದರೇನು? ಮನೆಯ ಕಡೆ ನಿಗಾ ವಹಿಸಬೇಕೆಂದರೆ, ಇದು ಅನಿವಾರ್ಯ. ಉದ್ಯೋಗ ಕ್ಷೇತ್ರವು ನಿರೀಕ್ಷಿಸುವಷ್ಟು ವೇಳೆ, ಶ್ರಮ, ತಾಳ್ಮೆಗಳು ಅವಳ ಜೀವಿತದಲ್ಲಿ ಉಳಿದಿರುವುದೇ ಇಲ್ಲ. ಕಲಿತದ್ದು ಮರೆಯದಿರಲಿ ಎಂಬಷ್ಟಕ್ಕೆ ಅವಳು ತೃಪ್ತಿ ಕಾಣಬೇಕು. ಇಂದಿನ ದ್ವಿಪಾತ್ರ ನಿರ್ವಹಣೆಯ ಒತ್ತಡದಲ್ಲಿ ಮಹಿಳೆ ಸಿಲುಕಿ ಹೋಗಿರುವಾಗಲೂ, ತನ್ನ ಕ್ಷೇಮ ಚಿಂತನೆಯನ್ನೇ ಪ್ರಧಾನವಾಗಿ ಪರಿಗಣಿಸಿ ಮನೆಯ ಹೊರಗಿನ ಅವಕಾಶಗಳನ್ನು ಬಾಚಿಕೊಳ್ಳಲು ಹೋಗುತ್ತಿಲ್ಲ. ಮನೆಯ ಒಳಗಿನ ಪಾತ್ರಕ್ಕೆ ಧಕ್ಕೆ ಭಾರದಂತೆ ಏನನ್ನಾದರೂ ಸಾಧಿಸುವ ಸಾಧ್ಯತೆಗಳ ಬಗ್ಗೆ ಚಿಂತಿತಳಾಗಿದ್ದಾಳೆ. ಉದ್ಯೋಗಾವಕಾಶ ಎಂಬುದು ನಮ್ಮ ಮಹಿಳೆಯರ ಪಾಲಿಗೆ ಸದ್ಯಕ್ಕಂತೂ ವ್ಯಕ್ತಿವಿಕಸನದ ಅವಕಾಶಗಳೇನಲ್ಲ. ಪಡೆದ ಪದವಿ, ತರಬೇತಿಗಳನ್ನು ಒಂದಿಷ್ಟು ಬಳಕೆಯಲ್ಲಿ ಉಳಿಸುವುದು, ಸಂಸಾರವು ಆರ್ಥಿಕವಾಗಿ ಸಬಲವಾಗಲು ತನ್ನ ಕಾಣಿಕೆಯನ್ನು ಕೊಡುವುದು ಎಂಬಷ್ಟಕ್ಕೇ ಅವು ಉಳಿದಿವೆ. ಅವಳ ಈ ಸಂದರ್ಭವನ್ನು ಈ ಸಮಾಜವು ಸಹಾನುಭೂತಿಯಿಂದ ಗ್ರಹಿಸಿ ನೆರವಾಗುವ ಬದಲು ಅವಳು ದಡ್ಡಿ, ಅಸಮರ್ಥಳು ಎಂಬಂತೆ ವ್ಯಾಖ್ಯಾನಿಸುತ್ತದೆ. ಕೆಲವೊಮ್ಮೆ ಮನೆಯ ಒಳಗೂ, ಹೊರಗೂ ಒಟ್ಟೊಟ್ಟಿಗೆ ಈ ಆಕ್ಷೇಪಗಳಿಗೆ ಅವಳು ಗುರಿಯಾಗುತ್ತಾಳೆ. ಇನ್ನು ಇವೆಲ್ಲ ಸಂಘರ್ಷಗಳೇ ಬೇಡವೆಂದು ತನ್ನ ಕ್ಷೇತ್ರದಲ್ಲಿನ ಸಾಧನೆ, ತನ್ನ ವೃತ್ತಿಯ ಸಫಲತೆಗಳನ್ನೇ ಮಹಿಳೆಯು ಮುಂದುಮಾಡಿಕೊಂಡರೆ ಮನೆ ಸಂಸಾರ ಮಕ್ಕಳು ಎಂಬ ಸುಖಗಳನ್ನು ತ್ಯಾಗ ಮಾಡಬೇಕಷ್ಟೆ. ಈ ಸಮಾಜ ವ್ಯವಸ್ಥೆ ಎಂದೆಂದೂ ಮಹಿಳೆಯಿಂದ ನಿರೀಕ್ಷಿಸುವುದು ತ್ಯಾಗವನ್ನೇ. ಅತ್ಯಾಧುನಿಕ ಗೃಹೋಪಕರಣಗಳು, ಕಂಪ್ಯೂಟರ್‌ಗಳು, ಹೊಸ ತಂತ್ರಜ್ಞಾನಗಳು ಆಧುನಿಕ ಮಹಿಳೆಯ ದೈನಂದಿನ ಗೋಳಾಟದಲ್ಲಿ ನೆರವು ನೀಡುತ್ತಿವೆ ಎಂಬುದೇನೋ ನಿಜ. ಆದರೂ ಅವಳು ನಿರ್ವಹಿಸಬೇಕಾಗಿರುವ ದ್ವಿ ಪಾತ್ರಗಳ ಮೂಲ ಸಾಮಾಜಿಕ ಆಶಯವೇ ಅವಳ ಮುಂದೆ ನಿಂತಿರುವ ದೊಡ್ಡ ಸವಾಲಾಗಿರುವುದು. ಸಮಾಜವು ಆರೋಗ್ಯಕರವಾಗಿ ಸಂತೃಪ್ತವಾಗಿ ಮುನ್ನಡೆಯುವಲ್ಲಿ ಕುಟುಂಬ ಸಂಸ್ಥೆಯ ಪಾತ್ರವೇ ಅತ್ಯಂತ ಮಹತ್ತರವಾದುದು. ಈ ಸಂಸ್ಥೆಯು ಸದೃಢವಾಗಿ ನಿಲ್ಲಬೇಕೆಂದರೆ ಮಹಿಳೆಯೇ ಮುಖ್ಯ ಕಾರಣ. ಎಂದಿನಿಂದಲೂ ಹೆಣ್ಣೇ ಮನೆಯ ಕೇಂದ್ರ ಶಕ್ತಿಯಾಗಿ ದುಡಿಯುತ್ತಾ ಬಂದಿದ್ದಾಳೆ. ಅವಳು ಆತ್ಮ ವಿಕಸನದ ಹಾದಿಯನ್ನು ಶೋಧಿಸುತ್ತಿರುವಾಗಲೂ ಮೂಲ ಕೇಂದ್ರವನ್ನು ಮರೆಯದೆ ಸಾಗಬೇಕೆಂಬ ಬಗ್ಗೆ ಪ್ರೀತಿಯನ್ನು ಹೊಂದಿದ್ದಾಳೆ. ಇಂದಿನ ಸಮಾಜವು ಅವಳನ್ನು ಕೃತಜ್ಞತೆಯಿಂದ ಕಾಣಬೇಕು ಎಂಬುದಕ್ಕೆ ಇದಕ್ಕಿಂತ ದೊಡ್ಡ ಕಾರಣ ಬೇಕಾಗಿಲ್ಲ. ಅಂಥಾದ್ದರಲ್ಲಿ ಅವಳನ್ನು ಛಿದ್ರಗೊಳಿಸಲು ಹೊಸ ಹೊಸ ಉಪಾಯಗಳನ್ನು ಹುಡುಕುತ್ತಾ ಸಾಗಿರುವ ಈ ಸಮಾಜದ ಎದುರು ಮಹಿಳೆ ಸವಾಲೆಸೆದು ನಿಲ್ಲುವ ಪ್ರತಿಭಟನೆಯ ಮಾದರಿಯಾಗಿ

ಬೆಳೆಯುವುದು ಅನಿವಾರ್ಯವಾಗಿ ಬಿಡಬಹುದು. ಇದನ್ನು ಇನ್ನಾದರೂ ಈ ಸಮಾಜವು ಅರಿತು ಮಹಿಳೆಯನ್ನು ಮನ್ನಿಸಿ ಗೌರವಿಸಬೇಕು. ಪ್ರೀತಿ ಸಹಾನುಭೂತಿಗಳಿಂದ ಅವಳನ್ನು ಕಾಣುವುದು ಅವಳ ವಿಕಸನದ ಹಾದಿಗಳಿಗೆ ತೊಡಕಾಗದೆ ನೆರವಾಗುವುದು ಸಮಾಜದ ಏಳಿಗೆಯ ಅಗತ್ಯಗಳಾಗಿವೆ.

ಹಿಂದೂ ಮೇಲ್ಜಾತಿಯ, ನಗರ ಮಧ್ಯಮವರ್ಗದ ಮಹಿಳೆಯರ ಪ್ರಸ್ತಾಪವೇ ಇಲ್ಲಿನ ಚರ್ಚೆಯುದ್ದಕ್ಕೂ ಪ್ರಧಾನವಾಗಿ ಬಂದಿದೆ. ಈ ಮಾದರಿ ಕೇವಲ ಅಧ್ಯಯನದ ಅನುಕೂಲಕ್ಕಾಗಿ ಬಳಸಿದ್ದು. ಇದನ್ನು ಅನ್ವಯಿಸಿ ಚರ್ಚೆಯ ವ್ಯಾಪ್ತಿಯನ್ನು ವಿಸ್ತರಿಸುವ ಅಪಾರ ಸಾಧ್ಯತೆ ಈ ವಸ್ತುವಿನೊಳಗೆ ಇದ್ದೇ ಇದೆ. ಭಾರತೀಯ ಮಹಿಳೆಯ ಸ್ಥಿತಿಗತಿಗಳಲ್ಲಿ ಆಗುತ್ತಿರುವ ಬದಲಾವಣೆಗಳ ಸ್ವರೂಪವನ್ನು ಗ್ರಾಮಗಳಿಂದ ನಗರಗಳಿಗೆ ವಲಸೆ, ರಾಜಕೀಯದಲ್ಲಿ ಮಹಿಳೆಯರ ಪ್ರವೇಶ, ಶಿಕ್ಷಣಾವಕಾಶ, ಸುಧಾರಣಾವಾದಿಗಳ ಚಟುವಟಿಕೆಗಳು, ವರದಕ್ಷಿಣೆಯ ಅವತಾರಗಳು-ಇಂಥ ಸಂಗತಿಗಳ ಹಿನ್ನೆಲೆಯಲ್ಲಿ ಗ್ರಹಿಸಬಹುದು. ಎಲ್ಲ ಜಾತಿ ವರ್ಗಗಳ ಮಹಿಳೆಯರೂ ಈ ಬದಲಾವಣೆಗಳಿಗೆ ಕ್ರಮೇಣವಾಗಿಯಾದರೂ ವ್ಯಾಪಿಸಿಕೊಳ್ಳುತ್ತಾ, ಒಗ್ಗಿಕೊಳ್ಳುತ್ತಾ ಸಾಗಿದ್ದಾರೆ ಎಂಬುದು ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿಯಾಗಿದೆ.



"ಪ್ರತಿಯೊಬ್ಬ ಹುಡುಗಿಯು ವಿವಾಹ ಮಾಡಿಕೊಳ್ಳುವುದಕ್ಕಾಗಿಯೇ ಜನಿಸಿಲ್ಲ. ಕೇವಲ ಒಬ್ಬ ಪುರುಷನ ಸೇವೆ ಮಾಡುವುದಕ್ಕೆ ಬದಲಾಗಿ ಲೋಕ ಸೇವೆಯಲ್ಲಿ ತೊಡಗಿರುವ ಎಷ್ಟೋ ಮಂದಿ ಹುಡುಗಿಯರನ್ನು ನಾನಿಂದು ತೋರಿಸಬಲ್ಲೆ"

(ಮೋ. ಕ. ಗಾಂಧಿ)

# ಮಹಿಳಾ ಮೀಸಲಾತಿ : ಚರ್ಚೆಯ ಉದ್ದೇಶ

ಈ ಅಂಕಣ ಮಹಿಳೆಯರ ಸ್ಥಿತಿಗತಿಗಳ ಏರುಪೇರುಗಳಿಗೆ ತೀವ್ರ ಕಾರಣವಾಗಿ ಒದಗಿ ನಿಂತಿರುವ ಪ್ರಸ್ತುತದ ಸಮಸ್ಯೆಯೊಂದನ್ನು ಕುರಿತ ಚರ್ಚೆಗೆ ಮೀಸಲಾಗಿದೆ. ಈ ಸಂಚಿಕೆಯಲ್ಲಿ 'ಮಹಿಳಾ ಮೀಸಲಾತಿ ಮಸೂದೆ'ಯ ಬಗೆಗೆ ಅಂತಹುದೊಂದು ಚರ್ಚೆಯನ್ನು ವಿವಿಧ ಆಯಾಮಗಳಲ್ಲಿ ಗ್ರಹಿಸಲು ಯೋಜಿಸಲಾಗಿದೆ. ಪತ್ರಿಕೆ, ಕಾನೂನು, ವಿಶ್ವವಿದ್ಯಾಲಯ ಮೊದಲಾದ ಕ್ಷೇತ್ರಗಳಲ್ಲಿನ ವಿದ್ವಾಂಸರಿಂದ ಈ ಬಗ್ಗೆ ಅಭಿಪ್ರಾಯಗಳನ್ನು ಪಡೆದು ಕ್ರೋಢೀಕರಿಸಲಾಗಿದೆ. ಪತ್ರಿಕೆಯು ಮುದ್ರಣಕ್ಕೆ ಅಣಿಯಾಗುತ್ತಿರುವ ಈ ಸಂದರ್ಭದಲ್ಲಿ ಮಹಿಳಾ ಮೀಸಲಾತಿ ಮಸೂದೆ ತೀವ್ರಗೊಂದಲ, ಕೋಲಾಹಲಗಳ ನಡುವೆ ಲೋಕಸಭೆಯಲ್ಲಿ ಮಂಡನೆಗೊಂಡದ್ದಂತೂ ಆಗಿದೆ. ಇಷ್ಟಕ್ಕೇ ಏನೂ ಆದಂತಾಗಲಿಲ್ಲ. ಈ ಬಿಲ್ ಪಾಸ್ ಆಗದಂತೆ ಪ್ರಚಂಡ ಪ್ರಯತ್ನಗಳು ನಡೆದೇ ನಡೆಯುತ್ತವೆ. ಕೆಲವು ನೇರವಾದ ಅಮಾನವೀಯ ಧಾಳಿಗಳಾದರೆ, ಮತ್ತೆ ಕೆಲವು ಮೋಸದ ಬಲೆಗಳಾಗಿ ವರ್ತಿಸುವ ಬೌದ್ಧಿಕ ಅನುನಯದ ಶೋಷಣೆಗಳು. ಈ ಮಸೂದೆಯ ಹಣೆಬರಹ ಏನಾಗಲಿದೆ ಎಂಬುದು ಸದ್ಯಕ್ಕೆ ಪ್ರಶ್ನೆಯಾಗಿರಬಹುದು. ಆದರೂ ಇಂದಿನ ಮಹಿಳೆ ತನ್ನ ಹಕ್ಕುಗಳನ್ನು ಗಳಿಸಿ ಉಳಿಸಿಕೊಳ್ಳುವ ಬಗ್ಗೆ ಎಚ್ಚೆತ್ತುಕೊಂಡಿರುವುದಕ್ಕೆ, ಅದರ ಸಾಧನೆಗಾಗಿ ಧೈರ್ಯದಿಂದ ಕ್ರಿಯಾಶೀಲಳಾಗಬಲ್ಲಳೆಂಬುದಕ್ಕೆ ಈ ಪ್ರಸಂಗ ಸಾಂಕೇತಿಕ ನಿದರ್ಶನವೆನಿಸಿದೆ. ರಾಜಕಾರಣದ ಈ ಸಂದರ್ಭ ಮಹಿಳೆಯ ಅಸ್ತಿತ್ವವನ್ನು ಉಳಿದ ಸಾಮಾಜಿಕ ನೆಲೆಗಳಲ್ಲೂ ಗುರುತಿಸಿಕೊಡುವ ಮಾದರಿಯಾಗಿ ಒದಗಬೇಕು.

ಈ ಹಿನ್ನೆಲೆಯಲ್ಲಿ ಮಹಿಳಾ ಮೀಸಲಾತಿಯನ್ನು ಕುರಿತ ಚರ್ಚೆಗಳನ್ನು ಇಲ್ಲಿ ಮಂಡಿಸಲಾಗಿದೆ. ಮಹಿಳೆಯರ ಹಕ್ಕುಬಾಧ್ಯತೆಗಳ ಪ್ರಶ್ನೆಗೆ ಸಮಾಜವು ಈ ಪ್ರಸಂಗದಲ್ಲಿ ಪ್ರತಿಕ್ರಿಯಿಸಿರುವ ಸ್ವರೂಪವನ್ನು ಗ್ರಹಿಸುವುದು ಇಲ್ಲಿನ ಪ್ರಧಾನ ಉದ್ದೇಶವಾಗಿದೆ.

(ಸಂ.)

# ಮಹಿಳಾ ರಾಜಕೀಯ ಮೀಸಲಾತಿ –ಸಾಧಕ, ಬಾಧಕಗಳು

ಡಾ. ಹೇಮಲತಾ ಮಹಿಷಿ

ಭಾರತ ಸಂವಿಧಾನ ಭಾರತದ ಎಲ್ಲಾ ಪ್ರಜೆಗಳಿಗೆ ಸಮಾನ ಹಕ್ಕುಗಳನ್ನು ನೀಡುತ್ತದೆ, ಸಮಾನ ರಕ್ಷಣೆಯನ್ನು ಕೊಡುತ್ತದೆ. ಜಾತಿ, ಧರ್ಮ, ವರ್ಣ, ಜನಾಂಗ, ಪ್ರದೇಶ, ಲಿಂಗಭೇದದ ಆಧಾರದ ಮೇಲೆ ಯಾರ ವಿರುದ್ಧವೂ ತಾರತಮ್ಯ ಧೋರಣೆಯನ್ನು ತೋರಿಸಬಾರದೆಂದು ತಿಳಿಸುತ್ತದೆ. ಆದರೆ, ಮಕ್ಕಳಿಗೆ, ಮಹಿಳೆಯರಿಗೆ ವಿಶೇಷ ಕಾನೂನುಗಳನ್ನು ಮಾಡಬಹುದೆಂದು, ಸಾಮಾಜಿಕವಾಗಿ-ಶೈಕ್ಷಣಿಕವಾಗಿ ಹಿಂದುಳಿದಿರುವವರ ಪ್ರಗತಿಗಾಗಿ ಕ್ರಮಕೈಗೊಳ್ಳಬಹುದೆಂದು ಕಲ್ಪಿಸುತ್ತದೆ. ಅಸಮ ಪರಿಸ್ಥಿತಿಯಲ್ಲಿರುವವರಿಗೆ ಸಮಾನ ಹಕ್ಕುಗಳನ್ನು ಅವಕಾಶಗಳನ್ನು ಕೊಟ್ಟರೂ, ಅವರಿಗೆ ತಾವಿರುವ ಅಸಹಾಯಕ ಪರಿಸ್ಥಿತಿಯಿಂದಾಗಿ ಅವುಗಳನ್ನು ಉಪಯೋಗಿಸಿಕೊಳ್ಳಲು ಆಗುವುದಿಲ್ಲ ಎನ್ನುವುದು ಎಲ್ಲರೂ ತಿಳಿದಿರುವ ಸತ್ಯ. ಈ ಅಸಮತೋಲನವನ್ನು ಸರಿಪಡಿಸಲು ಸೃಷ್ಟಿಸಿರುವುದೇ "ಮೀಸಲಾತಿ". ತಾವಿರುವ ಅಸಹಾಯಕ ಪರಿಸ್ಥಿತಿ, ಪ್ರತಿಕೂಲ ವಾತಾವರಣದಿಂದಾಗಿ ಮುಕ್ತ ಸ್ಪರ್ಧೆಯಲ್ಲಿ ಭಾಗವಹಿಸಲು ಸಾಧ್ಯವಾಗದ ಕೆಲವೊಂದು ನಿರ್ದಿಷ್ಟ ಗುಂಪುಗಳಿಗೆ ಮೀಸಲಾತಿಯ ಮೂಲಕ ಕನಿಷ್ಠ ಅವಕಾಶವನ್ನಾದರೂ ದಕ್ಕಿಸಿಕೊಳ್ಳಲು ಕಾನೂನಿನ ಮೂಲಕ ಕಲ್ಪಿಸಬೇಕಾಗುತ್ತದೆ.

ಈ ತತ್ತ್ವವನ್ನು ಆಧರಿಸಿ ನಮ್ಮ ಸಂವಿಧಾನ ಪರಿಶಿಷ್ಟ ಜಾತಿ-ಪಂಗಡದವರಿಗೆ ರಾಜಕೀಯ, ಔದ್ಯೋಗಿಕ, ಶೈಕ್ಷಣಿಕ ಮೀಸಲಾತಿಯನ್ನು ಕಲ್ಪಿಸಿದೆ. ಸರ್ಕಾರಿ ಉದ್ಯೋಗಗಳಲ್ಲಿ ಹಿಂದುಳಿದ ವರ್ಗದ ಜನರಿಗೆ ಮೀಸಲಾತಿಯನ್ನು ಸರ್ಕಾರಗಳು ಜಾರಿಗೆ ತಂದಿವೆ. ನಮ್ಮ ರಾಜ್ಯದಲ್ಲಿ ಸರ್ಕಾರಿ ಉದ್ಯೋಗಗಳಲ್ಲಿ ಮಹಿಳೆಯರಿಗೆ ೩೦% ಮೀಸಲಾತಿಯನ್ನು ನೀಡಲಾಗಿದೆ.

ರಾಜಕೀಯ ಕ್ಷೇತ್ರ ಮಹಿಳೆಯರಿಗೆ ಹೊಸದೇನೂ ಅಲ್ಲ. ಗಾಂಧೀಜಿಯವರ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯಲ್ಲಿ ಸಹಸ್ರಾರು ಮಹಿಳೆಯರು ಭಾಗವಹಿಸಿದ್ದರು. ದೇಶದ ಸ್ವಾತಂತ್ರ್ಯೋತ್ತರ ಮೊದಲ ಸಂಸತ್ತಿನಲ್ಲಿ ಅನೇಕ ಮಹಿಳಾ ಸದಸ್ಯೆಯರಿದ್ದರು, ಮಂತ್ರಿಗಳಾಗಿದ್ದರು. ರಾಜ್ಯ ಶಾಸನಸಭೆಗಳಲ್ಲೂ ಮಹಿಳಾ ಸದಸ್ಯೆಯರು ಕಾಣಿಸಿಕೊಂಡರು. ಅನೇಕ ಮಹಿಳೆಯರು ಉತ್ತಮ 'ಪಾರ್ಲಿಮೆಂಟೇರಿಯನ್ಸ್' ಆಗಿದ್ದರು. ದಕ್ಷ-ಸಮರ್ಥ ಮಂತ್ರಿಗಳೂ ಆಗಿದ್ದರು. ಆದರೆ ಮುಂದೆ ಪ್ರತಿ ಚುನಾವಣೆಗಳಲ್ಲೂ ಇಂತಹ ಮಹಿಳಾ ಶಾಸಕಿಯರ ಸಂಖ್ಯೆ

ಕಡಿಮೆಯಾಗುತ್ತಾ ಬಂದಿತು. 'ಪವರ್ ಪಾಲಿಟಿಕ್ಸ್' ನಲ್ಲಿ ಗೆಲ್ಲುವ ಕುದುರೆಗೆ ಮಹತ್ವ ಬರತೊಡಗಿದಾಗ ಮಹಿಳಾ ಅಬ್ಯರ್ಥಿಗಳನ್ನು ಮೂಲೆಗೊತ್ತಲಾಯಿತು. ಎಲ್ಲಾ ರಾಜಕೀಯ ಪಕ್ಷಗಳಲ್ಲಿ ಮಹಿಳಾ ವಿಭಾಗವಿದ್ದರೂ ಪಕ್ಷದ ಆಗು-ಹೋಗುಗಳಲ್ಲಿ ಅವರ ಧ್ವನಿಗೇನೂ ಬೆಲೆ ಇರುತ್ತಿರಲಿಲ್ಲ. ಸ್ವಂತ ವ್ಯಕ್ತಿತ್ವ, ಸಾಮರ್ಥ್ಯವಿರುವ ಮಹಿಳೆಯರಿಗಿಂತ ಪ್ರಭಾವಶಾಲಿ ಪುರುಷ ರಾಜಕಾರಣಿಗಳ ಮಡದಿಯರು, ಮಗಳು, ಸೊಸೆಯಂದಿರಿಗೆ ಮನ್ನಣೆ ದೊರಕಿತು. ಅದೂ ಅವರು ಮರಣ ಹೊಂದಿದಾಗ ಅವರ ಬಗ್ಗೆ ಸಹಾನುಭೂತಿ ಮತ ದೊರಕುವ ಕಾರಣದಿಂದಾಗಿ ಅಥವಾ ಪುರುಷ ರಾಜಕಾರಣಿಗಳು ಕಾರಣಾಂತರಗಳಿಂದ ಚುನಾವಣೆಗೆ ನಿಲ್ಲಲು ಸಾಧ್ಯವಾಗದಾಗ ಮಾತ್ರ ಅವರ ಮನೆಯ ಮಹಿಳೆಯರಿಗೆ ಈ ಅವಕಾಶ. ಅವರೇನಿದ್ದರೂ ತಮ್ಮ-ತಮ್ಮ ಮನೆಯ ಪುರುಷ ರಾಜಕಾರಣಿಗಳಿಗಾಗಿ ಆ ಕ್ಷೇತ್ರವನ್ನು ಕಾಯುವ ಕೆಲಸ ಮಾಡಬೇಕು. ಪುನಃ ಸೂಕ್ತ ಸಮಯದಲ್ಲಿ ಅದನ್ನು ಅವರಿಗೇ ಒಪ್ಪಿಸಬೇಕು.

ಇತ್ತೀಚೆಗೆ ಕ್ರಿಮಿನಲ್‌ಗಳಿಗೂ ರಾಜಕೀಯಕ್ಕೂ ನಂಟು ಬೆಸೆಯಲು ಆರಂಭವಾದಾಗ ಇಂತಹ ರಾಜಕೀಯವನ್ನು ಮಾಡಲಾಗದ ಮಹಿಳೆಯರು ಸಹಜವಾಗಿಯೇ ರಾಜಕೀಯದಿಂದ ದೂರ ಉಳಿಯಲಾರಂಭಿಸಿದರು. ಪಕ್ಷದ ಚಟುವಟಿಕೆಗಳಲ್ಲಿ ಅವರಿಗೆ ಸ್ಥಾನ ಲಭಿಸದೇ ಹೋಯಿತು. ಚುನಾವಣೆಗಳಲ್ಲಿ ಏನೆಲ್ಲವನ್ನು ಮಾಡಿ ಗೆಲ್ಲುವುದೇ ಒಂದು ಮುಖ್ಯ ಗುರಿಯಾದಾಗ ಎಲ್ಲಾ ರಾಜಕೀಯ ಪಕ್ಷಗಳು ಮಹಿಳಾ ಅಬ್ಯರ್ಥಿಗಳನ್ನು ಕಡೆಗಣಿಸಿದರು. ಗೆಲ್ಲುವ ಭರವಸೆ ಇಲ್ಲದ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ಧಾರಾಳವಾಗಿ ಪಕ್ಷಗಳ ಟಿಕೆಟ್ ಸಿಗುತ್ತದೆ ಎನ್ನುವುದು ಬೇರೆ ಮಾತು. ಹಾಗಾಗಿ ಇಂದು ರಾಜ್ಯನ ಶಾಸನ ಸಭೆಗಳಲ್ಲಿ, ಸಂಸತ್ತಿನಲ್ಲಿ ಮಹಿಳಾ ಸದಸ್ಯರ ಸಂಖ್ಯೆ ಬಹಳ ಕಡಿಮೆ ಇದೆ. ದೇಶದ ಒಟ್ಟು ಜನಸಂಖ್ಯೆಯಲ್ಲಿ ಮಹಿಳೆಯರ ಪಾಲನ್ನು ನೋಡಿದಾಗ, ಮಹಿಳಾ ಮತದಾರರ ಸಂಖ್ಯೆಯನ್ನು ನೋಡಿದಾಗ ಇದು ಮಹಿಳೆಯರ ಬಗ್ಗೆ ತೋರಿಸುತ್ತಿರುವ ಅನಾದರ, ನಿರ್ಲಕ್ಷ್ಯ, ತಾರತಮ್ಯ ಧೋರಣೆಯನ್ನು ಎತ್ತಿ ತೋರಿಸುತ್ತದೆ.

ಧರ್ಮದ ಆಧಾರದ ಮೇಲೆ, ಜಾತೀಯತೆಯ ಆಧಾರದ ಮೇಲೆ ನಮ್ಮ ರಾಜಕೀಯ ಪಕ್ಷಗಳು ಚುನಾವಣೆಗಳನ್ನು ಎದುರಿಸುತ್ತಾ ಬಂದಿವೆ. ರಾಜಕೀಯ ಪಕ್ಷಗಳ ನಿಲುವು, ಚುನಾವಣಾ ಪ್ರಣಾಳಿಕೆ, ಅಭ್ಯರ್ಥಿಗಳ ಆಯ್ಕೆ, ಚುನಾವಣಾ ತಂತ್ರ ಎಲ್ಲವೂ ಇವುಗಳನ್ನೇ ಆಧರಿಸುತ್ತಾ ಬಂದಿವೆ. ಆದರೆ, ೮೦ನೇ ದಶಕದ ವೇಳೆಗೆ ಮಹಿಳಾ ಜಾಗೃತಿ ಮೂಡ ತೊಡಗಿದಾಗ, ಸ್ತ್ರೀಪರ ಸಂಘಟನೆಗಳು ಪ್ರಬಲವಾಗತೊಡಗಿದಾಗ, ಮಹಿಳೆಯರಿಗೆ ಸಂಬಂಧಿಸಿದ ವಿಷಯುಗಳು ವಿಶ್ವ ಹಾಗೂ ರಾಷ್ಟ್ರೀಯ ಮಟ್ಟದಲ್ಲಿ ಪ್ರಾಮುಖ್ಯತೆ ಪಡೆಯತೊಡಗಿದಾಗ ರಾಜಕೀಯ ಪಕ್ಷಗಳು ಸ್ವಲ್ಪಮಟ್ಟಿಗೆ ಮಹಿಳೆಯರ ವಿಷಯದತ್ತ ಆಸಕ್ತಿ ತೋರತೊಡಗಿದವು. ೯೦ನೇ ದಶಕದ ಆರಂಭದಲ್ಲಿ ಮಹಿಳೆಯರನ್ನು 'ಓಟ್ ಬ್ಯಾಂಕ್' ಆಗಿ ಪರಿವರ್ತಿಸಬಹುದೆನ್ನುವ ಸುಳಿವು ಕಾಣಿಸಿತು. ಹಾಗಾಗಿ ೧೯೯೨ರಲ್ಲಿ ೭೩ ಹಾಗೂ ೭೪ನೇ ತಿದ್ದುಪಡಿಗಳನ್ನು ಮಾಡಿ ಭಾರತ ಸಂವಿಧಾನಕ್ಕೆ ಭಾಗ-೯ ಮತ್ತು ಭಾಗ-೯ ಎ ಸೇರಿಸಲಾಯಿತು. ಈ ಭಾಗಗಳಲ್ಲಿರುವ ಅನುಚ್ಛೇದದ ಮೂಲಕ

ಪಂಚಾಯತ್, ನಗರಸಭೆ ಇತ್ಯಾದಿ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ೧/೩ ಸ್ಥಾನಗಳನ್ನು ಮೀಸಲಿಡಲಾಯಿತು. ಸದಸ್ಯತ್ವದಲ್ಲಲ್ಲದೇ ಈ ಸ್ಥಳೀಯ ಸಂಸ್ಥೆಗಳ ಅಧ್ಯಕ್ಷಸ್ಥಾನಗಳಲ್ಲೂ ಮಹಿಳೆಯರಿಗೆ ೧/೩ ಸ್ಥಳಗಳನ್ನು ಮೀಸಲಾಗಿಡಲಾಯಿತು. ಇಂದು ರಾಷ್ಟ್ರದಾದ್ಯಂತ ಈ ಸಂವಿಧಾನ ತಿದ್ದುಪಡಿಗಳ ಅನುಸಾರ ಸಹಸ್ರಾರು ಮಹಿಳೆಯರು ಸ್ಥಳೀಯ ಸಂಸ್ಥೆಗಳಲ್ಲಿ ಸದಸ್ಯೆಯರಾಗಿ, ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇದಕ್ಕೂ ಮೊದಲೇ ಸ್ಥಳೀಯ ಸಂಸ್ಥೆಗಳಲ್ಲಿ ಇಂತಹ ಮೀಸಲಾತಿಗಳನ್ನು ಕರ್ನಾಟಕ ರಾಜ್ಯ ತನ್ನದೇ ಅಧಿನಿಯಮದ ಮೂಲಕ ಜಾರಿಗೆ ತಂದಿತ್ತು. ಆದರೆ, ಸ್ಥಳೀಯ ಸಂಸ್ಥೆಗಳ ಚುನಾವಣೆಗಳು ರಾಜಕೀಯ ಪಕ್ಷಗಳ ಆಧಾರದ ಮೇಲೆ ನಡೆಯುವುದಿಲ್ಲ ಎನ್ನುವುದು ಗಮನಿಸಬೇಕಾದ ಅಂಶ. ಈ ಸಂವಿಧಾನ ತಿದ್ದುಪಡಿಗಳಲ್ಲಿ ಪರಿಶಿಷ್ಟ ಜಾತಿ- ಬುಡಕಟ್ಟುಗಳಿಗೂ ಸ್ಥಳೀಯ ಸಂಸ್ಥೆಗಳಲ್ಲಿ ಮೀಸಲಾತಿ ಕಲ್ಪಿಸಲಾಗಿದೆ. ಹಾಗೆಯೇ, ಯಾವುದೇ ರಾಜ್ಯದ ಶಾಸನ ಸಭೆಯು ಹಿಂದುಳಿದ ವರ್ಗದ ಪ್ರಜೆಗಳಿಗೆ ಮೀಸಲಾತಿ ಕಲ್ಪಿಸಬಯಸಿದಲ್ಲಿ ಅದಕ್ಕೂ ಅವಕಾಶವಿದೆ. ಈ ಸಂವಿಧಾನ ತಿದ್ದುಪಡಿಯ ಅನುಸಾರ ಕರ್ನಾಟಕ ರಾಜ್ಯವು ೧೯೯೩ರ ಕರ್ನಾಟಕ ಪಂಚಾಯತ್ ರಾಜ್ಯ ಅಧಿನಿಯಮವನ್ನು ಜಾರಿಗೆ ತಂದಿದೆ. ಇದರಲ್ಲಿ, ಸ್ಥಳೀಯ ಸಂಸ್ಥೆಗಳಲ್ಲಿ ಸಂವಿಧಾನದ ನಿರ್ದೇಶನದಂತೆ ಪರಿಶಿಷ್ಟ ಜಾತಿ- ಬುಡಕಟ್ಟುಗಳಿಗೆ ಮೀಸಲಾತಿ ಕೊಡುವುದರೊಂದಿಗೆ ಹಿಂದುಳಿದ ವರ್ಗದವರಿಗೂ ಮೀಸಲಾತಿ ಕಲ್ಪಿಸಲಾಗಿದೆ. ಪರಿಶಿಷ್ಟ ಜಾತಿಗೆ ಹದಿನೈದು ಪ್ರತಿಶತಕ್ಕೆ ಕಡಿಮೆ ಇಲ್ಲದ, ಪರಿಶಿಷ್ಟ ಬುಡಕಟ್ಟಿಗೆ ಮೂರು ಪ್ರತಿಶತಕ್ಕೆ ಕಡಿಮೆ ಇಲ್ಲದ ಸ್ಥಾನಗಳನ್ನು, ಹಿಂದುಳಿದ ವರ್ಗಗಳಿಗೆ ೧/೩ ಭಾಗಕ್ಕೆ ಕಡಿಮೆ ಇಲ್ಲದ (೩೩.೧/೩%) ಸ್ಥಾನಗಳನ್ನು ಮೀಸಲಾಗಿಡಲಾಗಿದೆ. ಉಳಿದಿದ್ದು ಎಂದರೆ ೪೮ ೨/೩% ಮೀಸಲಾತಿ ಇಲ್ಲದ ಮುಕ್ತ ಸ್ಥಾನಗಳು ಈ ನಾಲ್ಕು ವಿಭಾಗದ, ಮೀಸಲಾತಿ ಇರುವ-ಇಲ್ಲದ ಸ್ಥಾನಗಳಲ್ಲಿ ಮಹಿಳೆಯರಿಗೆ ೧/೩% ಮೀಸಲಾತಿಯನ್ನು ತೆಗೆದಿಡಬೇಕಾಗುತ್ತದೆ. ಈ ಮೀಸಲಾತಿ ಕ್ಷೇತ್ರಗಳು ಪ್ರತಿ ಚುನಾವಣಾ ಸಮಯದಲ್ಲಿ ಬದಲಾಗಬೇಕೆಂಬ ನಿಯಮವಿದೆ. ಆದರೆ, ಈವರೆಗಿನ ಸಂಸತ್ತಿನ ಚುನಾವಣಾ ಅನುಭವದ ಹಿನ್ನೆಲೆಯಲ್ಲಿ ಹೇಳುವುದಾದರೆ, ಒಮ್ಮೆ ಮೀಸಲಾತಿ ಕ್ಷೇತ್ರವಾಗಿ ಘೋಷಣೆಗೊಂಡಿದ್ದು, ಪಟ್ಟಭದ್ರ ಹಿತಾಸಕ್ತಿಗೆ ದಾರಿ ಮಾಡಿಕೊಟ್ಟು, ಕೊನೆಯವರೆಗೂ ಮೀಸಲಾತಿ ಕ್ಷೇತ್ರವಾಗಿಯೇ ಉಳಿದಿರುತ್ತದೆ. ಉದಾಹರಣೆಗೆ ನಮ್ಮ ರಾಜ್ಯದ ಚಿಕ್ಕೋಡಿ ಮೀಸಲು ಕ್ಷೇತ್ರ. ಈ ಅಧಿನಿಮಯದ ಅನುಸಾರ ಪರಿಶಿಷ್ಠ ಜಾತಿ-ಪಂಗಡದವರು, ಹಿಂದುಳಿದ ವರ್ಗಗಳ ಜನರು, ಮಹಿಳೆಯರು ಮೀಸಲು ಸ್ಥಾನಗಳಲ್ಲಿ ಅಲ್ಲದೇ ಸಾಮಾನ್ಯಸ್ಥಾನ (General Seats) ಗಳಿಗೂ ಚುನಾವಣೆಯಲ್ಲಿ ಸ್ಪರ್ಧಿಸಬಹುದು.

ಇದಲ್ಲದೇ, ಇದೇ ರೀತಿಯ ಮೀಸಲಾತಿ ಅಧ್ಯಕ್ಷ-ಉಪಾಧ್ಯಕ್ಷ ಚುನಾವಣೆಗೂ ಅನ್ವಯಿಸುತ್ತದೆ. ರಾಜ್ಯದ ಒಟ್ಟು ಅಧ್ಯಕ್ಷ ಉಪಾಧ್ಯಕ್ಷಸ್ಥಾನಗಳಲ್ಲಿ ಪರಿಶಿಷ್ಟ ಜಾತಿಗೆ ಕನಿಷ್ಠ ೧೫%, ಪರಿಶಿಷ್ಟ ಪಂಗಡಕ್ಕೆ ಕನಿಷ್ಠ ೩%, ಹಿಂದುಳಿದ ವರ್ಗಗಳಿಗೆ ೧/೩ ಭಾಗ,

ಉಳಿದಿದ್ದು ಸಾಮಾನ್ಯ ಸ್ಥಾನಗಳು -ಇವೆಲ್ಲ ವಿಭಾಗಗಳಲ್ಲಿ ಮಹಿಳೆಯರಿಗೆ ೧/೩ ಭಾಗ ಮೀಸಲಾತಿ ಇರುವಂತೆ ವ್ಯವಸ್ಥೆ ಮಾಡಲಾಗಿದೆ.

೧೯೯೨ರ ಸಂವಿಧಾನ ತಿದ್ದುಪಡಿಯಂತೆ ಸಂಪೂರ್ಣ ಭಾರತದಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ಕಲ್ಪಿಸಿದ ನಂತರ, ಅದರ ಸ್ವಾಭಾವಿಕ ಮುಂದುವರಿಕೆಯಾಗಿ ರಾಜ್ಯ ಶಾಸನಸಭೆ, ಲೋಕಸಭೆಯಲ್ಲಿ ಅವರಿಗೆ ಮೀಸಲಾತಿ ಕಲ್ಪಿಸಿಕೊಡುವುದರತ್ತ ರಾಜಕೀಯ ಪಕ್ಷಗಳ ಗಮನ ಹರಿಯಿತು, ಮಹಿಳೆಯರ ಒತ್ತಾಯವೂ ಅದಕ್ಕೆ ಸೇರಿತು. ಹಾಗಾಗಿ ಹಿಂದಿನ ಲೋಕಸಭಾ ಚುನಾವಣೆಯಲ್ಲಿಯೇ ಎಲ್ಲಾ ರಾಜಕೀಯ ಪಕ್ಷಗಳು ಶಾಸನಸಭೆ-ಲೋಕಸಭೆಯಲ್ಲಿ ಮಹಿಳಾ ಮೀಸಲಾತಿ ಬಗ್ಗೆ ಆಶ್ವಾಸನೆ ನೀಡಿದವು.ಅಧಿಕಾರಕ್ಕೆ ಬಂದ ಕೂಡಲೇ ಈ ಬಗ್ಗೆ ಮಸೂದೆ ಮಂಡಿಸುವುದಾಗಿ ಭರವಸೆ ನೀಡಿದವು. ಸಂಯುಕ್ತರಂಗ ಸರ್ಕಾರ ಅಧಿಕಾರಕ್ಕೆ ಬಂದಿತು ಮಸೂದೆಯ ಮಂಡನೆಯೂ ಆಯಿತು. (೧೯೯೬ ರ ಸಂವಿಧಾನದ ೮೧ ನೇ ತಿದ್ದುಪಡಿ ಮಸೂದೆ). ಚುನಾವಣೆಗೆ ಮುಂಚೆ ಎಷ್ಟೇ ಭರವಸೆ ಕೊಟ್ಟಿದ್ದರೂ ರಾಜಕೀಯ ಪಕ್ಷಗಳು ಈ ಮೇಲ್ಮಟ್ಟದ ಮಹಿಳಾ ಮೀಸಲಾತಿಗೆ ಸಿದ್ಧವಿರಲಿಲ್ಲ. ಹಾಗಾಗಿ ಆದಷ್ಟು ಮುಂದೂಡಲು ಸೆಲೆಕ್ಟ್ ಸಮಿತಿಗೆ ಅದನ್ನು ಉಲ್ಲೇಖ ಮಾಡಲಾಯಿತು. ಸೆಲೆಕ್ಟ್ ಸಮಿತಿಯಲ್ಲಿ ಗೀತಾ ಮುಖರ್ಜಿಯವರಂತಹ ಕಟ್ಟಾ ಬೆಂಬಲಿಗರಿದ್ದರಿಂದಾಗಿ ಈ ತಿದ್ದುಪಡಿ ಮಸೂದೆ ಹೆಚ್ಚಿನ ಕತ್ತರಿಪ್ರಯೋಗಕ್ಕೆ ಒಳಗಾಗದೇ ಉಳಿದರೂ ಪುನಃ ಪ್ರಧಾನಿ ಐ. ಕೆ. ಗುಜ್ರಾಲ್‌ರವರ ಮೂಲಕ ಲೋಕಸಭೆಯಲ್ಲಿ ಮಂಡಿಸಲ್ಪಡುತ್ತಿದ್ದಾಗ ನಡೆದ ಘಟನೆ ಇಂದು ಇತಿಹಾಸದ ಭಾಗವಾಗಿದೆ. ಪ್ರಧಾನಿಯವರ ಪಕ್ಷದವರೇ ಆದ ಶರದ್‌ಯಾದವ್ ಪ್ರಧಾನಿಯವರ ಮೇಲೆ ವಾಗ್ದಾಳಿ ಮಾಡಿ ಮಸೂದೆಯನ್ನು ಮಂಡಿಸದಂತೆ ತಡೆದಿದ್ದು, ಮಹಿಳಾ ಸದಸ್ಯೆಯರ ಪ್ರತಿಭಟನೆ ಅರಣ್ಯರೋಧನವಾದದ್ದು, ಮಹಿಳಾ ಮೀಸಲಾತಿಯ ಬಗ್ಗೆ ವೇದಿಕೆಗಳಲ್ಲಿ ಧಾರಾಳವಾಗಿ ಆಶ್ವಾಸನೆ ಕೊಟ್ಟಿದ್ದ ಪ್ರತಿಪಕ್ಷಗಳು, ಸಂಯುಕ್ತರಂಗದ ಭಾಗವಾದ ಪಕ್ಷಗಳು ದ್ರೌಪದಿಯ ಮಾನಭಂಗವಾಗುತ್ತಿದ್ದ ಕೌರವ ಸಭೆಯಲ್ಲಿ ದಿಗ್ಮೂಢರಾಗಿ ಕುಳಿತ ಪಾಂಡವರಂತೆ, ಕೌರವ-ಪಾಂಡವರ ಹಿರಿಯರಂತೆ ಮೌನವಾಗಿ ಕುಳಿತಿದ್ದು ಇದೇ ಇತಿಹಾಸದ ಭಾಗಗಳು. ಪ್ರಥಮಬಾರಿಗೆ, ಮಹಿಳಾ ಮೀಸಲಾತಿಯಲ್ಲಿ ಹಿಂದುಳಿದ ವರ್ಗದ ಮಹಿಳೆಯರಿಗೆ ಪ್ರತ್ಯೇಕ ಮೀಸಲಾತಿ ನೀಡಬೇಕೆಂಬ ಒತ್ತಾಯ ಕಂಡುಬಂದಿತು.

ಸಂಯುಕ್ತರಂಗ ಸರ್ಕಾರ ಕುಸಿದು ಬಿದ್ದು ದೇಶ ಮತ್ತೊಮ್ಮೆ ಚುನಾವಣೆಯನ್ನು ಎದುರಿಸಿತು, ಬಿ. ಜೆ.ಪಿ. ನೇತೃತ್ವದ ಮಿತ್ರಪಕ್ಷಗಳ ಸರ್ಕಾರ ೧೯೯೮ ರಲ್ಲಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿತು. ಈ ವೇಳೆಗೆ ಮಹಿಳಾ ಸಂಘಟನೆಗಳಲ್ಲೂ ಹಿಂದುಳಿದ ವರ್ಗದ ಮಹಿಳೆಯರಿಗೆ ಪ್ರತ್ಯೇಕ ಮೀಸಲಾತಿ ಕಲ್ಪಿಸುವ ಬೇಡಿಕೆಯ ಬಗ್ಗೆ ಚರ್ಚೆಗಳಾದವು, ಅಭಿಪ್ರಾಯಭೇದ ಕಂಡುಬಂದಿತು. ಆದರೆ, ಈ ಒತ್ತಾಯತಂದು ಮಹಿಳಾ ಮೀಸಲಾತಿ ಮಸೂದೆಯನ್ನು ಅನಿರ್ದಿಷ್ಟಕಾಲ ಮುಂದೆ ಹಾಕುವ ಸಂಚಿದೆಂದು ಭಾವಿಸಿದ ಹೆಚ್ಚಿನ ಮಹಿಳಾ ಸಂಸ್ಥೆಗಳು ಮಸೂದೆಯಲ್ಲಿ ಯಾವುದೇ ತಿದ್ದುಪಡಿಯನ್ನು ವಿರೋಧಿಸಿದವು.

ಬಿಜೆಪಿ. ನೇತೃತ್ವದ ಸರ್ಕಾರ ಮಹಿಳಾ ಮೀಸಲಾತಿ ಮಸೂದೆಯನ್ನು ೧೯೯೮ ರ ಸಂವಿಧಾನದ ೮೪ ನೇ ತಿದ್ದುಪಡಿ ಮಸೂದೆಯಾಗಿ ಲೋಕಸಭೆಯ ಮುಂದೆ ಮಂಡಿಸಲು ಪ್ರಯತ್ನಿಸಿತು. ಪ್ರತಿಪಕ್ಷಗಳಾದ ಕಾಂಗ್ರೆಸ್, ಕಮ್ಯೂನಿಸ್ಟ್ ಪಕ್ಷಗಳು ಮಸೂದೆಗೆ ಬೆಂಬಲ ಕೊಡುವುದಾಗಿ ಘೋಷಿಸಿದ್ದವು. ಮಹಿಳೆಯರೆಲ್ಲ ಮಸೂದೆ ಸುಲಭವಾಗಿ ಅಗ್ನಿ ಪರೀಕ್ಷೆ ದಾಟಿ ಬರುವ ನಿರೀಕ್ಷೆಯಲ್ಲಿ ಉತ್ಸಾಹಿತರಾಗಿದ್ದರು. ಆದರೆ, ಆಗಿದ್ದೇ ಬೇರೆ. ಈಗ ಲೋಕಸಭೆಯಲ್ಲಿ ಶರದ್ ಯಾದವ್ ಇಲ್ಲದಿದ್ದರೂ, ಅವರ ಜಾಗದಲ್ಲಿ ಬೇರೆ ಯಾದವ ದ್ವಯರು-ಲಾಲು ಪ್ರಸಾದ್ ಯಾದವ್ ಮತ್ತು ಮುಲಾಯಂ ಸಿಂಗ್‌ಯಾದವ್ ಬಂದಿದ್ದರು. ಹಿಂದುಳಿದ ವರ್ಗದ ನಾಯಕರಾಗಿ ತಮ್ಮನ್ನು ಪ್ರೊಜೆಕ್ಟ್ ಮಾಡಿಕೊಂಡು, ದೇಶದ ನಾಯಕರಾಗುವ ಕನಸು ಕಾಣುತ್ತಾ, ಹಿಂದುಳಿದ ವರ್ಗದವರನ್ನು ಸಂಘಟಿಸುವ ಪ್ರಯತ್ನದಲ್ಲಿದ್ದರು. ಅವರಿಗೆ ಈ ಮಸೂದೆ ತಮ್ಮ ಪ್ರಯತ್ನದಲ್ಲಿ ವರದಾನವಾಗಿ ಕಂಡಿತು. ಎಲ್ಲಾ ಪಕ್ಷಗಳ ಹಿಂದುಳಿದ ವರ್ಗಗಳ ಸಂಸತ್ ಸದಸ್ಯರನ್ನು ಈ ಬಗ್ಗೆ ಒಟ್ಟುಗೂಡಿಸುವ ತೆರೆಮರೆಯ ಪ್ರಯತ್ನ ನಡೆಯತೊಡಗಿತು. ಮೊದಲು ಮಸೂದೆಗೆ ಪೂರ್ಣ ಬೆಂಬಲದ ಭರವಸೆ ಕೊಟ್ಟಿದ್ದ ಸೋನಿಯಾ ಹಿಂತೆಗೆದರು. ಬಿ. ಜೆ. ಪಿ. ಪಕ್ಷದಲ್ಲಿಯೇ ಒಡಕು ಕಾಣಿಸುವ ಸೂಚನೆ ಕಂಡುಬಂದು, ಆ ಪಕ್ಷವೂ ಡೋಲಾಯಮಾನ ಸ್ಥಿತಿಯನ್ನು ತಲುಪಿತು. ಕಮ್ಯೂನಿಸ್ಟರು ಮಾತ್ರ ಅಚಲರಾಗಿ ಉಳಿದಿದ್ದರು. ಲೋಕಸಭೆಯಲ್ಲಿ ಮಂಡಿಸಬೇಕಾಗಿದ್ದ ಮಸೂದೆಯ ಪ್ರತಿಯನ್ನು ಕೈಯಿಂದ ಕಿತ್ತುಕೊಳ್ಳಲಾಯಿತು. ಸಭೆಯಲ್ಲಿ ವಿಪರೀತ ಗಲಾಟೆಯಾಗಿ ಮಸೂದೆಯ ಮಂಡನೆ ಅನಿರ್ದಿಷ್ಟ ಕಾಲ ಮುಂದೂಡಲ್ಪಟ್ಟಿತು. ಈಗ ಹಿಂದುಳಿದ ವರ್ಗಗಳ ಮಹಿಳೆಯರೊಂದಿಗೆ ಮುಸ್ಲಿಂ ಮಹಿಳೆಯರಿಗೂ ಪ್ರತ್ಯೇಕ ಮೀಸಲಾತಿಯನ್ನು ಒತ್ತಾಯಿಸಲಾಯಿತು. ಮಹಿಳಾ ಮೀಸಲಾತಿ ಪ್ರಶ್ನೆ ಸ್ಪಷ್ಟವಾಗಿಯೇ ಪವರ್ ಪಾಲಿಟಿಕ್ಸ್‌ನ ಬಣ್ಣ-ರೂಪ ತಳೆಯಿತು. ಅಂದಿನ ಅಸ್ಥಿರ ಪರಿಸ್ಥಿತಿಯಲ್ಲಿ ಪುನಃ ಆ ಮಸೂದೆ ಲೋಕಸಭೆಯ ಮುಂದೆ ಮಂಡಿಸಲ್ಪಡುವ ಸೂಚನೆ ಇರಲಿಲ್ಲ.

ಈ ಮಸೂದೆಯಲ್ಲಿ ಇರುವುದಾದರೂ ಏನು? ಇದೊಂದು ಮೇಲೆ ಸರಳವಾಗಿ ಕಾಣುವ ತಿದ್ದುಪಡಿ, ಇದರ ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆಯಲ್ಲಿ, "ಪಂಚಾಯತ್ ಮತ್ತು ನಗರಸಭೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ಕಲ್ಪಿಸಿದ ನಂತರ, ಈಗ ಅದೇ ಮಾದರಿಯಲ್ಲಿ, ಸಂವಿಧಾನವನ್ನು ತಿದ್ದುಪಡಿಮಾಡುವ ಮೂಲಕ, ಲೋಕಸಭೆ ಮತ್ತು ರಾಜ್ಯಗಳ ವಿಧಾನಸಭೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ಕಲ್ಪಿಸಲು ಉದ್ದೇಶಿಸಲಾಗಿದೆ. ಮುಖ್ಯ ರಾಜಕೀಯ ಪಕ್ಷಗಳು ಅಂತಹ ಮಹಿಳಾ ಮೀಸಲಾತಿ ಬಗ್ಗೆ ಒಲವನ್ನು ತೋರಿಸಿವೆ" ಎಂದು ಹೇಳಲಾಗಿದೆ.

ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಈಗಾಗಲೇ ಸಂವಿಧಾನದಲ್ಲಿ ಮೀಸಲಿಟ್ಟಿರುವ ಪಾರ್ಲಿಮೆಂಟ್ ಸ್ಥಾನಗಳಲ್ಲಿ ಈ ಮಸೂದೆ ಕನಿಷ್ಠ ೧/೩ ಭಾಗವನ್ನು ಆ ಜಾತಿ - ಪಂಗಡಗಳಿಗೆ ಸೇರಿದ ಮಹಿಳೆಯರಿಗೆ ಮೀಸಲಿಡಬೇಕೆಂದು ತಿಳಿಸುತ್ತದೆ. ಆದರೆ ಒಂದು ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶದಲ್ಲಿ ಅವರಿಗೆ ಮೀಸಲಾಗಿಟ್ಟಿರುವ ಸ್ಥಾನಗಳು

ಮೂರಕ್ಕೆ ಕಡಿಮೆ ಇದ್ದಲ್ಲಿ ಮಹಿಳಾ ಮೀಸಲಾತಿಗೆ ಅವಕಾಶವಿರುವುದಿಲ್ಲ.

ಒಂದು ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶದಲ್ಲಿರುವ ಲೋಕಸಭೆಯ ಒಟ್ಟು ಸ್ಥಾನಗಳಲ್ಲಿ ಕನಿಷ್ಠ ೧/೩ಸ್ಥಾನಗಳನ್ನು (ಪರಿಶಿಷ್ಟ ಜಾತಿ -ಪಂಗಡದ ಮಹಿಳೆಯರಿಗೆ ಕಾದಿರಿಸಿರುವ ಸ್ಥಾನಗಳನ್ನು ಸೇರಿಸಿಕೊಂಡು), ಮಹಿಳೆಯರಿಗೆ ಮೀಸಲಿಡಬೇಕು. ಈ ಮೀಸಲಾತಿ ಕ್ಷೇತ್ರಗಳು ಬದಲಾಗುತ್ತಿರಬೇಕು. ಯಾವುದೇ ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶದಲ್ಲಿರುವ ಲೋಕಸಭಾ ಸ್ಥಾನಗಳು ಮೂರಕ್ಕೆ ಕಡಿಮೆ ಇದ್ದಲ್ಲಿ ಈ ಮಹಿಳಾ ಮೀಸಲಾತಿ ಅನ್ವಯಿಸುವುದಿಲ್ಲ.

ಇದೇ ರೀತಿಯ, ಪ್ರಮಾಣದ ಮಹಿಳಾ ಮೀಸಲಾತಿ ರಾಜ್ಯ ವಿಧಾನಸಭೆಗೂ ಅನ್ವಯಿಸುತ್ತದೆ.

ಈ ಮಹಿಳಾ ಮೀಸಲಾತಿ ಪ್ರಸ್ತುತ ಲೋಕಸಭೆ, ರಾಜ್ಯವಿಧಾನಸಭೆ ಭಂಗಗೊಂಡ ನಂತರವೇ ಅನ್ವಯಿಸುತ್ತದೆಂದು ಈ ಮಸೂದೆ ತಿಳಿಸುತ್ತದೆ.

ಮಹಿಳಾ ಮಸೂದೆಯ ವಿರೋಧದ ಹಿಂದೆ ಅನೇಕ ಭಯಗಳು ಕಾಡುತ್ತಿರುವುದು ಕಂಡುಬರುತ್ತದೆ. ಬಿ. ಜೆ. ಪಿ. ಪಕ್ಷಕ್ಕೆ ಇದರ ಕ್ರೆಡಿಟ್ ಹೋದರೆ ಮುಂದೆ ಎಲ್ಲಾ ೧/೩ ಮಹಿಳೆಯರು ಬಿ. ಜೆ. ಪಿ. ಪಕ್ಷದ ಮಹಿಳೆಯರೇ ಆಗಿರುತ್ತಾರೆ ಎಂಬುದು ಅದರಲ್ಲಿ ಒಂದು. ಲೋಕಸಭೆ, ವಿಧಾನಸಭೆಯ ಸ್ಥಾನಗಳಲ್ಲಿ ಅಷ್ಟೊಂದು ಸ್ಥಾನಗಳು ಮಹಿಳೆಯರಿಗೆ ಹೋದರೆ, ಅನೇಕ ಹಾಲಿ ಸದಸ್ಯರು ತಮ್ಮ ಮತಕ್ಷೇತ್ರಗಳನ್ನು ಕಳೆದುಕೊಳ್ಳಬೇಕಾಗುತ್ತದೆ, ಅಧಿಕಾರದಲ್ಲಿರುವ ಪಕ್ಷಗಳು ತಮಗೆ ಆಗದ ರಾಜಕೀಯ ವ್ಯಕ್ತಿಗಳು ಚುನಾಯಿತರಾಗದಂತೆ ತಡೆಯಲು ಈ ಮಹಿಳಾ ಮೀಸಲಾತಿಯನ್ನು ಉಪಯೋಗಿಸಿಕೊಂಡು, ಅವರ ಕ್ಷೇತ್ರಗಳನ್ನು ಮೀಸಲಾತಿ ಕ್ಷೇತ್ರಗಳಾಗಿ ಮಾಡಬಹುದೆನ್ನುವುದು ಇನ್ನೊಂದು ಭಯ. ಹಿಂದುಳಿದವರಿಗೆ ಪ್ರತ್ಯೇಕ ಮೀಸಲಾತಿ ಕಲ್ಪಿಸದಿದ್ದಲ್ಲಿ "ಕೂದಲು ಕತ್ತರಿಸಿಕೊಂಡಿರುವ ಮಹಿಳೆಯರು (ಬಾಲ್ ಕಟಿ ಮಹಿಳಾಯೇ)" ಆ ಜಾಗಗಳನ್ನು ಆಕ್ರಮಿಸಿಕೊಳ್ಳುತ್ತಾರೆ ಎನ್ನುವುದು ಶರದ್ ಯಾದವ್ ಉವಾಚಾ. ಇಲ್ಲಿ "ಕೂದಲು ಕತ್ತರಿಸಿಕೊಂಡ ಮಹಿಳೆ"ಯೆಂದರೆ ಆಧುನಿಕ, ವಿದ್ಯಾವಂತ, ಸ್ವತಂತ್ರ ಮನೋಭಾವದ ಮಹಿಳೆ ಎಂದರ್ಥ. ಶರದ್ ಯಾದವ್‌ಗೆ ಇಂತಹ ಮಹಿಳೆಯೆಂದರೆ ಅಲರ್ಜಿ. ಅವರಿಗೆ ಕೂದಲು ಮುಚ್ಚಿಕೊಳ್ಳುವಂತೆ ಸೆರಗನ್ನು ತಲೆಯ ಮೇಲೆ ಹಾಕಿಕೊಂಡ, ನಾಚಿಕೊಳ್ಳುವ, ಪುರುಷರೆಂದರೆ ಭಯಗೊಳ್ಳುವ, ಅವರ ಮಾತಿನಂತೆ ನಡೆಯುವ ಮಹಿಳೆಯರು ನಿಜವಾದ ಮಹಿಳೆಯರು. ಅಂತಹವರು ಬಂದರೆ ಪರವಾಗಿಲ್ಲ ಎಂದು ಕಾಣುತ್ತದೆ. 'ಬೀಬಿ ಬ್ರಿಗೇಡ್' ಆಗುತ್ತದೆ ಎನ್ನುವುದು ಮತ್ತೊಂದು ಆತಂಕ. ತಾವು ನಿಲ್ಲಲು ಆಸ್ಪದವಿಲ್ಲದಾಗ ಪುರುಷ ರಾಜಕಾರಣಿಗಳು ತಮ್ಮ ಹೆಂಡತಿ, ಮಗಳು, ಸೊಸೆಯಂದಿರನ್ನು ನಿಲ್ಲಿಸುತ್ತಾರೆಯೇ ಹೊರತು ಬೇರೆ ಮಹಿಳೆಯರಿಗೆ ಬರಲು ಅವಕಾಶವಿರುವುದಿಲ್ಲ ಎಂದು ಕೆಲವರು ಹೇಳುತ್ತಾರೆ. ಇನ್ನೂ ಮಹಿಳೆಯರಿಗೆ ರಾಜಕೀಯ ಜ್ಞಾನ ತರಬೇತಿ ದೊರೆತಿಲ್ಲ, ಅಷ್ಟೊಂದು ಸಂಖ್ಯೆಯಲ್ಲಿ

(೧/೩) ಲೋಕಸಭೆ-ವಿಧಾನಸಭೆಗೆ ಇದ್ದಕ್ಕಿದ್ದಂತೆ ಮಹಿಳೆಯರು ಕಾಲಿರಿಸಿದರೆ ಅನಾಹುತವಾಗುತ್ತದೆ ಎಂದು ಕೆಲವರು ಭಯಪಡುತ್ತಾರೆ. ಮೀಸಲು ಕ್ಷೇತ್ರಗಳಲ್ಲಿ ಮತದಾರರಿಗೆ ಆಯ್ಕೆ ಇರುವುದಿಲ್ಲ ಎಂದೂ ಮೂಗು ಮುರಿಯುವವರು ಕೆಲವರು. ಸಧ್ಯದ ಪರಿಸ್ಥಿತಿಯಲ್ಲಿ ಅಷ್ಟೊಂದು ಸಂಖ್ಯೆಯಲ್ಲಿ ಮಹಿಳೆಯರು ಪ್ರವೇಶ ಮಾಡಿದರೆ ತಮ್ಮ ಘನತೆಯನ್ನು ಉಳಿಸಿಕೊಳ್ಳಲಾರರು, ಹಾಗಾಗಿ ಕೆಟ್ಟ ಮಹಿಳೆಯರು ವಿಜೃಂಭಿಸುತ್ತಾರೆ, ಅವರೇ ಸಮಾಜದಲ್ಲಿ ರೋಲ್ ಮಾಡೆಲ್ ಆಗಿರುತ್ತಾರೆ. (ಫೂಲನ್‌ದೇವಿ, ಮಾಯಾವತಿ), ಪುರುಷರ ಹಾದಿ ಹಿಡಿದು ಹಾಳಾಗುತ್ತಾರೆ. ಅವರ ರೋಲ್ ಮಾಡೆಲ್‌ಗಳು ರಾಜಕೀಯ ಕ್ಷೇತ್ರದಲ್ಲಿಲ್ಲ, ಬೇರೆಡೆ ಇದ್ದಾರೆ, ರಾಜಕೀಯದಲ್ಲಿ ಭಾಗವಹಿಸಿದ ಮಾತ್ರಕ್ಕೆ ಅವರ ಸ್ಥಾನಮಾನ ಹೆಚ್ಚುವುದಿಲ್ಲ, ಭಾಗವಹಿಸದ ಮಾತ್ರಕ್ಕೆ ಅವರೇನೂ ಕಳೆದುಕೊಳ್ಳುವುದಿಲ್ಲ ಎನ್ನುವುದು ಇನ್ನೊಂದು ವಾದ.

೧/೩ ಮಹಿಳಾ ಮೀಸಲಾತಿಯ ಬಗ್ಗೆ ಆತಂಕ ವ್ಯಕ್ತಪಡಿಸುವವರು ಅದನ್ನು ೧೫% ಗೆ ಇಳಿಸಬೇಕೆಂಬ ಬದಲಿ ಸಲಹೆಯನ್ನು ಮುಂದಿಟ್ಟಿದ್ದಾರೆ. ಇನ್ನೊಂದು ಗುಂಪಿನವರು, ಲೋಕಸಭೆ -ಶಾಸನಸಭೆಯ ಬದಲು, ಮಹಿಳೆಯರಿಗೆ ರಾಜಕೀಯಪಕ್ಷಗಳು ಕನಿಷ್ಠ ೧/೩ ಟಿಕೆಟ್‌ಗಳನ್ನು ನೀಡಲಿ ಎಂದು ಸಲಹೆ ನೀಡಿದ್ದಾರೆ.

ಇದಕ್ಕೆ ಪ್ರತಿಯಾಗಿ ಮಹಿಳೆಯರು ಮೀಸಲಾತಿಯ ಬಗ್ಗೆ ತಮ್ಮ ಪರ ವಾದಗಳನ್ನು ಈ ರೀತಿ ಮುಂದಿಟ್ಟಿದ್ದಾರೆ. ದೇಶಕ್ಕೆ ಸ್ವಾತಂತ್ರ್ಯ ಬಂದು ೫೦ ವರ್ಷಗಳಾದರೂ ರಾಜಕೀಯವಾಗಿ ಮಹಿಳಾ ಪ್ರಾತಿನಿಧ್ಯ ಸಾಕಷ್ಟು ಇಲ್ಲ. ಹಾಗಾಗಿ ಮಹಿಳೆಯರಿಗೆ ಸಂಬಂಧಪಟ್ಟ ವಿಷಯಗಳಿಗೆ ಸಾಕಷ್ಟು ಗಮನ ಸಿಗುತ್ತಿಲ್ಲ. ನಮ್ಮ ದೇಶ, ಮಹಿಳಾ ರಾಜಕೀಯ ಪ್ರಾತಿನಿಧ್ಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ೧೭೬ ದೇಶಗಳಲ್ಲಿ ೧೩೪ ನೇ ಸ್ಥಾನದಲ್ಲಿದೆ ! ಸಂವಿಧಾನದ ತಿದ್ದುಪಡಿಯ ಮೂಲಕ ಅವರಿಗೆ ಮೀಸಲಾತಿ ಕಲ್ಪಿಸದ ಹೊರತು ಪುರುಷ ಪ್ರಧಾನ ರಾಜಕೀಯಪಕ್ಷಗಳು ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯ ಕೊಡುವುದಿಲ್ಲ. ಪಕ್ಷಗಳಿಗೆ ತಮ್ಮ ಇಚ್ಛೆಯಂತೆ ೧/೩ಸೀಟುಗಳನ್ನು ಮಹಿಳೆಯರಿಗೆ ನೀಡಲು ಬಿಟ್ಟಲ್ಲಿ, ಮಹಿಳೆಯರಿಗೆ ಸಿಗುವುದೆಲ್ಲ ಸೋಲುವ ಜಾಗಗಳು, ಅಲ್ಲದೇ ೧/೩ ಸೀಟುಗಳನ್ನು ಪಕ್ಷಗಳು ಅವರಿಗೆ ಕೊಟ್ಟರೂ, ಮಹಿಳೆಯರು ಅದೇ ಪ್ರಮಾಣದಲ್ಲಿ ಆರಿಸಿಬರುವ ಖಾತ್ರಿ ಇಲ್ಲ. ಪುನಃ ಅವರು ಹಿಂದಿನ ಸ್ಥಿತಿಯಲ್ಲಿಯೇ ಉಳಿಯುತ್ತಾರೆ. ಮೀಸಲಾತಿಯ ಕ್ಷೇತ್ರಗಳಾದರೆ ಅಲ್ಲಿಂದ ಯಾವುದೇ ಪಕ್ಷದ ಪರವಾಗಿ ಮಹಿಳೆಯರೇ ಚುನಾಯಿತರಾಗಿ ಬರುತ್ತಾರೆ.

ಮಹಿಳಾ ಮೀಸಲಾತಿ ಕ್ಷೇತ್ರಗಳಲ್ಲಿ ಮತದಾರರಿಗೆ ಆಯ್ಕೆಗೆ ಬದಲಿ ಅವಕಾಶವಿರುವುದಿಲ್ಲ ಎನ್ನುವ ವಾದ ಅರ್ಥಹೀನ. ಈವರೆಗಿನ ಚುನಾವಣೆಗಳಲ್ಲಿ ಎಲ್ಲರೂ ಪುರುಷರಿದ್ದಾಗ ಅವರಿಗೆಷ್ಟು ಆಯ್ಕೆಯ ಅವಕಾಶವಿತ್ತು? ಮಹಿಳೆಯರಿಗೆ ನ್ಯಾಯ ಒದಗಿಸಲು ಮೀಸಲಾತಿ ಪ್ರಶ್ನೆ ಬಂದಾಗಷ್ಟೇ ಈ ವಾದ ಏಕೆ ಎತ್ತಲ್ಪಡುತ್ತದೆ?

ಎಂದು ಈ ಮಹಿಳೆಯರು ಪ್ರಶ್ನಿಸುತ್ತಾರೆ. ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಲೋಕಸಭೆ-ವಿಧಾನಸಭೆಗಳಿಗೆ ಪ್ರವೇಶಿಸಿದರೆ ಈಗಿರುವ ಕ್ರಿಮಿನಲ್-ರಾಜಕೀಯ ವ್ಯಕ್ತಿಗಳ ಅನೈತಿಕ ಸಂಬಂಧ ತಪ್ಪುತ್ತದೆ ಎನ್ನುವ ಇವರು, ಮಹಿಳೆಯರಿಗೆ ರಾಜಕೀಯದ ತಿಳಿವಳಿಕೆ ಇಲ್ಲ, ಅನುಭವ ಇಲ್ಲ ಎನ್ನುವ ವಾದಕ್ಕೆ ಉತ್ತರವಾಗಿ, ಈಗಿರುವ ಎಷ್ಟು ಪುರುಷ ಸದಸ್ಯರಿಗೆ ತಮ್ಮ ಕರ್ತವ್ಯದ ಬಗ್ಗೆ ನಿಜವಾದ ತಿಳಿವಳಿಕೆ ಇದೆ, ಎಷ್ಟು ಜನರು ಪಾರ್ಲಿಮೆಂಟಿನ, ವಿಧಾನಸಭೆಯ ಕಾರ್ಯಕಲಾಪಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ, ಅರ್ಥಮಾಡಿಕೊಳ್ಳುತ್ತಾರೆ, ತಮ್ಮ ಅರ್ಥದ 'ರಾಜಕೀಯ' ಮಾಡುವುದು ಬಿಟ್ಟು ಇವರಿಗೆ ಏನು ಬರುತ್ತದೆ ಎಂದು ಪ್ರಶ್ನಿಸುತ್ತಾರೆ.

ಮಹಿಳಾ ಮೀಸಲಾತಿಯಲ್ಲಿ ಹಿಂದುಳಿದ ವರ್ಗದ ಮಹಿಳೆಯರಿಗೆ, ಮುಸ್ಲಿಂ ಮಹಿಳೆಯರಿಗೆ ಪ್ರತ್ಯೇಕ ಮೀಸಲಾತಿ ಕೊಡಬೇಕೆನ್ನುವುದನ್ನು ಒಂದು ಗುಂಪಿನ ಮಹಿಳೆಯರು ಬಲವಾಗಿ ವಿರೋಧಿಸುತ್ತಾರೆ. ಇಂತಹ ಪ್ರತ್ಯೇಕ ಮೀಸಲಾತಿ ಈವರೆಗೂ ಮಾಡಿಲ್ಲ, ಮುಂದೆ ಸಾಮಾನ್ಯ ಸೀಟುಗಳಲ್ಲಿಯೂ ಇರುವುದಿಲ್ಲ, ಅಂದ ಮೇಲೆ ಮಹಿಳಾ ಮೀಸಲಾತಿಯ ಬಗ್ಗೆ ಮಾತ್ರ ಏಕೆ ಈ ಪ್ರಶ್ನೆ ಎತ್ತಲಾಗುತ್ತಿದೆ? ಪುರುಷರಿಗೆ ಅನ್ವಯಿಸದ ಈ ತತ್ವ ಮಹಿಳೆಯರಿಗಷ್ಟೇ ಏಕೆ? ಒಮ್ಮೆ ಮಹಿಳೆಯರಲ್ಲಿ ಈ ಪ್ರತ್ಯೇಕ ಮೀಸಲಾತಿ ಬಂದ ನಂತರ ಸಾಮಾನ್ಯ ಸೀಟುಗಳಲ್ಲಿಯೂ ಇದೇ ರೀತಿಯ ಪ್ರತ್ಯೇಕ ಮೀಸಲಾತಿಯನ್ನು ಹಿಂದುಳಿದ ವರ್ಗಗಳಿಗೆ, ಮುಸ್ಲಿಂರಿಗೆ ಕೇಳಬಹುದೆಂಬುದು ಇದರ ಹಿಂದಿರುವ ಹುನ್ನಾರವೇ?

ಮಹಿಳೆಯರು ಮಹಿಳಾ ಪ್ರತಿನಿಧಿಗಳಾಗಿ ಆಯ್ಕೆಗೊಂಡಾಗ ಅವರಲ್ಲಿ, ತಾವೆಲ್ಲರೂ ಒಂದು ವರ್ಗಕ್ಕೆ ಸೇರಿದವರು, ಮಹಿಳಾಪರಧ್ವನಿ ಎತ್ತಲು ಒಂದಾಗಿರಬೇಕು, ಎಲ್ಲಾ ಜಾತಿಯ-ಧರ್ಮದ-ವರ್ಗದ ಮಹಿಳೆಯರ ಪರವಾಗಿ ತಾವೆಲ್ಲರೂ ಕೂಡಿ ಹೋರಾಡಬೇಕು, ಕೆಲಸ ಮಾಡಬೇಕು ಎನ್ನುವ ಮನೋಭಾವ ಇರುತ್ತದೆ. ಮಹಿಳೆಯರಲ್ಲಿ ಒಗ್ಗಟ್ಟು ಇರುತ್ತದೆ, ಆಗ ಅವರು 'ಮಹಿಳಾ ಲಾಬಿ' ಯಾಗಿ ಸಮರ್ಥವಾಗಿ, ಪ್ರಭಾವಶಾಲಿಯಾಗಿ ಧ್ವನಿ ಎತ್ತಿ, ಒತ್ತಡ ತಂದು ಮಹಿಳಾ ಪರ ಕಾಳಜಿಗಳನ್ನು ಮುಂದಿಡಬಲ್ಲರು, ಸರ್ಕಾರ ಕ್ರಮಕೈಗೊಳ್ಳುವಂತೆ ಮಾಡಬಲ್ಲರು. ಅದೇ ಈ ಮಹಿಳೆಯರನ್ನು ಹಿಂದುಳಿದ ವರ್ಗ, ಮುಸ್ಲಿಂ ಮಹಿಳೆಯರು, ಇತರರು ಎಂದು ವಿಭಜನೆ ಮಾಡಿದರೆ ಮಹಿಳಾ ಹಿತಾಸಕ್ತಿಗೆ ಬಲವಾದ ಧಕ್ಕೆ ತಗಲುತ್ತದೆ, ಮಹಿಳೆಯರೂ ಜಾತಿ-ಧರ್ಮದ ಆಧಾರದ ಮೇಲೆ ತಮ್ಮನ್ನು ಗುರುತಿಸಿಕೊಳ್ಳಲು ಆರಂಭಿಸುತ್ತಾರೆ, ತಮ್ಮ-ತಮ್ಮ ಸಂಕುಚಿತ ಹಿತಾಸಕ್ತಿಗಳ ಬಗ್ಗೆ ಮಾತ್ರ ಆಸಕ್ತಿ ತೋರಿಸಲು ಆರಂಭಿಸುತ್ತಾರೆ, ಇದರಿಂದ ಮಹಿಳೆಯರ ಚಳುವಳಿಗೆ ಬಲವಾದ ಆಘಾತವಾಗುತ್ತದೆ. ಉದಾಹರಣೆಗೆ ಹಿಂದುಳಿದ ವರ್ಗದ ಮಹಿಳೆಯ ಮಾನಭಂಗವಾದರೆ ಆ ವರ್ಗಕ್ಕೆ ಸೇರಿದ ಮಹಿಳೆಯರಷ್ಟೇ ಕಾಳಜಿ ತೋರಿಸಿದರೆ, ಉಳಿದವರು ನಮಗೆ ಸಂಬಂಧಿಸಿದ್ದಲ್ಲವೆಂದು ಭಾವಿಸಿ ನಿರ್ಲಕ್ಷ್ಯ ತೋರಲಾರಂಭಿಸುತ್ತಾರೆ. ಮಾನಭಂಗವೆನ್ನುವುದು ಮಹಿಳೆಯರೆಲ್ಲರ ಸಮಸ್ಯೆ, ಎಲ್ಲರೂ ಒಟ್ಟಾಗಿ ಎದುರಿಸಬೇಕು, ಉತ್ತರ ಕಂಡುಕೊಳ್ಳಬೇಕು ಎನ್ನುವ

ಈವರೆಗಿನ ಧೋರಣೆ ಮಾಯವಾಗುತ್ತದೆ. ಭಾನ್ವರಿದೇವಿಗೆ ಈಗ ಮಹಿಳೆಯರು ತೋರಿಸುತ್ತಿರುವ ಕಾಳಜಿ-ಬೆಂಬಲ ಇತಿಹಾಸದ ಭಾಗವಾಗಿ ಮುಂದಿನ ಭಾನ್ವರಿದೇವಿಯರು ತಮ್ಮ-ತಮ್ಮ ಜಾತಿಯ ಮಹಿಳೆಯರ ಮೇಲೆ ಅವಲಂಬಿಸಬೇಕಾಗುತ್ತದೆ. ಒಗ್ಗಟ್ಟಿನಲ್ಲಿ ಬಲವಿರುತ್ತದೆ, ವಿಭಜನೆ ಮಹಿಳೆಯರನ್ನು ದುರ್ಬಲಗೊಳಿಸುತ್ತದೆ ಎನ್ನುವುದನ್ನು ನಮ್ಮ ಮಹಿಳೆಯರು ಅರಿಯಬೇಕು. ಪುರುಷರು ತಮ್ಮ ಸ್ವಾರ್ಥ ರಾಜಕಾರಣದ ಸಲುವಾಗಿ ಎತ್ತಿರುವ ಈ ವಿಭಜನೆಯ ಪ್ರಶ್ನೆಯನ್ನು ಎಲ್ಲಾ ಜಾತಿ-ಧರ್ಮ-ವರ್ಗಗಳ ಮಹಿಳೆಯರು ಸಾರಾಸಗಟಾಗಿ ತಿರಸ್ಕರಿಸಿ, ನಾವು ಈ ಆಧಾರಗಳ ಮೇಲೆ ಬೇರೆ ಮಹಿಳೆಯರಿಂದ ಪ್ರತ್ಯೇಕಗೊಳ್ಳುವುದಿಲ್ಲ ಎಂಬುದನ್ನು ಬಲವಾಗಿ ಸಾರಬೇಕು ಎಂದು ಈ ಮಹಿಳೆಯರು ಬಯಸುತ್ತಾರೆ.

ಈ ಪ್ರತ್ಯೇಕವಾದಿ ಪುರುಷರು ಮಹಿಳೆಯರನ್ನು ಜಾತಿ - ಧರ್ಮದ ಮೇಲೆ ವಿಭಜನೆ ಮಾಡಿ ಅವರನ್ನು ತಮ್ಮ ರಾಜಕೀಯದಾಟದ ದಾಳಗಳನ್ನಾಗಿ ಮಾಡಿಕೊಳ್ಳಲು ಬಯಸುತ್ತಾರೆ, ಈಗಿರುವ ಯಜಮಾನ್ಯಪದ್ಧತಿ, ಪಿತೃಪ್ರಧಾನ ಪದ್ಧತಿಯನ್ನೇ ಮತ್ತಷ್ಟು ಬಲಪಡಿಸಿಕೊಳ್ಳಲು ನೋಡುತ್ತಾರೆ. ಹಿಂದುಳಿದ ವರ್ಗ, ಅಲ್ಪಸಂಖ್ಯಾತರೆಂಬ ಕಾರ್ಡುಗಳನ್ನು ಈಗಿನಂತೆಯೇ ಆಡುತ್ತಾ, ತಮ್ಮ ಓಟ್ ಬ್ಯಾಂಕ್‌ಗಳು ಒಡೆಯದಂತೆ ಕಾಪಾಡಿಕೊಳ್ಳಲು ಮಾತ್ರ ಈ ಪ್ರಶ್ನೆ ಎತ್ತಿದ್ದಾರೆ, ಮಹಿಳಾ ಮೀಸಲಾತಿ ಬಂದರೆ, ಎಲ್ಲಾ ವರ್ಗ-ಜಾತಿ-ಧರ್ಮದ ಮಹಿಳೆಯರು ಒಂದಾದರೆ, ತಮ್ಮ ಈ ಓಟ್‌ಬ್ಯಾಂಕ್ ಕುಸಿಯುತ್ತದೆ ಎನ್ನುವುದು ಈ ಪುರುಷ ರಾಜಕಾರಣಿಗಳ ಭಯ, ಮಹಿಳೆಯರು ಇದನ್ನು ಅರ್ಥಮಾಡಿಕೊಂಡು, ಅವರ ಪ್ರಯತ್ನವನ್ನು ವ್ಯರ್ಥಗೊಳಿಸಬೇಕು ಎಂದು ಈ ಮಹಿಳೆಯರು ಎಚ್ಚರಿಕೆ ನೀಡುತ್ತಾರೆ. ಈ ರೀತಿಯ ವಿಭಜನೆ ದೂರಗಾಮಿ ಪರಿಣಾಮವನ್ನು ಹೊಂದಿದ್ದು ದೇಶವನ್ನು ಹಿಂದುಳಿದ ವರ್ಗಗಳು, ಅಲ್ಪಸಂಖ್ಯಾತರು, ಮತ್ತಿತರರು ಎಂಬುದಾಗಿ ಒಡೆದು ಐಕ್ಯತೆಯನ್ನು, ಭಾರತೀಯತೆಯ ಭಾವನೆಯನ್ನು ಭಗ್ನಗೊಳಿಸುತ್ತದೆ ಎಂಬುದು ಅವರ ಆತಂಕ.

ಮಹಿಳಾ ಮೀಸಲಾತಿಯಲ್ಲಿ ಅಲ್ಪಸಂಖ್ಯಾತರಿಗೆ, ಹಿಂದುಳಿದ ವರ್ಗಗಳಿಗೆ ಪ್ರತ್ಯೇಕ ಮೀಸಲಾತಿಯನ್ನು ಕಾನೂನಿನ ಮೂಲಕ/ಸಂವಿಧಾನ ತಿದ್ದುಪಡಿಯ ಮೂಲಕ ಮಾಡುವುದು ಬೇಡ, ರಾಜಕೀಯ ಪಕ್ಷಗಳು ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ತಮಗೆ ಸರಿತೋರಿದಷ್ಟು ಸೀಟುಗಳನ್ನು ಅವರಿಗೆ ಕೊಡಲಿ, ಅದಕ್ಕೆ ಯಾವ ಅಡ್ಡಿಯೂ ಇಲ್ಲ, ಇದರಲ್ಲಿ ಪಕ್ಷಗಳಿಗೇ ಪೂರ್ಣ ಸ್ವಾತಂತ್ರ್ಯವಿರುತ್ತದೆ ಎನ್ನುವ ವಾದವನ್ನು ಇವರು ಮುಂದಿಡುತ್ತಾರೆ. ಹೇಗಿದ್ದರೂ ರಾಜಕೀಯ ಪಕ್ಷಗಳು ಪ್ರತಿ ಚುನಾವಣಾ ಮತ ಕ್ಷೇತ್ರದ ಜಾತಿ-ಧರ್ಮದ ಲೆಕ್ಕಾಚಾರದ ಮೇಲೆಯೇ ತಮ್ಮ ಅಭ್ಯರ್ಥಿಗಳನ್ನು ಆಯ್ಕೆ ಮಾಡುವುದು. ಮಹಿಳಾ ಅಭ್ಯರ್ಥಿಯನ್ನು ಆಯ್ಕೆ ಮಾಡುವಾಗಲೂ ಆ ಲೆಕ್ಕಾಚಾರವೇ ಕೆಲಸ ಮಾಡುತ್ತದೆ. ಈಗ ಹಿಂದುಳಿದ ವರ್ಗದವರಿಗೆ ವಿಧಾನಸಭೆ-ಲೋಕಸಭೆಯಲ್ಲಿ ಮೀಸಲಾತಿ ಇಲ್ಲದಿದ್ದರೂ, ಈ ಜಾತಿ ಲೆಕ್ಕಾಚಾರದ ಆಧಾರದ ಮೇಲೆ ಸಾಕಷ್ಟು ಸಂಖ್ಯೆಯಲ್ಲಿ ಆಯ್ಕೆಯಾಗಿ ಬಂದಿದ್ದಾರೆ, ಮುಂದೆ ಮಹಿಳೆಯರಿಗೂ ಅದೇ

ಅನ್ವಯಿಸುತ್ತದೆ. ಹಾಗಾಗಿ ಮಹಿಳಾ ಮೀಸಲಾತಿ ಕೊಟ್ಟರೆ ಕೇವಲ ಮೇಲ್ವರ್ಗದ, ಮೇಲ್ಜಾತಿಯ ಮಹಿಳೆಯರೇ ಈ ಸದನಗಳಿಗೆ ಪ್ರವೇಶ ಪಡೆಯುತ್ತಾರೆ ಎನ್ನುವುದರಲ್ಲಿ ಅರ್ಥವಿಲ್ಲ. ಈ ಪುರುಷರ ವಿರೋಧವೇನಿದ್ದರೂ ಅಷ್ಟೊಂದು ಸಂಖ್ಯೆಯಲ್ಲಿ ಮಹಿಳೆಯರು ಆಯ್ಕೆಯಾಗದಂತೆ ತಡೆದು, ತಮ್ಮ ಸ್ಥಾನಗಳ ಭದ್ರತೆಯನ್ನು ಕಾಪಾಡಿಕೊಳ್ಳುವುದೇ ಆಗಿದೆ ಎಂದು ಬಲವಾಗಿ ವಾದಿಸುತ್ತಾರೆ.

ಪರ-ವಿರೋಧಗಳ ವಾದಗಳು ಏನೇ ಇದ್ದರೂ ಮಹಿಳೆಯರಿಗೆ ದೇಶದ ರಾಜಕೀಯ ಆಗು-ಹೋಗುಗಳಲ್ಲಿ ಭಾಗವಹಿಸಲು ಸೂಕ್ತ ಅವಕಾಶವಿಲ್ಲ ಎನ್ನುವುದು ಸತ್ಯಸಂಗತಿ. ವಿಶ್ವ ೨೧ನೇ ಶತಮಾನಕ್ಕೆ ಕಾಲಿಡುತ್ತಿರುವ ಸಂದರ್ಭದಲ್ಲಿ ಮಹಿಳೆಯರು ಮನೆಗೇ, ತಾಯಿ-ಮಡದಿಯ ಪಾತ್ರಕ್ಕೇ ತಮ್ಮನ್ನು ಸೀಮಿತಗೊಳಿಸಿಕೊಳ್ಳಬೇಕು ಎಂದು ನಿರೀಕ್ಷಿಸುವುದು ಅಸಾಧ್ಯದ ಸಂಗತಿ. ಸಧ್ಯದ ರಾಜಕೀಯ ಪರಿಸ್ಥಿತಿಯಲ್ಲಂತೂ ಮಹಿಳೆಯರು ತಾವಾಗಿಯೇ ರಾಜಕೀಯದಲ್ಲಿ ತೊಡಗಿಸಿಕೊಳ್ಳಲಾರರು. ಸಭ್ಯ ಪುರುಷರೂ ಕಾಲಿಡಲು ಹಿಂಜರಿಯುವ ಪರಿಸ್ಥಿತಿ. ಕ್ರಿಮಿನಲ್‌ಗಳು ಹೆಚ್ಚು ಹೆಚ್ಚಾಗಿ ನೇರವಾಗಿ ರಾಜಕೀಯ ಕ್ಷೇತ್ರಕ್ಕೆ ಧುಮುಕುತ್ತಿದ್ದಾರೆ. ಇಷ್ಟು ದಿನ ರಾಜಕಾರಣಿಗಳ ಸಹಾಯಕರಾಗಿ ಕೆಲಸ ಮಾಡುತ್ತಿದ್ದ ಕ್ರಿಮಿನಲ್‌ಗಳು ಈಗ ತಾವೇ ರಾಜಕೀಯ ಪಕ್ಷಗಳನ್ನು ಕಟ್ಟುತ್ತಿದ್ದಾರೆ, ನೇರವಾಗಿ ಅಭ್ಯರ್ಥಿಗಳಾಗುತ್ತಿದ್ದಾರೆ, ಅಧಿಕಾರ ಹಿಡಿಯಲು ಹವಣಿಸುತ್ತಿದ್ದಾರೆ. ಹಾಗಾಗಿ ಮಹಿಳಾ ಮೀಸಲಾತಿ ಖಂಡಿತವಾಗಿ ಮಹಿಳೆಯರಿಗೆ ಮಾತ್ರವಲ್ಲದೇ ದೇಶದ ರಾಜಕೀಯ ಕ್ಷೇತ್ರಕ್ಕೂ ಉತ್ತಮ ಭವಿಷ್ಯವನ್ನು ತರಬಲ್ಲದು. ೧/೩ ಅಲ್ಲದಿದ್ದರೆ ಕನಿಷ್ಠ ೧/೪ ಮೀಸಲಾತಿಯಾದರೂ ಅವಶ್ಯಕ. ರಾಜಕೀಯ ಪಕ್ಷಗಳು ಎಲ್ಲ ವರ್ಗದ- ಜಾತಿಯ-ಧರ್ಮದ ಮಹಿಳೆಯರಿಗೆ ಚುನಾವಣಾ ಅಭ್ಯರ್ಥಿಗಳಾಗಿ ಅವಕಾಶ ಕಲ್ಪಿಸಲಿ. ಆದರೆ, ಕಾನೂನಿನ ಮೂಲಕ ಮಹಿಳೆಯರನ್ನು ಒಡೆಯುವುದು ಬೇಡ, ದೇಶದ ಅತ್ಯುನ್ನತ ಸಂಸ್ಥೆಗಳಾದ ಲೋಕಸಭೆ- ವಿಧಾನಸಭೆಗಳಿಗೆ ವಿದ್ಯಾವಂತ, ಬುದ್ಧಿವಂತ, ಸ್ವತಂತ್ರವಾಗಿ ಯೋಚಿಸಬಲ್ಲ, ನಿರ್ಣಯ ತೆಗೆದುಕೊಳ್ಳಬಲ್ಲ, ಮಹಿಳೆಯರ ಪರವಾಗಿ ಕಾಳಜಿ ಹೊಂದಿದ್ದು ಅವರ ಹಿತಾಸಕ್ತಿಯನ್ನು ಕಾಪಾಡಬಲ್ಲ ಸಮರ್ಥ ಮಹಿಳೆಯರು ಬರುವಂತಾಗಬೇಕು ಎಂಬುದು ನನ್ನ ಆಶಯ. ಇವು ಇಡೀ ದೇಶಕ್ಕೆ-ಜನತೆಗೆ ಶಾಸನಮಾಡುವ, ನೀತಿ ನಿರೂಪಿಸುವ ಸಂಸ್ಥೆಗಳು. ನಾಯಕರು ಹೇಳಿದಾಗ ಕೇವಲ ಕೈಯೆತ್ತುವ ಕೆಲಸ ಮಾಡುವ ಮಹಿಳೆಯರು ಎಷ್ಟೇ ಸಂಖ್ಯೆಯಲ್ಲಿ ಮೀಸಲಾತಿಯ ಮೂಲಕ ಚುನಾಯಿತರಾಗಿ ಬಂದರೂ ಅವರಿಂದ ಮಹಿಳೆಯರಿಗಾಗಲೀ, ದೇಶಕ್ಕಾಗಲೀ ಹೆಚ್ಚಿನ ಉಪಯೋಗವಾಗುವುದಿಲ್ಲ. ಈ ಮಹಿಳೆಯರು ಉಳಿದ ಮಹಿಳೆಯರಿಗೆ 'ರೋಲ್ ಮಾಡೆಲ್'ಗಳಾಗಲಾರರು. ಈಗಾಗಲೇ ಅಮೇರಿಕಾದಂತಹ ದೇಶಗಳಲ್ಲಿ ಮಹಿಳಾ ಶಾಸಕಿಯರು ಮಹಿಳಾ ವಿಷಯಗಳನ್ನು ತೆಗೆದುಕೊಂಡು ಶಾಸನಸಭೆಗಳಲ್ಲಿ ತಮ್ಮ ಹೋರಾಟವನ್ನು ಮುಂದುವರಿಸಿದ್ದಾರೆ. ಮಹಿಳೆಯರೆಲ್ಲ ಜಾತಿ-ಮತ ಭೇದವನ್ನು ಮರೆತು ಒಗ್ಗಟ್ಟಾಗಿ ತಮ್ಮ ಹಿತರಕ್ಷಣೆ ಮಾಡಿಕೊಳ್ಳಲು ಪ್ರಯತ್ನಿಸದಿದ್ದಲ್ಲಿ ಜಾತಿ-ಧರ್ಮ ಆಧಾರಿತ ಪ್ರತ್ಯೇಕ ಮೀಸಲಾತಿಯ ಮೂಲಕ ಒಡೆದು ಹೋಳಾದಲ್ಲಿ ಅವರು

ಒಂದು ದೊಡ್ಡ ಧ್ವನಿಯಲ್ಲಿ ಮಾತನಾಡಲಾರರು, ಶಕ್ತಿಶಾಲಿ ಲಾಬಿಯಾಗಿ ಕೆಲಸ ಮಾಡಲಾರರು, ಕೇವಲ ಪುರುಷರಾಜಕಾರಣಿಗಳ ಹಿಂಬಾಲಕಿಯರಾಗಿ ಮಾತ್ರ ಉಳಿಯಬೇಕಾಗುತ್ತದೆ.

ಈ ಸಂವಿಧಾನ ತಿದ್ದುಪಡಿಯ ಬಗ್ಗೆ ವಿವಾದವಿದ್ದರೂ ರಾಜ್ಯಸಭೆ-ರಾಜ್ಯವಿಧಾನ ಪರಿಷತ್ತುಗಳ ಸದಸ್ಯರ ನೇಮಕಾತಿ ಸಂಬಂಧದಲ್ಲಿ ಯಾವುದೇ ಕಾನೂನಿನ ತೊಡಕಿಲ್ಲ. ರಾಜಕೀಯ ಪಕ್ಷಗಳೆಲ್ಲಾ ಮಹಿಳಾ ಮೀಸಲಾತಿಯ ಬಗ್ಗೆ ವೇದಿಕೆಗಳಲ್ಲಿ ಬೆಂಬಲಿಸಿ, ದೊಡ್ಡ ಗಂಟಲಿನಲ್ಲಿ ಆಶ್ವಾಸನೆ ಕೊಟ್ಟಿದ್ದರೂ, ವಿಧಾನಪರಿಷತ್ತು- ರಾಜ್ಯಸಭೆಗಳ ಸದಸ್ಯರ ನೇಮಕಾತಿ ಸಂದರ್ಭದಲ್ಲಿ ಮಹಿಳೆಯರಿಗೆ ಸೂಕ್ತ ಸ್ಥಾನವನ್ನೇನು ಕೊಟ್ಟಿಲ್ಲ. ಆಗಿನ ಕೇಂದ್ರ ಸರ್ಕಾರವನ್ನು ಮಹಿಳಾ ಮೀಸಲಾತಿಯ ಬಗ್ಗೆ ಒತ್ತಾಯಿಸಲು ಮಹಿಳಾ ಆಯೋಗವನ್ನು ದೆಹಲಿಗೆ ಕಳಿಸುತ್ತಿದ್ದ ಮಾನ್ಯ ಶ್ರೀ ದೇವೇಗೌಡರು ವಿಧಾನಪರಿಷತ್ತಿಗೆ -ರಾಜ್ಯಸಭೆಗೆ ನೇಮಕಾತಿ ಮಾಡುವ ಸಂದರ್ಭದಲ್ಲಿ ಒಬ್ಬ ಮಹಿಳೆಗೂ ಅವಕಾಶ ಕೊಡಲಿಲ್ಲ. ರಾಜಕಾರಣಿಗಳ ಈ ಗೋಸುಂಬೆತನ ಮಹಿಳೆಯರಿಗೆ ಬೇಸರ ತಂದಿದೆ. ರಾಜ್ಯಸಭೆ-ವಿಧಾನಪರಿಷತ್ತಿಗೂ ಮಹಿಳಾ ಮೀಸಲಾತಿ ಕಲ್ಪಿಸುವ ಅವಶ್ಯಕತೆ ಇದೆ. ಕಾನೂನಿನಲ್ಲಿ ಈ ಬಗ್ಗೆಯೂ ಸೂಕ್ತ ತಿದ್ದುಪಡಿಯಾಗಬೇಕೆಂದು ಮಹಿಳೆಯರು ಒತ್ತಾಯ ಮಾಡಬೇಕು.

ಮುಂದಿನ ಲೋಕಸಭೆಯ ಅಧಿವೇಶನದಲ್ಲಿ ಪುನಃ ಈ ಮಹಿಳಾ ಮಸೂದೆಯನ್ನು ತರಲು, ಪಾಸ್ ಮಾಡಲು ಪ್ರಧಾನಮಂತ್ರಿ ಶ್ರೀ ಅಟಲ್ ಬಿಹಾರಿ ವಾಜಪೇಯಿಯವರು ಎಲ್ಲಾ ಪಕ್ಷಗಳೊಂದಿಗೆ ಸಹಮತಕ್ಕಾಗಿ ಪ್ರಯತ್ನ ನಡೆಸಿದ್ದಾರೆಂಬ ಸುದ್ದಿ ಇದೆ. ಮುಂದಿನ ಅಧಿವೇಶನದಲ್ಲಾದರೂ ಮಸೂದೆ ಈಗಿರುವಂತೆಯೇ ಪಾಸಾಗಿ, ಮಹಿಳೆಯರಿಗೆ ನ್ಯಾಯ ದೊರಕಲಿ ಎಂದು ಹಾರೈಸುತ್ತೇನೆ.



"ಸ್ತ್ರೀಯರ ಹಕ್ಕು ಬಾಧ್ಯತೆಗಳ ವಿಷಯದಲ್ಲಿ ನಾನು ಸ್ವಲ್ಪವೂ ಸೋಲಲಾರೆ. ಪುರುಷ ನಿರ್ಮಿತವಾದ ಯಾವ ಬಗೆಯ ಶಾಸನ ಬದ್ಧ ಅಡ್ಡಿ-ಆತಂಕಗಳಿಂದಲೂ ಆಕೆ ತೊಳಲಬಾರದೆಂಬುದು ನನ್ನ ಅಭಿಪ್ರಾಯ."

(ಮೋ. ಕ. ಗಾಂಧಿ)

# ಮಹಿಳಾ ಮೀಸಲಾತಿ - ಒಂದು ಟಿಪ್ಪಣಿ

ಡಾ. ಉಮಾಪತಿ

## ಪರಿಚಯ

ಮಹಿಳೆಯರು ಜನಸಂಖ್ಯೆಯ ಅರ್ಧಭಾಗದಷ್ಟಿದ್ದರೂ ವಿಶ್ವದಾದ್ಯಂತ ರಾಜಕೀಯದಲ್ಲಿ ಅವರ ಭಾಗವಹಿಸುವಿಕೆ ನಾಮಮಾತ್ರವಾಗಿದೆ. ಇದು ಸಾಮಾನ್ಯವಾಗಿ ಶೇಕಡ ಹತ್ತರ ಸುತ್ತ ಮುತ್ತ ಇದೆ. ಶೇಕಡ ೪೦.೪% ಮಹಿಳಾ ಪ್ರತಿನಿಧಿಗಳನ್ನು ತನ್ನ ಸಂಸತ್ತಿನಲ್ಲಿ ಹೊಂದಿರುವ ಯುರೋಪ್ ಖಂಡದ ಸ್ವೀಡನ್ ದೇಶ ಮಾತ್ರ ಇದಕ್ಕೆ ಹೊರತಾದ ಏಕಮಾತ್ರ ದೇಶವಾಗಿದೆ. ರಾಜಕೀಯವು ಸಾಮಾನ್ಯವಾಗಿ ಪುರುಷರ ಸ್ವತ್ತಾಗಿದೆ. ಇದರಿಂದ ಮಹಿಳೆಯರ ಅವಸ್ಥೆ, ಸಮಸ್ಯೆಗಳು ತಾತ್ಸಾರಕ್ಕೂ ಹಾಗೂ ಮಲತಾಯಿ ಧೋರಣೆಗಳಿಗೂ ಒಳಗಾಗಿವೆ. ಮಹಿಳೆಯರ ಶೋಷಣೆ ದೈಹಿಕ ಅತ್ಯಾಚಾರ ಮತ್ತು ದಹನಗಳನ್ನೂ ಒಳಗೊಂಡಂತೆ ನಿರಾತಂಕವಾಗಿ ಮುಂದುವರೆಯುತ್ತಿದೆ. ಆದ್ದರಿಂದಲೇ ಮಹಿಳಾ ಚಳುವಳಿ, ಮಹಿಳಾ ಅಧ್ಯಯನಗಳು, ಮಹಿಳಾ ಆಯೋಗಗಳೂ ಬೆಳೆದು ನಿಂತು ಮಹಿಳೆಗೆ ಶಕ್ತಿ ಸಂಚಯನಕ್ಕಾಗಿ ಹೋರಾಡುತ್ತಿವೆ. ಮಹಿಳಾ ಮೀಸಲಾತಿ ಮಸೂದೆ ಈ ದಿಸೆಯಲ್ಲಿನ ಒಂದು ಗಮನಾರ್ಹ ಹೆಜ್ಜೆಯಾಗಿತ್ತು. ೧೯೯೮ ರ ಜುಲೈ ೧೩ ರಂದು ಇದನ್ನು ಲೋಕಸಭೆಯಲ್ಲಿ ಮಂಡನೆಯ ಹಂತದಲ್ಲೇ ದೈಹಿಕವಾಗಿ ತಡೆದ ಘಟನೆ ಮಹಿಳಾ ಪರ ಚಳುವಳಿಯನ್ನು ದಿಗ್ಭ್ರಮೆಗೊಳಿಸಿದೆ. ಈ ಘಟನೆಯ ವಿಶ್ಲೇಷಣೆ ಭಾರತದ ರಾಜಕೀಯ ಚೌಕಟ್ಟು ಮತ್ತು ಸಂಸ್ಕೃತಿಗಳು ಮಹಿಳಾ ವಿಷಯ ಮತ್ತು ಶಕ್ತಿ ಸಂಚಯದ ಬಗ್ಗೆ ಹೊಂದಿರುವ ನೀತಿ ನಿಲುವುಗಳು ಹಾಗೂ ಸ್ಪಂದಿಸುವಿಕೆಯ ಮೇಲೆ ಬೆಳಕು ಚೆಲ್ಲುತ್ತದೆ. ಇದರ ಜೊತೆಗೆ ಮಹಿಳಾ ಮೀಸಲಾತಿ ವಾದದ ಪುನರಾವಲೋಕನವೂ ಅವಶ್ಯವಾಗಿದೆ.

## ಹಿನ್ನೆಲೆ

ಚಾರಿತ್ರಿಕವಾಗಿ, ವಿಧವೆಯರಾದ ರಾಣಿಯರು ಆಳ್ವಿಕೆ ನಡೆಸುವ ಕೆಲವು ಉದಾಹರಣೆಗಳನ್ನು ಬಿಟ್ಟರೆ ರಾಜಕೀಯವು ಸಾಮಾನ್ಯವಾಗಿ ಮಹಿಳೆಯರನ್ನು ದೂರ ಇರಿಸಿದೆ. ವಂಶ ಪಾರಂಪರ್ಯವಾದ ರಾಜಮನೆತನದ ರಾಜಕೀಯದಲ್ಲಿ ಸಾಮಾನ್ಯ ಜನರಿಗೇ ರಾಜಕೀಯದಲ್ಲಿ ಅವಕಾಶವಿಲ್ಲದಿದ್ದಾಗ ಮಹಿಳೆಯರಿಗಿನ್ನೆಲ್ಲಿ ಭಾಗವಹಿಸುವಿಕೆಯ ಅವಕಾಶ ಸಾಧ್ಯವಾಗುತ್ತಿತ್ತು? ಆಧುನಿಕ ಪ್ರಜಾಪ್ರಭುತ್ವ ರಾಜಕೀಯ ವಿಕಾಸಗೊಂಡಂತೆ ರಾಜಕೀಯ ಸಾರ್ವಜನಿಕ ಸ್ವತ್ತಾದ ನಂತರ ೧೯ ನೇ

ಶತಮಾನದಲ್ಲಿ ಮಹಿಳೆಯರ ಮತದಾನ ಹಕ್ಕು ಚಳುವಳಿಗಳು ಆರಂಭವಾದವು. ೧೮೯೩ರಲ್ಲಿ ಪ್ರಥಮ ಬಾರಿಗೆ ನ್ಯೂಜಿಲೆಂಡ್ ದೇಶದಲ್ಲಿ ನಂತರ ೧೯೦೪ ರಲ್ಲಿ ಆಸ್ಟ್ರೇಲಿಯದಲ್ಲಿ ೧೯೧೮ ರಲ್ಲಿ ಬ್ರಿಟನ್ನಿನಲ್ಲಿ ಮತ್ತು ೧೯೨೦ ರಲ್ಲಿ ಅಮೇರಿಕ ಸಂಯುಕ್ತ ಸಂಸ್ಥಾನಗಳಲ್ಲಿ ಮಹಿಳೆಯರು ಈ ಹಕ್ಕನ್ನು ಪಡೆದರು. ಇಂದು ಕೆಲವು ಮಧ್ಯ-ಪ್ರಾಚ್ಯದ ರಾಷ್ಟ್ರಗಳನ್ನು ಹೊರತುಪಡಿಸಿ ವಿಶ್ವದ ಬಹುತೇಕ ರಾಷ್ಟ್ರಗಳಲ್ಲಿ ಮಹಿಳೆಯರು ಈ ಹಕ್ಕನ್ನು ಪಡೆದಿದ್ದಾರೆ. ಭಾರತದಲ್ಲಿ ಮಹಿಳೆಯರ ಮತದಾನದ ಹಕ್ಕು ಚಳುವಳಿ ೧೯೧೭ ರಲ್ಲಿ ಆರಂಭವಾಯಿತು. ಸಂಪೂರ್ಣವಾಗಿ ಇದು ದೊರತದ್ದು ೧೯೫೦ ರ ಹೊಸ ಸಂವಿಧಾನ ಜಾರಿಗೆ ಬಂದ ಮೇಲೆ ಮಾತ್ರ.

ಆದರೂ ಮಹಿಳೆಯರಿಗೆ ಶಾಸನ ಸಭೆಗಳಲ್ಲಿ ಪ್ರಾತಿನಿಧ್ಯ ಸಿಗಲು ನ್ಯೂಜಿಲ್ಯಾಂಡಿನಲ್ಲೇ ೧೮೯೩ ರಿಂದ ೪೦ ವರ್ಷಗಳಷ್ಟು ನಿಧಾನವಾಯಿತು. ೧೯೬೬ ರಲ್ಲಿ ವಿಶ್ವಸಂಸ್ಥೆಯ ೧೧೪ ಸದಸ್ಯ ರಾಷ್ಟ್ರಗಳಲ್ಲಿ ೫೫ ರಾಷ್ಟ್ರಗಳಲ್ಲಿ ಮಾತ್ರ ಮಹಿಳಾ ಸಂಸದರಿದ್ದರು. ಇಂದಿಗೂ ಮಹಿಳಾ ಪ್ರಾತಿನಿಧ್ಯ ಕುಂಟುತ್ತಲೇ ಇದೆ. ಸ್ವೀಡನ್‌ದೇಶ ( ೪೦.೪%) ವನ್ನು ಬಿಟ್ಟರೆ ವಿಶ್ವದಾದ್ಯಂತ ಇದು ಶೇಕಡ ೧೦ ಕ್ಕಿಂತ ಕಡಿಮೆ ಇದೆ. ಭಾರತದಲ್ಲಿ ಹೆಚ್ಚೆಂದರೆ ಲೋಕಸಭೆಯಲ್ಲಿ ಇದು ೧೯೮೪-೮೯ರಲ್ಲಿ ೮.೧% ಇತ್ತು. ೧೯೫೨ ರಿಂದ ಸರಾಸರಿ ೬% ಮಾತ್ರ. ಕರ್ನಾಟಕದಲ್ಲಿನ ವಿಧಾನ ಸಭೆಯಲ್ಲಿ ೧೯೫೨ ರಿಂದ ಸರಾಸರಿ ೪.೬% ಮಾತ್ರ. ೧೯೯೮ ರ ಲೋಕಸಭಾ ಚುನಾವಣೆಯಲ್ಲಿ ಮಹಿಳೆಯರು ಪಡೆದ ಪ್ರಾತಿನಿಧ್ಯ ೭.೯೬% ಮಾತ್ರ ಇದೆ. ಮಹಿಳೆಯರಿಗೆ ೧೫% ಟಿಕೆಟ್ ಹಂಚಿಕೆ ಸ್ಥಾನ ಮೀಸಲಿಡುತ್ತೇವೆಂಬ ಕಾಂಗ್ರೆಸ್ ಪಕ್ಷದ ೧೯೬೭ ರ ಠರಾವು ಬರೀ ಕಾಗದದ ಮೇಲೆ ಮಾತ್ರ ಉಳಿದಿದೆ. ಇತರ ಪಕ್ಷಗಳು ಇನ್ನೂ ಹಿಂದೆ ಬಿದ್ದಿವೆ.

ಈ ಹಿನ್ನೆಲೆಯಲ್ಲಿ ಶಾಸನಬದ್ಧ ಮೀಸಲಾತಿ ಮೂಲಕವೇ ಮಹಿಳೆಯ ಪ್ರಾತಿನಿಧ್ಯ ಹೆಚ್ಚಿಸಬೇಕೆಂಬ ಬೇಡಿಕೆ, ವಾದ, ಚಳುವಳಿ ಮತ್ತು ಪ್ರಯತ್ನಗಳು ನಡೆದಿವೆ. ಅರ್ಜೆಂಟೀನಾ ದೇಶದಲ್ಲಿ ಮಹಿಳೆಯರಿಗೆ ಶಾಸನಬದ್ಧವಾಗಿ ೩೦% ಸ್ಥಾನಗಳನ್ನು ಶಾಸನಸಭೆಗಳಲ್ಲಿ ನೀಡಲಾಗಿದೆ. ಬ್ರಿಟನ್ನಿನಲ್ಲಿ ಇತ್ತೀಚೆಗೆ ಮೀಸಲಾತಿ ವಾದಕ್ಕೆ ಬೆಂಬಲ ಹೆಚ್ಚಾಗುತ್ತಿದೆ.

ಭಾರತದಲ್ಲಿ ಸ್ಥಳೀಯ ಸರ್ಕಾರಗಳ ಮಟ್ಟದಲ್ಲಿ ಶಾಸನಬದ್ಧ ಮಹಿಳಾ ಮೀಸಲಾತಿ ಮೊದಲು ಆರಂಭವಾಯಿತು. ೧೯೮೦ರ ದಶಕದಲ್ಲಿ ಕರ್ನಾಟಕದಲ್ಲಿ ಪಂಚಾಯಿತಿ ರಾಜ್ಯ ಸಂಸ್ಥೆಗಳಲ್ಲಿ ೨೫% ಹಾಗೂ ನಗರ ಸಭೆಗಳಲ್ಲಿ ೨೦% ಮಹಿಳಾ ಮೀಸಲಾತಿ ಶಾಸನಬದ್ಧವಾಯಿತು. ಮಹಾರಾಷ್ಟ್ರ, ಆಂಧ್ರ, ಪಶ್ಚಿಮ ಬಂಗಾಳ ಮುಂತಾದ ಕೆಲವು ರಾಜ್ಯಗಳಲ್ಲೂ ಈ ನೀತಿ ಆಚರಣೆಗೆ ಬಂತು. ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳಾ ಪ್ರಾತಿನಿಧ್ಯವನ್ನು ಮೀಸಲಾತಿಯ ಮೂಲಕ ರಾಷ್ಟ್ರದಾದ್ಯಂತ ತರಲು ಸಂವಿಧಾನ ತಿದ್ದುಪಡಿ ಮಾಡುವ ಪ್ರಯತ್ನ ೧೯೮೯ ರಲ್ಲಿ ರಾಜೀವ್‌ಗಾಂಧಿ ಸರ್ಕಾರ ಆರಂಭಿಸಿತು. ಲೋಕಸಭೆಯಲ್ಲಿ ಗೆದ್ದ ಈ ಪ್ರಯತ್ನ ರಾಜ್ಯಸಭೆಯಲ್ಲಿ ಸೋತಿತು. ತಕ್ಷಣವೇ

ಚುನಾವಣೆ ಬಂದಿದ್ದರಿಂದ ಕೈ ಬಿಟ್ಟ ಈ ಪ್ರಯತ್ನ ೧೯೯೨-೯೩ ರಲ್ಲಿ ಸಫಲವಾಗಿ ಶ್ರೀ ನರಸಿಂಹ ರಾಯರ ಸರ್ಕಾರ ಸುಸೂತ್ರವಾಗಿ ರೂಪಿಸಿ ಬೆಂಬಲಪಡೆದು ಜಾರಿಗೊಳಿಸಿದ ಸಂವಿಧಾನದ ೭೩ ಮತ್ತು ೭೪ ನೇ ತಿದ್ದುಪಡಿ ರೂಪ ಪಡೆಯಿತು. ೭೩ ನೇ ತಿದ್ದುಪಡಿಯಲ್ಲಿ ಗ್ರಾಮೀಣ ಪಂಚಾಯಿತಿ ರಾಜ್ಯ ಸಂಸ್ಥೆಗಳಲ್ಲಿ ಮತ್ತು ೭೪ ನೇ ತಿದ್ದುಪಡಿಯಲ್ಲಿ ನಗರ ಸಭೆಗಳಲ್ಲಿನ ಸಾಮಾನ್ಯ ಹಾಗೂ ಮೀಸಲಾತಿ ವರ್ಗದ ಸ್ಥಾನಗಳಲ್ಲಿ ಶೇ. ೩೩.೩ ರಷ್ಟನ್ನು ಮಹಿಳೆಯರಿಗಾಗಿ ರಾಷ್ಟ್ರದಾದ್ಯಂತ ಮೀಸಲಿಡಲಾಯಿತು. ರಾಜ್ಯಗಳ ಸ್ಥಳೀಯ ಸರ್ಕಾರ ಕಾನೂನುಗಳು ಈ ದಿಸೆಯಲ್ಲಿ ರೂಪಗೊಂಡವು.

ಮಹಿಳಾ ಮೀಸಲಾತಿಯ ಈ ಪ್ರಯತ್ನ ಕ್ರಾಂತಿಕಾರಕ ಪ್ರಭಾವ ಮತ್ತು ಫಲ ನೀಡಿತು. ಕರ್ನಾಟಕದ ೧೯೯೩ ರ ಪಂಚಾಯಿತಿರಾಜ್ಯ ಕಾನೂನಿನಲ್ಲಿ ಮಹಿಳೆಯರಿಗೆ ೩೩.೩% ಮೀಸಲಾತಿ ಮಾತ್ರ ನೀಡಿದ್ದರೂ ಮಹಿಳೆಯರ ಪ್ರಾತಿನಿಧ್ಯ ಶೇಕಡವಾರು ಇನ್ನೂ ಹೆಚ್ಚಾಯಿತು. ಇಡೀ ಕರ್ನಾಟಕದಲ್ಲಿ ಇದು ಜಿಲ್ಲಾ ಪಂಚಾಯತಿಯಲ್ಲಿ ೩೬.೫% ತಾಲೂಕು ಪಂಚಾಯತಿಯಲ್ಲಿ ೪೦.೨% ಹಾಗೂ ಗ್ರಾಮ ಪಂಚಾಯತಿಗಳಲ್ಲಿ ೪೩.೮% ಮಟ್ಟ ತಲುಪಿತು. ನಗರ ಸಭೆಗಳಲ್ಲೂ ಇದೇ ಪರಿಸ್ಥಿತಿ ಕಂಡುಬಂತು.

## ಶಾಸನಸಭೆ ಮತ್ತು ಲೋಕಸಭೆಯಲ್ಲಿ ಮಹಿಳಾ ಮೀಸಲಾತಿ

ಈ ಹಿನ್ನೆಲೆಯಲ್ಲಿ ಲೋಕಸಭೆ ಮತ್ತು ರಾಜ್ಯ ವಿಧಾನಸಭೆಗಳಲ್ಲೂ ಮಹಿಳಾ ಮೀಸಲಾತಿಗಾಗಿ ಬೇಡಿಕೆ ಮತ್ತು ಚಳುವಳಿಗಳು ಆರಂಭವಾದವು. ಕರ್ನಾಟಕ ಸರ್ಕಾರವೇ ಇದರ ಬಗ್ಗೆ ನಿರ್ಣಯ ಮಾಡಿ ವಾದಮಾಡಿತು. ಬಹುತೇಕ ರಾಜಕೀಯ ಪಕ್ಷಗಳು ಅಧಿಕೃತವಾಗಿ ಇದರ ಪರವಾದವು. ಬಹುತೇಕ ರಾಷ್ಟ್ರೀಯ ನಾಯಕರುಗಳೂ ಇದಕ್ಕೆ ಬೆಂಬಲ ಸೂಚಿಸಿದರು. ೧೯೯೬ರ ಸೆಪ್ಟೆಂಬರ್ ತಿಂಗಳಲ್ಲಿ ಅಂದಿನ ಯುನೈಟೆಡ್ ಫ್ರಂಟ್ ಸರ್ಕಾರ ಈ ದಿಸೆಯಲ್ಲಿ ಒಂದು ಸಂವಿಧಾನ ತಿದ್ದುಪಡಿ ಮಸೂದೆಯನ್ನು ಮಂಡಿಸಿತು. ಗೀತಾ ಮುಖರ್ಜಿಯವರ ಅಧ್ಯಕ್ಷತೆಯ ವಿವಿಧ ಪಕ್ಷ ಪ್ರತಿನಿಧಿಗಳನ್ನು ಹೊಂದಿದ್ದ ಒಂದು ಸಂಸದೀಯ ಜಂಟಿ ಸಮಿತಿ ಇದನ್ನು ಪರಿಶೀಲಿಸಿ ಪರಿಷ್ಕರಿಸಿತು. ೧೯೯೮ ರ ಆದಿ ಭಾಗದಲ್ಲಿ ಲೋಕಸಭೆ ವಿಸರ್ಜನೆಗೊಂಡು ಹೊಸ ಚುನಾವಣೆ ನಡೆದು ಬಿಜೆಪಿ. ನೇತೃತ್ವದ ಸಮ್ಮಿಶ್ರ ಸರ್ಕಾರ ಅಧಿಕಾರ ವಹಿಸಿಕೊಂಡಾಗ ಹೊಸ ಮಸೂದೆ ಅವಶ್ಯಕವಾಯಿತು. ಒಂದು ಹೊಸ ಮಸೂದೆ ಅಂದರೆ "೮೪ ನೇ ಸಂವಿಧಾನ (ತಿದ್ದುಪಡಿ) ಮಸೂದೆ ೧೯೯೮" ತಯಾರಾಗಿ ೧೯೯೮ ರ ಜುಲೈ ೧೩ ರಂದು ಇದನ್ನು ಮಂಡಿಸಲು ವಿಫಲ ಪ್ರಯತ್ನ ನಡೆಯಿತು.

## ೮೪ ನೇ ಸಂವಿಧಾನ ತಿದ್ದುಪಡಿ ಮಸೂದೆ ೧೯೯೮

ಈ ಮಸೂದೆಯು ಸಂವಿಧಾನ ತಿದ್ದುಪಡಿ ಮಾಡುವ ಮೂಲಕ ಮಹಿಳೆಯರಿಗೆ ಸಂಸತ್ತು ಮತ್ತು ರಾಜ್ಯಶಾಸನ ಸಭೆಗಳಲ್ಲಿ ೩೩.೩೩% ಸ್ಥಾನ ಮೀಸಲಾತಿಯನ್ನು

ಮಾಡಲು ಬಯಸಿತು. ಈ ಮೀಸಲಾತಿ ಸಾಮಾನ್ಯ ಹಾಗೂ ಮೀಸಲು ವರ್ಗದ ಸ್ಥಾನಮಾನಗಳೆರಡಕ್ಕೂ ಅನ್ವಯಿಸುತ್ತದೆ. ಮಹಿಳಾ ಮೀಸಲಾತಿ ಕ್ಷೇತ್ರಗಳನ್ನು ಚುನಾವಣೆಯಿಂದ ಚುನಾವಣೆಗೆ ಸರದಿಯ ಪ್ರಕಾರ ಬದಲಾಯಿಸುವ ಉದ್ದೇಶವೂ ಇದರಲ್ಲಿತ್ತು. ಅಲ್ಲದೇ ಮಸೂದೆಯು ಈ ಮಹಿಳಾ ಮೀಸಲಾತಿಯನ್ನು ೧೫ವರ್ಷಗಳ ಕಾಲಮಿತಿಗೆ ಒಳಪಡಿಸಿ ಸಂವಿಧಾನದ ತಿದ್ದುಪಡಿಯ ಮೂಲಕವೇ ೧೫ ವರ್ಷದ ನಂತರ ಮುಂದುವರಿಸಬಹುದೆಂದು ನಿಲುವು ತಾಳಿತ್ತು.

## ಮಸೂದೆಗೆ ವಿರೋಧ

೯ ರಾಜಕೀಯ ಪಕ್ಷಗಳಲ್ಲಿ ೫ ಪ್ರಮುಖ ಪಕ್ಷಗಳು ಇದರ ಪರವಾಗಿ ಅಧಿಕೃತವಾಗಿದ್ದರೂ ಈ ಮಸೂದೆಗೆ ಬೆಂಬಲ ದೊರೆಯದ್ದಿದುದು ಆಶ್ಚರ್ಯದ ಸಂಗತಿ. ಕಾರಣವೆಂದರೆ, ಮೊದಲನೆಯದಾಗಿ ನಮ್ಮ ರಾಜಕೀಯ ಪಕ್ಷಗಳಲ್ಲಿನ ಆಂತರಿಕ ಪ್ರಜಾಪ್ರಭುತ್ವದ ಕೊರತೆ. ಇದರಿಂದಾಗಿ ಪಕ್ಷಗಳ ಅಧಿಕೃತ ನಿಲುವುಗಳು ಸರ್ವ ಮಾನ್ಯವಾಗಿಲ್ಲದಿರುವುದು. ಎರಡನೆಯದಾಗಿ ಭಾರತದ ಇಂದಿನ ರಾಜಕೀಯ ಚೌಕಟ್ಟು ಮತ್ತು ಸಂಸ್ಕೃತಿಗಳು ಪುರುಷ ಪ್ರಧಾನವಾಗಿರುವುದು. ಇಂದಿನ ೧೯೯೮ ರ ೫೪೫ ಸದಸ್ಯರಿರುವ ಲೋಕಸಭೆಯಲ್ಲಿ ಮಹಿಳೆಯರು ಕೇವಲ ೪೩ ಅಂದರೆ ೭.೯% ಇರುವುದು. ಮೀಸಲಾತಿಯ ಮೂಲಕ ಇದು ೩೩.೩% ಅಂದರೆ ೧೮೧ ಕ್ಕೆ ಏರುವುದರಿಂದ ಅನೇಕ ಇಂದಿನ ಪುರುಷ ಸದಸ್ಯರಿಗೆ ಪುನಃ ಸ್ಥಾನ ದೊರೆಯುವುದಿಲ್ಲವೆಂಬ ಭಯ. ಮೂರನೆಯದಾಗಿ, ಇಂದಿನ ಸಮಾಜ ಮತ್ತು ರಾಜಕೀಯಗಳು ಜಾತಿ ಪ್ರಧಾನವಾಗಿದ್ದು ಮಹಿಳಾ ವಿಷಯಗಳನ್ನೂ ಮಹಿಳಾ ದೃಷ್ಟಿಗಿಂತ ಜಾತಿ ದೃಷ್ಟಿಯಿಂದಲೇ ನೋಡುವುದು. ಹಿಂದುಳಿದ ಜಾತಿದೃಷ್ಟಿ ಪ್ರಧಾನವಾದ ಮುಲಾಯಂಸಿಂಗರ ಸಮಾಜವಾದಿ ಮತ್ತು ಲಲ್ಲೂ ಪ್ರಸಾದ್ ಯಾದವ್‌ರವರ ರಾಷ್ಟ್ರೀಯ ಜನತಾದಳ ಪಕ್ಷಗಳು ಕೇವಲ ೩೭ ಸದಸ್ಯರುಗಳನ್ನು ಹೊಂದಿದ್ದರೂ ವಿಪರೀತವಾದ ಆಕ್ರಮಣಕಾರೀ ಮತ್ತು ದೈಹಿಕವಾಗಿ ಮಹಿಳಾ ಮೀಸಲಾತಿ ಮಸೂದೆಯನ್ನು ತಡೆ ಹಿಡಿಯುವ ಮಾರ್ಗ ಹಿಡಿದವು. ಅಲ್ಲದೆ ಈ ನಾಯಕರುಗಳು ಇತರ ಎಲ್ಲಾ ಪಕ್ಷಗಳಲ್ಲಿನ ಹಿಂದುಳಿದ ಜಾತಿ ಸದಸ್ಯರುಗಳನ್ನೂ ಹಾಗೂ ಮುಸ್ಲೀಮರನ್ನು ಇದರ ವಿರುದ್ಧ ಎತ್ತಿ ಕಟ್ಟಿದವು. ಒಟ್ಟು ೧೯೨ ರಷ್ಟಿರುವ ಹಿಂದುಳಿದ ಜಾತಿ ಸಂಸದರು ಎಲ್ಲಾ ಪಕ್ಷಗಳೊಳಗೂ ಈ ಮಸೂದೆಯ ವಿರುದ್ಧ ಧ್ವನಿ ಎತ್ತಿ ಮಹಿಳಾ ಮೀಸಲಾತಿಯ ೩೩.೩% ಒಳಗೇ ಹಿಂದುಳಿದ ಜಾತಿ ಆಧಾರಿತ ಮೀಸಲಾತಿ ಹಾಗೂ ಮುಸ್ಲೀಂ ಧರ್ಮ ಆಧಾರಿತ ಮೀಸಲಾತಿ ಸೇರಿಸಬೇಕೆಂಬ ವಾದಗಳನ್ನು ಮುಂದಿಟ್ಟರು. ರಾಜಕೀಯ ಪಕ್ಷಗಳ ಅಧಿಕೃತ ನಿಲುವುಗಳು ಅಲ್ಲಾಡಿದವು. ಈ ಮಸೂದೆಯ ಪರವಾಗಿದ್ದ ಎಲ್ಲಾ ಪಕ್ಷ ನಾಯಕರುಗಳು ಕಾಂಗ್ರೆಸ್ ಮತ್ತು ಜೆಡಿ ಸೇರಿದಂತೆ ಹಿಂದೇಟು ಹೊಡೆಯಲು ಆರಂಭಿಸಿದರು. ಮಸೂದೆ ಮಂಡಿಸಿದ ಬಿಜೆಪಿ ಪಕ್ಷವೂ ಕೊನೆಗೆ ಈ ಮಸೂದೆಯನ್ನು ತಕ್ಷಣದಲ್ಲಿ ಪುನಃ ಮಂಡಿಸುವುದಿಲ್ಲವೆಂಬ ನಿಲುವನ್ನು ತಳೆಯಿತು.

ಮಹಿಳಾ ವಿಷಯದೊಡನೆ ಜಾತಿ ವಿಚಾರವನ್ನು ಬೆರೆಸಿ ಮಹಿಳಾ ವಿಷಯವನ್ನೂ ಅತಂತ್ರಗೊಳಿಸುವ ತಂತ್ರ ಇಲ್ಲಿ ಇಂದಿನ ಪುರುಷ ಮತ್ತು ಜಾತಿ ಪ್ರಧಾನವಾದ ರಾಜಕೀಯದ ಅಸ್ತ್ರವಾಗಿದೆ. ಮಹಿಳೆ ಒಂದು ತನ್ನದೇ ಆದ ವರ್ಗ. ಅದು ಹಿಂದುಳಿದು ಶೋಷಿತವಾಗಿದೆ. ಅದಕ್ಕಾಗಿ ಮಹಿಳಾ ಮೀಸಲಾತಿ ಅದಕ್ಕೆ ಶಕ್ತಿ ಸಂಚಯಿಸುವ ಒಂದು ಪ್ರಬಲ ಅಗತ್ಯ ಮತ್ತು ಅನಿವಾರ್ಯ ಪ್ರಯತ್ನ. ಈ ವರ್ಗಕ್ಕೆ ಧ್ವನಿ ಮತ್ತು ಶಕ್ತಿ ದೊರಕಿಸುವುದು ಇಂದಿನ ಸಮಸ್ಯೆ ಮತ್ತು ಅವಶ್ಯಕತೆ. ಈ ವರ್ಗದ ಪ್ರಬಲ ಪ್ರಾತಿನಿಧ್ಯ ಅವಶ್ಯಕ. ಇದನ್ನು ಯಾರೇ ಒದಗಿಸಿದರೂ ಅದು ಪ್ರಶಂಸಾರ್ಹ. ಬರೀ ಪಟ್ಟಣದ ಮಹಿಳೆಯರು ಅದರಲ್ಲೂ ಜೆಡಿ ಅಧ್ಯಕ್ಷ ಶರದ್ ಯಾದವ್‌ರವರು ಮೂದಲಿಸಿದಂತೆ "ಬಾಲ್‌ಕಟೀ ಮಹಿಳೆ" ಅಥವಾ ಕೂದಲು ತುಂಡು ಮಾಡಿಕೊಂಡಿರುವ ಅಥವಾ "ಬಾಪ್‌ಕಟ್" ಮಹಿಳೆಯರು ಮುಂಚೂಣಿಗೆ ಬಂದು ಬಿಡುತ್ತಾರೆ. ಅದಕ್ಕಾಗಿ ಜಾತಿ ಆಧಾರಿತ ಮೀಸಲಾತಿಯನ್ನು ಮಹಿಳಾ ಮೀಸಲಾತಿಯಲ್ಲಿ ಸೇರಿಸಬೇಕೆಂಬುದು ಒಂದು ಒಡೆದು ಆಳುವ ಪುರುಷ ಕುತಂತ್ರ ನೀತಿ. ಧ್ವನಿ ಇಲ್ಲದ ಜಾತಿ ಆಧಾರಿತ ಮಹಿಳಾ ಪ್ರತಿನಿಧಿಗಳು ಇದ್ದರೂ ಒಂದೇ ಇಲ್ಲದಿದ್ದರೂ ಒಂದೆ. ಆದ್ದರಿಂದ ಮೊದಲ ೧೫ ವರ್ಷವಾದರೂ ಈ ೮೪ ನೇ ತಿದ್ದುಪಡಿಯನ್ನು ಇರುವಂತೆ ಅನುಮೋದಿಸಿ ನಂತರ ಅವಶ್ಯಕವಾದರೆ ಜಾತಿ ಆಧಾರಿತ ಉಪ ಮೀಸಲಾತಿಯನ್ನು ಮಹಿಳಾ ಮೀಸಲಾತಿ ಒಳಗೇ ತರುವುದು ಒಳ್ಳೆಯದು ಹಾಗೂ ಸಂವಿಧಾನಿಕವಾಗಿ ಸಾಧ್ಯ. ಆದರೆ ಧರ್ಮಾಧಾರಿತ ಅಂದರೆ ಮುಸ್ಲೀಂ ಮಹಿಳೆಯರಿಗೆ ಪ್ರತ್ಯೇಕ ಮೀಸಲಾತಿ ತರಬೇಕೆಂಬುದು ನಮ್ಮ ಧರ್ಮ ನಿರಪೇಕ್ಷಿತ ಸಂವಿಧಾನಕ್ಕೆ ವಿರೋಧವಾಗುತ್ತದೆ.

## ಉಪಸಂಹಾರ

ಮಹಿಳಾ ವಿಷಯ ಮತ್ತು ಸಮಸ್ಯೆ ಇತ್ತೀಚೆಗಷ್ಟೇ ಪ್ರಾಧಾನ್ಯ ಪಡೆದಿದೆ. ಶತಮಾನ ಮೀರಿದ ಮಹಿಳಾಪರ ಚಳುವಳಿಯಿಂದ ಗಮನಾರ್ಹ ಹಂತ ತಲುಪಿದೆ. ಪ್ರಜಾಪ್ರಭುತ್ವ ಮತ್ತು ಮಾನವೀಯ ಹಾಗೂ ಸ್ತ್ರೀ ಹಕ್ಕು ವಿಷಯಗಳು ವಿಕಾಸಗೊಂಡಂತೆಲ್ಲಾ ಇದು ಮುಂದುವರೆಯುತ್ತದೆ. ರಾಜಕೀಯ ಒಂದು ರೆಸ್‌ಪಬ್ಲಿಕಾ ಅಥವಾ ರಿಪಬ್ಲಿಕ್ ಅಂದರೆ ಒಂದು ಜನ/ಗಣ್ಯಾವ್ಯವಹಾರ. ಆದರೆ ಈಗ ಅದು ಬರೀ ಗಣ್ಯರ ಅದರಲ್ಲೂ ಪುರುಷರ ಸ್ವತ್ತಾಗಿದೆ. ರಾಜಕೀಯುವನ್ನು ಜನರ ಹತ್ತಿರ ತರಲೂ ಅದರಲ್ಲಿ ಪುರುಷ ಪ್ರಾಧಾನ್ಯತೆಯನ್ನು ಮುರಿಯಲು, ಶೇಕಡ ೫೦ ರಷ್ಟಿರುವ ಮಹಿಳೆಯರ ಪ್ರಾತಿನಿಧ್ಯ ಹೆಚ್ಚಿಸುವುದು ಅನಿವಾರ್ಯ. ಇದುವರೆವಿಗೂ ಏನೇ ಮಾಡಿದರೂ ಶೇಕಡ ೧೦ ನ್ನು ಸಾಮಾನ್ಯವಾಗಿ ಮೀರದ ಈ ಪ್ರಾತಿನಿಧ್ಯವನ್ನು ಶಾಸನಬದ್ಧ ಮೀಸಲಾತಿಯ ಮೂಲಕ ಏರಿಸುವುದೊಂದೇ ಇಂದಿನ ಮಾರ್ಗವಾಗಿದೆ. ಮಹಿಳೆಯರೊಳಗೆ ಹಾಗೂ ರಾಜಕೀಯ ಪಕ್ಷಗಳೊಳಗೆ ಈ ಚರ್ಚೆ ಮುಂದುವರಿಯಬೇಕು. ಬೆಳಕು ಹೆಚ್ಚಬೇಕು. ರಾಜಕೀಯವನ್ನು, ಸಂಸದರನ್ನೂ ಮತ್ತು ಇಡೀ ಸಮಾಜವನ್ನು ಮಹಿಳಾ ವಿಷಯ ಮತ್ತು ಸಮಸ್ಯೆಗಳಿಗೆ ಸ್ಪಂದಿಸುವಂತೆ ಸೂಕ್ಷ್ಮಗೊಳಿಸಬೇಕು. ಮಹಿಳೆಯ ಸಮಸ್ಯೆಗಳಿಗೆ ಮೀಸಲಾತಿ ಸಾರ್ವಕಾಲಿಕ ಸಂಜೀವಿನಿಯೇನಲ್ಲ. ಇದು ಒಂದು ಇಂದಿನ ತಾತ್ಕಾಲಿಕ ಅವಶ್ಯಕತೆ. ಎಲ್ಲಾ ಮೀಸಲಾತಿಗಳಂತೆ ಇದೂ ಕಾಲನಿಗದಿತವಾಗಬೇಕು.

# ಮಹಿಳಾ ಮೀಸಲಾತಿ - ಒಂದು ಅಭಿಪ್ರಾಯ

ಬಿ. ಟಿ. ಲಲಿತಾ ನಾಯಕ್

ಭಾರತ ತನ್ನ ೫೧ ನೇ ಸ್ವಾತಂತ್ರ್ಯ ಸುವರ್ಣ ಮಹೋತ್ಸವವನ್ನು ಆಚರಿಸುವ ಈ ಸಂದರ್ಭದಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ ಅವಳಿಗಾಗುತ್ತಿರುವ ಮಾನಸಿಕ, ದೈಹಿಕ ಶೋಷಣೆ ಕುರಿತು ವಿವಿಧ ಮಹಿಳಾ ಸಂಘಟನೆಗಳು, ರಾಜಕೀಯ ಪಕ್ಷಗಳು, ದೊಡ್ಡ ಪ್ರಮಾಣದ ಚಳುವಳಿಯನ್ನೇ ಪ್ರಾರಂಭಿಸಿವೆ. ಇದು ನೆನ್ನೆ ಮೊನ್ನೆ ಹುಟ್ಟಿಕೊಂಡ ಹೋರಾಟವಲ್ಲ. ಕಳೆದ ಶತಮಾನದಲ್ಲಿಯೇ ಕೆಲವು ಸಮಾಜ ಸುಧಾರಕರು ಮಹಿಳೆಯನ್ನು ಸಂಕಷ್ಟದಿಂದ ಪಾರುಮಾಡಲು ತನುಮನದಿಂದ ಹೋರಾಟವನ್ನು ಹಮ್ಮಿಕೊಂಡರು.

ಇಷ್ಟಾಗಿಯೂ ಕೂಡ ಮಹಿಳೆ ಈವತ್ತಿಗೂ ಎರಡನೇ ದರ್ಜೆ ಪ್ರಜೆಯಾಗಿಯೇ ಗುರುತಿಸಲ್ಪಡುತ್ತಿರುವುದು ಏಕೆ? ಇದರ ಮೂಲ ಕಾರಣವೇನು? ಎಂಬುದನ್ನು ನಾವು ಸಾವಧಾನವಾಗಿ ಚಿಂತನೆ ಮಾಡಬೇಕಾಗಿದೆ.

ಅಸಹನೀಯ ವಾತಾವರಣದಲ್ಲಿ ಬದುಕುತ್ತಿರುವ ಮಹಿಳೆ ವಿದ್ಯಾವಂತೆಯಾಗಬೇಕು. ಸಾಮಾಜಿಕ, ರಾಜಕೀಯ, ಆರ್ಥಿಕ ಸಮಾನತೆ ಪಡೆಯಬೇಕು ಎಂದು ಹೋರಾಟ ನಡೆಸಿದಾಗ ಅವಳಿಗೆದುರಾಗುವ ತೊಡಕುಗಳು ಯಾವುವು ಎಂಬುದನ್ನು ಪರಿಶೀಲಿಸಬೇಕು.

ಇತ್ತೀಚೆಗೆ ಮಹಿಳೆಗೆ ಶಿಕ್ಷಣದ ಅವಕಾಶಗಳು ಲಭಿಸುತ್ತಿವೆ ಎಂಬುದು ಸ್ವಲ್ಪಮಟ್ಟಿಗೆ ನಿಜವಾದರೂ ಈ ಮಾತು ಬಹುಮಟ್ಟಿಗೆ ನಗರವಾಸಿಗಳಿಗೆ ಮೇಲುವರ್ಗದವರಿಗೆ ಹೆಚ್ಚಾಗಿ ಅನ್ವಯಿಸುತ್ತದೆ. ಕೆಳವರ್ಗದ ಗ್ರಾಮೀಣ ಮಹಿಳೆಯರ ಪಾಲಿಗೆ ಶಿಕ್ಷಣ ಒಂದು ಕನಸಿನ ಮಾತು.

ದೇವರು, ಮಾಟ, ಮಂತ್ರ, ತಾಯಿತ, ಬೂದಿ, ಭಸ್ಮ ಇವುಗಳ ಹೊರತು ಬೇರೆ ವಿಚಾರ ಹತ್ತಿರ ಸುಳಿಯುವುದು ಕಷ್ಟ. ಆದರೂ ಇತ್ತೀಚಿನ ಮಹಿಳಾ ಮೀಸಲಾತಿಯ ಅನುಕೂಲದಿಂದಾಗಿ ಶೇ. ೩೦ಕ್ಕೂ ಹೆಚ್ಚಿನ ಮಹಿಳಾ ಪ್ರತಿನಿಧಿಗಳು ಗ್ರಾಮ ಮಟ್ಟದಲ್ಲಿ ಆಡಳಿತದ ಚುಕ್ಕಾಣಿ ಹಿಡಿದಿದ್ದಾರೆ. ಇದು ಶುಭಸೂಚನೆ.

ಇದು ವಿಧಾನಸಭೆ, ಲೋಕಸಭೆಗಳಿಗೂ ವಿಸ್ತರಣೆಗೊಳ್ಳಬೇಕು. ಆಡಳಿತದ ಬಗ್ಗೆ ಮಹಿಳೆಯರಿಗೆ (ಪುರುಷರಿಗೂ ಸಹ) ವಿವಿಧ ಹಂತದ ತರಬೇತಿ ನೀಡಿ, ಅವರನ್ನು

ಉತ್ತಮ ಮಟ್ಟದ ರಾಜಕಾರಣದಲ್ಲಿ ತೊಡಗಿಸುವ ಪ್ರಯತ್ನ ನಡೆಯಬೇಕು.

ಆಡಳಿತದ ಅನುಭವ ಕುಳಿತಲ್ಲೇ ಬರುವಂಥದಲ್ಲ, ರಾಜಕೀಯದಲ್ಲಿ ಧುಮುಕಿಯೇ ಅದನ್ನು ಪಡೆಯಬೇಕಾಗುತ್ತದೆ-ಎಂಬ ಮಾತು ಸ್ತ್ರೀ-ಪುರುಷರಿಬ್ಬರಿಗೂ ಅನ್ವಯಿಸುತ್ತದೆ. ಅನನುಭವಿ ಪುರುಷ ರಾಜಕಾರಣ ಮಾಡಬಲ್ಲವನಾದರೆ ಅನನುಭವಿ ಮಹಿಳೆಯೂ ಮಾಡಬಲ್ಲಳು ಎಂಬುದನ್ನು ಸಮಾಜ ಅರಿತರೆ ಸಾಕು. ಮಹಿಳೆಯು ರಾಜಕೀಯದಲ್ಲಿ ಸಕ್ರಿಯವಾಗಿ ಪ್ರವೇಶಿಸಬೇಕು, ಭಾಗವಹಿಸಬೇಕು ಎಂಬುದಕ್ಕೆ ಈ ಮಹಿಳಾ ಮೀಸಲಾತಿ ಮಸೂದೆ ಒಂದು ಉತ್ತಮ ಅವಕಾಶವನ್ನು ಒದಗಿಸಿಕೊಡುತ್ತದೆ.



"ಮಹಿಳೆಯರಿಗೆ ಖಡ್ಗದ ಉಪಯೋಗವನ್ನು ಕಲಿಸುವುದಕ್ಕಿಂತಲೂ ಅವರು ನಿರ್ಭೀತರಾಗಿರುವುದನ್ನು ಕಲಿಸುವುದೇ ಮೇಲು"

(ಮೋ. ಕ. ಗಾಂಧಿ)

## ಪತ್ರಿಕಾ ಬರಹಗಳು

> ಮಹಿಳಾ ಮೀಸಲಾತಿಯನ್ನು ಕುರಿತಂತೆ ಹೆಚ್ಚು ಕಮ್ಮಿ ಎಲ್ಲ ಸಣ್ಣ ಹಾಗೂ ದೊಡ್ಡ ಪತ್ರಿಕೆಗಳೂ ಬರಹಗಳನ್ನು ಪ್ರಕಟಿಸುತ್ತಲೇ ಇವೆ. ಇಲ್ಲಿ ಕೆಲವು ಪತ್ರಿಕಾ ಬರಹಗಳ ಆಯ್ದ ಭಾಗಗಳನ್ನಷ್ಟೇ ಪ್ರಕಟಿಸಲಾಗಿದೆ.

ಇಂಡಿಯನ್ ಎಕ್ಸ್‌ಪ್ರೆಸ್ ೨೦ ಜುಲೈ ೧೯೯೮

**ನೀರಜಾ ಚೌದರಿಯವರು ತೋರಿದ ಪ್ರತಿಕ್ರಿಯೆಯ ತುಣುಕು**

ರಾಜಕೀಯ ಕುತಂತ್ರ ಮಹಿಳಾ ಮೀಸಲಾತಿ ಮಸೂದೆಯ ವಿಚಾರವಾಗಿ ಹಿಂದೆಂದಿಗಿಂತಲೂ ಕೆಳಮಟ್ಟಕ್ಕೆ ಇಳಿದಿದೆ. ಎಲ್ಲರ ಮೇಲುನೋಟದ ಕನಿಕರ ಮತ್ತು ಅನೇಕ ಸಂದರ್ಭಗಳಲ್ಲಿ ಮಾಡಿದ ಆಶ್ವಾಸನೆಗಳೆಲ್ಲವೂ ಹುಸಿಯಾಗಿ, ಈಗ ಯಾವ ರಾಜಕೀಯ ಗುಂಪಿಗೂ ವಾಸ್ತವದಲ್ಲಿ ಈ ಬಗ್ಗೆ ಕಿಂಚಿತ್ತೂ ಕಾಳಜಿ ಇಲ್ಲವೆಂಬುದು ತಿಳಿಯುತ್ತದೆ. ಲೋಕಸಭಾ ಅಧ್ಯಕ್ಷರ ಮುಂದೆ ಮಂಡಿಸಿರುವ ಈ ಮಸೂದೆಯ ಬಗ್ಗೆ ಈಗ ಉದ್ಭವವಾಗಿರುವ ರಾಜಕೀಯ ಗುಂಪುಗಳ ಅಭಿಪ್ರಾಯವನ್ನೂ ತಂಬಿ ದೊರೈಯವರು ಸಧ್ಯಕ್ಕೆ ನಿಲ್ಲಿಸುವಂತೆ ಮಾಡಿತು. ಸೋನಿಯಾ ಗಾಂಧಿಯವರೂ ಕೂಡ ಈ ವಿಚಾರವಾಗಿ ತಾವು ಮುಂದುವರಿಯುವ ಬದಲಾಗಿ ಅವರ ಗುಂಪಿನ ಮುಂದಾಳುಗಳ ಇಷ್ಟಕ್ಕೆ ಮಣಿದಿದ್ದಾರೆ.

ಇದಕ್ಕಾಗಿ ರಾಜಕೀಯ ಪಕ್ಷಗಳು ಮುಂದಿಟ್ಟ ತರ್ಕವೆಂದರೆ ಈ ಮೀಸಲಾತಿ ಎಲ್ಲವನ್ನು ಮೇಲ್ವರ್ಗದ ಜಾತಿ ಮತ್ತು ವರ್ಗದವರು, ನಗರದ ತುಟಿರಂಗು ಬಳಿದ ಹೆಂಗಸರೇ ಪಡೆದು ಕೊಂಡು ಬಿಡುತ್ತಾರೆ. ಇತರ ಹಿಂದುಳಿದ ಜನಾಂಗದ ಹೆಂಗಸರನ್ನು ಸಾಧಾರಣವಾಗಿ ಹಿಂದುಳಿದ ಜನಾಂಗದವರು ಹೆಚ್ಚಾಗಿರುವ ಜಾಗಕ್ಕೆ ನಿಲ್ಲಿಸಲು ಯತ್ನಿಸುತ್ತಾರೆ ಅಷ್ಟೆ. ಎಂಬುದಾಗಿದೆ.

ಈಗ ಹಾಲಿ ಸುಮಾರು ೨೦೦ ಜನ ಇತರೆ ಹಿಂದುಳಿದ ಜನಾಂಗದವರು ಲೋಕ ಸಭೆಯಲ್ಲಿದ್ದಾರೆ. ಅವರ ಹೆಚ್ಚುತ್ತಿರುವ ಪ್ರತಿನಿಧೀಕರಣವು ಅವರ ಬಹು ಸಂಖ್ಯಾತತೆಯನ್ನು ಹಾಗು ರಾಜಕೀಯ ಪ್ರಾಬಲ್ಯವನ್ನು ಸೂಚಿಸುವುದೇ ಆಗಿದ್ದು, ಇದು ಮೊದಲು ದಕ್ಷಿಣ ಭಾರತದಲ್ಲಿ ಆರಂಭಗೊಂಡು ನಂತರ ಉತ್ತರ ಭಾರತದಲ್ಲೂ ಹರಡಿದ್ದಾಗಿದೆ. ಆದರೆ ಅದರಲ್ಲಿ ಹೆಂಗಸರು ಯಾಕೆ ಹೆಚ್ಚಾಗಿ ಬರುತ್ತಿಲ್ಲ ಎಂದರೆ ಅಲ್ಲಿ ಅವರಿಗೆ ಅವಕಾಶಗಳನ್ನು ಕೊಡುತ್ತಿಲ್ಲ.

ಮಹಿಳಾ ಮಸೂದೆ ಕುರಿತ ವಿರೋಧಕ್ಕೆ ಇನ್ನೊಂದು ಕಾರಣ ಏನೆಂದರೆ, ಈಗಾಗಲೇ ರಾಜಕೀಯದಲ್ಲಿರುವ ಗಂಡಸರು ಅವರ ಹೆಂಡತಿ, ಮಕ್ಕಳು ಮತ್ತು ಸಹೋದರಿಯರನ್ನೇ ಮುಂದೆ ತಂದು ಈ ಮೀಸಲಾತಿಯ ಸೌಲಭ್ಯವನ್ನು ಬಳಸಿಕೊಳ್ಳುತ್ತಾರೆಂಬುದು.

ಆದರೆ ನಮ್ಮ ರಾಜಕೀಯದಲ್ಲಿ ಇದೇನು ಹೊಸದೆ? ಈ ೫೦ ವರ್ಷಗಳಿಂದ ನಡೆದು ಬಂದುದೇ ಇದಲ್ಲವೆ? ಇಂದಿರಾ ಗಾಂಧಿಯ ಮಗ, ಲಾಲ್ ಬಹದ್ದೂರ್ ಶಾಸ್ತ್ರಿಯ ಮಗ, ಚರಣ್ ಸಿಂಗರ ಮಗ, ನರಸಿಂಹರಾವ್‌ರ ಮಗ, ಬಲರಾಂ ಜಾಕಡ್‌ರ ಮಗ.... ಇವೆಲ್ಲವೂ ಅದಕ್ಕೆ ಉದಾಹರಣೆಗಳೇ ಅಲ್ಲವೆ? ಆದ್ದರಿಂದ ಇಂತಹ ಕಾರಣಗಳನ್ನು ಮುಂದಿಟ್ಟು ಮಹಿಳಾ ಮೀಸಲಾತಿ ಮಸೂದೆಯನ್ನು ತಪ್ಪಿಸಬಹುದೆ?

ಕನ್ನಡಪ್ರಭ ೧೩ ಜುಲೈ ೧೯೯೮

ಸಂಪಾದಕೀಯದಿಂದ : **ಎಲ್ಲವೂ ಬಹಿರಂಗವಾಗಲಿ**

ಸಂಸದೀಯ ಸದನಗಳಲ್ಲಿ ಮಹಿಳೆಯರಿಗೆ ಪ್ರತಿಶತ ಮೂವತ್ಮೂರು ಸ್ಥಾನಗಳನ್ನು ಕಾದಿರಿಸುವುದನ್ನು ಇದುವರೆಗೆ ಯಾವ ರಾಜಕೀಯ ಪಕ್ಷವೂ ನೇರವಾಗಿ ವಿರೋಧಿಸಿಲ್ಲ.

ಆದರೆ ಎಲ್ಲ ಪಕ್ಷಗಳಲ್ಲೂ ಈ ಸೂತ್ರದ ವಿರೋಧಿಗಳು ಇದ್ದೇ ಇದ್ದಾರೆ ಎನ್ನುವುದರಲ್ಲಿ ಅನುಮಾನ ಬೇಡ. ಅವರು ವಿರೋಧವನ್ನು ನೇರವಾಗಿ ಪ್ರಕಟಿಸುವುದಿಲ್ಲ. ಪರೋಕ್ಷವಾಗಿ ಪ್ರಕಟಿಸುತ್ತಾರೆ.

ಈಗಾಗಲೇ ಸಂಸತ್ ಸದಸ್ಯರಾಗಿರುವವರು, ಶಾಸಕರಾಗಿರುವವರ ಚಿಂತೆ ವಾಸ್ತವದಲ್ಲಿ ಮಹಿಳಾ ಮೀಸಲು ನಿಯಮದ ಸಿದ್ಧಾಂತ ಅಲ್ಲ. ಎಲ್ಲಿ ಅವರು ವೈಯುಕ್ತಿಕವಾಗಿ ಸ್ಪರ್ಧಿಸಿ ಗೆಲ್ಲಬಲ್ಲ ಕ್ಷೇತ್ರ ಮಹಿಳೆಯರಿಗೆ ಮೀಸಲಾಗುವುದೋ ಎನ್ನುವ ಭೀತಿ. ಈಗ ಪರಿಶಿಷ್ಟ ಜಾತಿ- ಪಂಗಡಗಳಿಗೆ ಮೀಸಲಾಗಿರುವ ಕ್ಷೇತ್ರಗಳಲ್ಲಿ ಆ ಸೌಲಭ್ಯದಿಂದ ವಂಚಿತರಾಗಿರುವವರಿಗೆ ಬಂದಿರುವ ಗತಿ ಅನೇಕ ಸಂಸತ್ ಸದಸ್ಯರಿಗೆ, ಶಾಸಕರಿಗೆ ಬರಲಿದೆ.

ಮಹಿಳೆಯರಿಗೆ ಮೀಸಲು ಸ್ಥಾನಗಳ ನಿಯಮವನ್ನು ಗುಂಪಿನಲ್ಲಿ ಗೋವಿಂದ ಎನ್ನುವಂತೆ ಸ್ವಾಗತಿಸುವವರೂ ಮನಸ್ಸಿನಲ್ಲೇ 'ನಮ್ಮ ಕ್ಷೇತ್ರ ಬಿಟ್ಟು' ಎಂದು ಜಪ ಮಾಡಿರಬೇಕು.

ಪ್ರಧಾನಿ ವಾಜಪೇಯಿ ಈ ವಿಧೇಯಕ ಕುರಿತಂತೆ ಸರ್ವಸಮ್ಮತ ಅಭಿಪ್ರಾಯ ರೂಪುಗೊಳ್ಳದೇ ಹೋದರೆ, ಪ್ರತಿಶತ ೩೩ರಷ್ಟು ಸ್ಥಾನಗಳನ್ನು ಮೀಸಲಿಡುವ ವಿಧೇಯಕವನ್ನೇ ಮಂಡಿಸುವುದಾಗಿ ಪ್ರಕಟಿಸಿ, ಅದಕ್ಕೆ ಸೋಮವಾರದ ಗಡುವನ್ನೂ ನೀಡಿದ್ದಾರೆ.

ಮಹಿಳೆಯರಿಗೆ ಮೀಸಲು ಸ್ಥಾನಗಳ ನಿಯಮಕ್ಕೆ ಕಾಂಗ್ರೆಸ್ ಹಾಗೂ ಕಮ್ಯೂನಿಸ್ಟರು ಬೆಂಬಲ ನೀಡಿದ್ದಾರೆ. ಬಿಜೆಪಿ ಮಂಡಿಸಿದ ವಿಧೇಯಕ ಎನ್ನುವ ಕಾರಣದಿಂದಲೇ ಅದನ್ನು ವಿರೋಧಿಸುವ ತಂತ್ರ ಇಲ್ಲವೆಂದು ಈ ಪಕ್ಷಗಳು ಸ್ಪಷ್ಟಪಡಿಸಿವೆ.

ಈಗ ವಾಜಪೇಯಿ ಆಡಿದ ಮಾತನ್ನು ಉಳಿಸಿಕೊಳ್ಳಬೇಕು. ವಚನ ನೀಡಿದಂತೆ ವಿಧೇಯಕವನ್ನು ಮಂಡಿಸಬೇಕು. ಮುಕ್ತ-ಬಹಿರಂಗ ಮತದಾನದಲ್ಲಿ ಯಾರು ಯಾವ ಕಡೆ ಇದ್ದಾರೆ ಎನ್ನುವುದಾದರೂ ಜನರಿಗೆ ಗೊತ್ತಾಗಬೇಕು.

ಪ್ರಜಾವಾಣಿ ೧೫ ಜುಲೈ ೧೯೯೮

ಸಂಪಾದಕೀಯದಿಂದ : **ಮಹಿಳೆಯೇ ದಾಳ**

ಮಹಿಳಾ ಮೀಸಲಾತಿ ಮಸೂದೆಗೆ ಮತ್ತೊಮ್ಮೆ ಅಡೆತಡೆ ಬಂದಿದೆ. ಈ ಕಾರಣದಿಂದಾಗಿ ಲೋಕಸಭೆಯ ಅಧಿವೇಶನದ ಗುಣಮಟ್ಟ ಹಿಂದೆಂದಿಗಿಂತ ಹೆಚ್ಚಾಗಿ ಕುಸಿದಿದೆ. ಮುಲಾಯಂ ಸಿಂಗ್ ಯಾದವ್ ಮತ್ತು ಲಾಲೂ ಯಾದವರ ಹಿಂಬಾಲಕರು ಸಂಸದರ ಘನತೆ, ಗೌರವ ಎಲ್ಲ ಬದಿಗಿಟ್ಟು ಮಹಿಳಾ ಮೀಸಲಾತಿ ಮಸೂದೆಯ ಮಂಡನೆಗೆ ತಡೆಯೊಡ್ಡಿದ್ದಾರೆ.

ಸಂಸತ್ತಿನ ರಾಜಕೀಯ ಮೇಲಾಟದಲ್ಲಿ ಹೊಸ ಧ್ರುವೀಕರಣ ಸ್ಪಷ್ಟವಾಗಿ ಕಾಣುತ್ತಿದೆ. ಮಹಿಳೆಯರನ್ನು 'ವೋಟಿನ ಬ್ಯಾಂಕ್'ಗಳಾಗಿ ನೋಡುವವರ ಒಂದು ಗುಂಪು : ಹಿಂದುಳಿದವರನ್ನು 'ವೋಟಿನ ಬ್ಯಾಂಕ್'ಗಳಾಗಿ ನೋಡುವವರ ಇನ್ನೊಂದು ಗುಂಪು. ಆಳುವ ಪಕ್ಷ ಯಾವುದೇ ಇರಲಿ, ತಾನೇ ಮೀಸಲಾತಿ ಕಾನೂನನ್ನು ರಚಿಸಿದ್ದೆಂದು ಹೇಳಿಕೊಂಡು ಮಹಿಳೆಯರ ವೋಟಿನ ಬ್ಯಾಂಕ್‌ಗೆ ಲಗ್ಗೆ ಹಾಕುವ ಹವಣಿಕೆಯಲ್ಲಿರುತ್ತದೆ. ಅದನ್ನು ವಿರೋಧಿಸುವವರು ಹಿಂದುಳಿದ ವರ್ಗಗಳ ವೋಟಿನ ಬ್ಯಾಂಕಿನ ಮೇಲೆ ಕಣ್ಣಿಟ್ಟಿರುತ್ತಾರೆ. ಹಿಂದೆ ದೇವೇಗೌಡರ ಮುಂದಾಳತ್ವದ ರಾಷ್ಟ್ರೀಯ ರಂಗ ಮಹಿಳೆಯರ ಮೀಸಲಾತಿಗೆ ಯತ್ನಿಸಿ ವಿಫಲವಾಗಿತ್ತು. ಈಗ ಸ್ವತಃ ದೇವೇಗೌಡರೇ ಹಿಂದುಳಿದ ವರ್ಗಗಳ ಮೀಸಲಾತಿಯ ಬಣಕ್ಕೆ ಸೇರಿದ್ದಾರೆ. ಅವರ ಸಂಪುಟದಲ್ಲಿ ಸಚಿವರಾಗಿದ್ದ ಮುಲಾಯಂ ಸಿಂಗ್ ಅವರಿಗೂ ಈಗ ಹೊಸ ಜ್ಞಾನ ಬಂದಿದೆ. ಮಹಿಳೆಯರಿಗೆ ಮೂರರಲ್ಲೊಂದು ಪಾಲು ಕೊಟ್ಟುಬಿಟ್ಟರೆ ಮುಂದಿನ ಚುನಾವಣೆಯಲ್ಲಿ ತಮ್ಮ ಸ್ಥಾನಗಳನ್ನೆಲ್ಲ ಎಲ್ಲಿ ಮಹಿಳೆಯರೇ ಕಸಿದುಕೊಂಡುಬಿಟ್ಟಾರೆಂಬ ಚಿಂತೆ ಬಾಧಿಸತೊಡಗಿದೆ. ಸ್ವಂತ ಪತ್ನಿಯನ್ನೇ ಮುಖ್ಯಮಂತ್ರಿಯ ಗಾದಿಯಲ್ಲಿ ಕೂರಿಸಿದ ಲಾಲೂ ಯಾದವರಿಗೂ ಈ ಭೀತಿ ಕಾಡುತ್ತಿದೆಯೆಂದರೆ ಇವರ ವಾದಸರಣಿಯಲ್ಲಿನ ಪೊಳ್ಳುತನ ಎಷ್ಟೆಂಬುದು ಗೊತ್ತಾಗುತ್ತದೆ. ಕಾಂಗ್ರೆಸ್ ಪಕ್ಷದಲ್ಲೂ ಈವರೆಗೆ ಗುಪ್ತವಾಹಿನಿಯಾಗಿದ್ದ ಮಹಿಳಾ ಮೀಸಲಾತಿ ವಿರೋಧ ಈಗ ಬಹಿರಂಗ ಕಾಣತೊಡಗಿದೆ. ಮಂಡಲ್ ಚಳವಳಿಯ ಸಂದರ್ಭದಲ್ಲಿ ಹಿಂದುಳಿದವರ ಮೀಸಲಾತಿ ಪ್ರಶ್ನೆಯನ್ನು ಕಡೆಗಣಿಸಿ ಕಹಿಯನ್ನುಂಡಿದ್ದನ್ನು ಕಾಂಗ್ರೆಸ್ ವಕ್ತಾರರು ಬಹಿರಂಗವಾಗಿಯೇ ಹೇಳುತ್ತಿದ್ದಾರೆ. ಯಾದವರ ಗದ್ದಲದ ನೆಪದಲ್ಲಿ ಮಹಿಳಾ ಮೀಸಲಾತಿ ಮಸೂದೆ ಚರ್ಚೆಗೂ ಬಾರದೆ ಮುಂದೆ ಹೋಗಿದ್ದು ಕಾಂಗ್ರೆಸ್‌ಗೆ ಅನುಕೂಲಕರವಾಗಿಯೇ ಪರಿಣಮಿಸಿದೆ.

ಎಲ್ಲ ರಾಜಕೀಯ ಪಕ್ಷಗಳೂ ಮಹಿಳೆಯರ ಬಗ್ಗೆ ಬಾಯಿಮಾತಿನ ಅನುಕಂಪ ಸೂಸುತ್ತ ಮೀಸಲಾತಿಯ ಹೆಸರಿನಲ್ಲಿ ತಂತಮ್ಮ ಬೇಳೆ ಬೇಯಿಸಿಕೊಳ್ಳಲು ನೋಡುತ್ತಿವೆ. ಹಿಂದುಳಿದವರನ್ನೇ ದಾಳವನ್ನಾಗಿ ಮಾಡಿಕೊಂಡ ರಾಜಕೀಯ ಈಗ ಸವಕಳಿಯಾಗಿದೆ. ಅವರಿಗೆ ಸರಕಾರಿ ಸೇವೆಯಲ್ಲಿ ಅದೆಷ್ಟೇ ಮೀಸಲಾತಿ ಕೊಟ್ಟರೂ ಸರಕಾರಿ ಉದ್ಯೋಗಗಳೇ ಕಡಿಮೆಯಾಗಿ, ಆ ರಾಜಕೀಯ ತನ್ನ ವರ್ಚಸ್ಸನ್ನು ಕಳೆದುಕೊಂಡಿದೆ. ಈಗ ಮಹಿಳೆಯರೇ ದಾಳಗಳಾಗಿದ್ದಾರೆ.

ಸುಧಾ ೧೯ ಜುಲೈ ೧೯೯೮

ಸಂಪಾದಕೀಯದಿಂದ : **ಮೀಸಲಾತಿಯ ಮಸಲತ್ತು**

ಆಗಿನ ಸಂಯುಕ್ತರಂಗ ಸರ್ಕಾರದಲ್ಲೇ ಡಿ. ಎಂ. ಕೆ ಸಮಾಜವಾದಿ ಪಕ್ಷ ಮತ್ತಿತರ ಸಣ್ಣಪುಟ್ಟ ರಾಜಕೀಯ ಪಕ್ಷಗಳ ಹೊರತು ಪ್ರಮುಖ ಪಕ್ಷಗಳಲ್ಲಿ ವಿಧೇಯಕದ ಬಗ್ಗೆ ಸರ್ವಸಮ್ಮತಿ ಇತ್ತು. ಆದಾಗ್ಯೂ ವಿಧೇಯಕ ಕಾನೂನು ಆಗದೆ ಮುಂದಕ್ಕೆ ಹೋಯಿತು. ಈಗ ಪ್ರಸ್ತುತ ಅಧಿವೇಶನದಲ್ಲಿ ವಿಧೇಯಕ ಮಂಡನೆ ಖಾತ್ರಿ ಎನ್ನುವಷ್ಟರಲ್ಲಿ ಮತ್ತೆ ಮುಂದಕ್ಕೆ ಹೋಗಿರುವುದು ಒಂದು ವಿಘ್ನಕಾರಿ ಬೆಳವಣಿಗೆಯೇ ಸರಿ. ನಿಮ್ನ ವರ್ಗ, ಪರಿಶಿಷ್ಟ ವರ್ಗಗಳಲ್ಲದೆ ಸಮಾಜದ ಇತರ ಹಿಂದುಳಿದ ವರ್ಗಗಳಿಗೂ ಶೇಕಡ ಮುವತ್ಮೂರರಲ್ಲಿ ಒಂದು ಪಾಲು ನೀಡಬೇಕೆಂಬ ಬೇಡಿಕೆಯಲ್ಲಿ ಯಾವುದೇ ರಾಜಕೀಯ ತರ್ಕವೂ ಕಂಡುಬರುತ್ತಿಲ್ಲ. ಕಳೆದ ಎರಡು ಮೂರು ದಶಕಗಳಲ್ಲಿ ಈ ಇತರೆ ಹಿಂದುಳಿದ ವರ್ಗದವರು ಸಂಸತ್ತು, ಶಾಸನಸಭೆಯೂ ಸೇರಿದಂತೆ ಹಲವಾರು ರಾಜಕೀಯ ಪಕ್ಷಗಳ ವೇದಿಕೆಗಳಲ್ಲೂ ಪ್ರಾತಿನಿಧ್ಯ ಪಡೆಯುತ್ತಿದ್ದಾರೆ. ಇಲ್ಲೆಲ್ಲ ಇವರ ದನಿಯ ಪ್ರಭಾವ ಕೇಳಿಬರುತ್ತಿದೆ. ಪರಿಸ್ಥಿತಿ ಹೀಗಿರುವಾಗ ಮನಸ್ಸಿದ್ದಲ್ಲಿ ಮೀಸಲಾತಿ ಇಲ್ಲದೆಯೂ ಇತರ ಹಿಂದುಳಿದ ವರ್ಗಗಳಿಗೆ ಅವಕಾಶ ಕಲ್ಪಿಸುವುದು ರಾಜಕೀಯ ಪಕ್ಷಗಳಿಗೆ ಒಂದು ದೊಡ್ಡ ಸಮಸ್ಯೆಯಾಗಬಾರದು. ಆದರೆ ಮನಸ್ಸು ಮಾಡುವುದೇ ಇಲ್ಲಿ ದೊಡ್ಡ ಸಮಸ್ಯೆ. ಮೀಸಲಾತಿ ಮಸೂದೆ ಶಾಸನವಾದಲ್ಲಿ ಲೋಕಸಭೆಯ ಅನೇಕ ಮಂದಿ ಪುರುಷ ಸದಸ್ಯರು ತಮ್ಮ ಕ್ಷೇತ್ರಗಳನ್ನು ಮಹಿಳೆಯರಿಗೆ ಒಪ್ಪಿಸಬೇಕಾಗುತ್ತದೆ ಎಂದೇ ಈ ಮಂದಿ ಮನಸ್ಸು ಮಾಡದೇ ಒಂದಲ್ಲ ಒಂದು ತೊಡಕು ತರುತ್ತಿದ್ದಾರೆ. ಇದಕ್ಕೆ ಯಾವ ಪಕ್ಷವೂ ಹೊರತಲ್ಲ.

ಹಾಲಿ ಮುಲಾಯಂ ಸಿಂಗ್ ಯಾದವ್ ಅವರು ಮುಂದಿಟ್ಟಿರುವ ಹೊಸ ಬೇಡಿಕೆಯೆಂದರೆ ಮೀಸಲಾತಿ ಸೌಲಭ್ಯವನ್ನು ಶೇಕಡಾ ಮೂವತ್ಮೂರರಿಂದ ಹದಿನೈದಕ್ಕೆ ಇಳಿಸುವುದು. ಇದಕ್ಕೆ ಉಳಿದ ಪಕ್ಷಗಳ ಪ್ರತಿಕ್ರಿಯೆ ತಿಳಿದು ಬಂದಿಲ್ಲ. ಮೀಸಲಾತಿ ಜಾರಿಗೆ ಬಂದಲ್ಲಿ ಪುರುಷ ಸದಸ್ಯರು ತಮ್ಮ ಕ್ಷೇತ್ರಗಳನ್ನುಕಳೆದುಕೊಳ್ಳುವ ಭಯ ನಿವಾರಿಸಲು ಕ್ಷೇತ್ರಗಳನ್ನು ಪುನರ್ವಿಂಗಡಿಸಿ ಲೋಕಸಭೆಯ ಸ್ಥಾನಗಳ ಸಂಖ್ಯೆ ಹೆಚ್ಚಿಸಬೇಕೆಂದು ಕಾಂಗ್ರೆಸ್ ಪಕ್ಷ ಹಿಂದೊಮ್ಮೆ ಸಲಹೆ ಮಾಡಿತ್ತು. ಇತರೆ ಹಿಂದುಳಿದ ವರ್ಗಗಳಿಗೆ ಇಂತಿಷ್ಟು ಸ್ಥಾನವಿರಬೇಕೆಂಬ ಮುಲಾಯಂ ಬೇಡಿಕೆಯಲ್ಲಿ ತಮ್ಮ ರಾಜಕೀಯ ಬೇಳೆ

ಬೇಯಿಸಿಕೊಳ್ಳುವ ಹುನ್ನಾರ ಸ್ಪಷ್ಟ. ಮಹಿಳೆಯೇ ಅಧ್ಯಕ್ಷೆಯಾಗಿರುವ ಕಾಂಗ್ರೆಸ್ ಪಕ್ಷವಂತೂ ಶೇಕಡ ಮೂವತ್ಮೂರು ಮೀಸಲಾತಿ ಬೇಕೆಂಬ ಮಹಿಳಾ ಸಂಘಟನೆಗಳ ಜೊತೆ ದನಿಗೂಡಿಸಿದೆ. ಆದರೂ ಜುಲೈ ಹತ್ತರ ಸಭೆಯಲ್ಲಿ ಈ ಬೇಡಿಕೆಗೆ ಯಶಸ್ಸು ಸಿಗುವುದೆಂದು ಖಂಡಿತವಾಗಿ ಹೇಳಲಿಕ್ಕೆ ಬರುವುದಿಲ್ಲ. ಏಕೆಂದರೆ ಮಹಿಳಾ ಮೀಸಲಾತಿ ವಿಷಯದಲ್ಲಂತೂ ಒಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು ಗಾದೆ ದಿಟವಾಗಿರುವಂತೆ ತೋರುತ್ತಿದೆ.

ದಿ ಹಿಂದೂ ೧೬ ಜುಲೈ ೧೯೯೮

ಸಂಪಾದಕೀಯದಿಂದ : **ವಿವರಣೆಗೆ ದಕ್ಕದ ನಡೆ**

ಬಿಜೆಪಿ, ಕಾಂಗ್ರೆ ಹಾಗೂ ಇನ್ನಿತರ ಎಡಪಂಥಗಳೂ ಒಳಗೊಂಡಂತೆ ಹಲವು ಪಕ್ಷಗಳು ತಮ್ಮ ಚುನಾವಣಾ ಪ್ರಣಾಳಿಕೆಗಳಲ್ಲಿ ಮಹಿಳಾ ಮೀಸಲಾತಿ ಬಿಲ್ಲನ್ನು ಅದು ಈಗಿರುವಂತೆಯೇ ಜಾರಿಗೊಳಿಸುವ ಭರವಸೆಯನ್ನಿತ್ತಿದ್ದವು. ಈ ಎಲ್ಲ ಪಕ್ಷಗಳೂ ಈ ಮಾತಿಗೆ ಬದ್ಧವಿರುವುದು ನಿಜವೇ ಆದರೆ, ಪಾರ್ಲಿಮೆಂಟಿನಲ್ಲಿ ಒಂದಾಗಿ ಧ್ವನಿಗೂಡಿಸಿ ಮಹಿಳಾ ಮೀಸಲಾತಿ ಬಿಲ್ ಪಾಸ್ ಆಗುವಂತೆ ಮಾಡುವುದೇನೂ ಕಷ್ಟದ ಕೆಲಸವಲ್ಲ. ಹೀಗಿರುವಾಗ ಬಿಲ್ ಮಂಡನೆಗೊಳ್ಳುವುದೇ ದೊಡ್ಡ ಸಮಸ್ಯೆಯಾಗಿ ಇಡೀ ಪ್ರಸಂಗವನ್ನೇ ಅನಿರ್ದಿಷ್ಟವಾಗಿ ಮುಂದೂಡಲಾಯಿತೆಂಬುದು ವಿವರಣೆಗೆ ದಕ್ಕದ ಮಾತು. ಮಹಿಳೆಯರಿಗೆ ಕ್ಷೇತ್ರಗಳು ಮೀಸಲಾಗುವ ಸಂಗತಿ ತಮ್ಮ ರಾಜಕೀಯ ಭವಿಷ್ಯದೊಂದಿಗೆ ತಳುಕು ಹಾಕಿಕೊಳ್ಳುತ್ತದೆಂಬ ತಮ್ಮ ಎಂ. ಪಿ. ಗಳ ಆತಂಕಗಳಿಗೆ ಎಲ್ಲ ಪಕ್ಷಗಳೂ ಸಮಾಧಾನವನ್ನು ಹೇಳದೆಯೂ ವಿಧಿಯಿಲ್ಲ. ಪಕ್ಷಗಳು ಚುನಾವಣಾ ಕಾಲದಲ್ಲಿ ತಾವು ನೀಡಿದ ಭರವಸೆಗಳಿಂದ ಹಿಂತೆಗೆಯುತ್ತಿರುವುದಕ್ಕೆ ಕಾರಣ ಇಲ್ಲಿದೆ ಎಂಬುದು ತೀರಾ ಸ್ಪಷ್ಟ.

ಇಂಡಿಯಾ ಟುಡೇ ೨೭ ಜುಲೈ ೧೯೯೮

ಸಂಪಾದಕೀಯದಿಂದ : **ಕಾರಣಗಳು ಸ್ಪಷ್ಟ**

ನಮ್ಮ ಎಲ್ಲ ಪ್ರಮುಖ ರಾಜಕೀಯ ಪಕ್ಷಗಳೂ ಮಹಿಳೆಯರು ರಾಷ್ಟ್ರದ ರಾಜಕೀಯ ಕ್ಷೇತ್ರದಲ್ಲಿ ಪ್ರಮುಖ ಪಾತ್ರವನ್ನು ವಹಿಸಬೇಕು ಎಂದು ತಮ್ಮ ಪ್ರಣಾಳಿಕೆಯಲ್ಲಿ ಹೇಳುತ್ತಾ ಬಂದಿವೆ ಎಂಬುದೇನೋ ನಿಜವೇ. ಆದರೆ ವಾಸ್ತವದಲ್ಲಿ ಮಹಿಳೆಗೆ ಅವಕಾಶಗಳನ್ನು ಕಲ್ಪಿಸುವಾಗ ಮಾತ್ರ ಅವುಗಳ ನಿಲುವುಗಳು ಸಕಾರಾತ್ಮಕವಾಗೇನೂ ಇಲ್ಲ. ಹಾಗಾಗಿಯೇ ಪಾರ್ಲಿಮೆಂಟು ಹಾಗೂ ಅಸೆಂಬ್ಲಿಗಳಲ್ಲಿ ಮಹಿಳೆಯರು ಮೀಸಲಾತಿಯ ಮಾತನ್ನು ಒತ್ತಾಯಿಸಬೇಕಾಗಿ ಬಂದದ್ದು. ರಾಜಕಾರಣಿಗಳಿಗೆ ಸದ್ಯದಲ್ಲಿ ಜಾತಿ ಎನ್ನುವುದು ಒಂದು ಪ್ರಮುಖ ದಾಳವೆನಿಸಿದೆ. ಮಹಿಳಾ ಮೀಸಲಾತಿಯ ಬಗೆಗಿನ ವಿರೋಧವನ್ನು ಸಾಮಾಜಿಕ ನ್ಯಾಯದ ಮುಸುಕಿನಲ್ಲಿ ಸಾಧಿಸುವ ಕುತಂತ್ರವನ್ನು ಈಗ ರಾಜಕಾರಣಿಗಳು ನಡೆಸತೊಡಗಿದ್ದಾರೆ. ಸಾರ್ವಜನಿಕವಾಗಿ ಮಹಿಳಾ

ಮೀಸಲಾತಿಯನ್ನೇನೂ ತಾವು ವಿರೋಧಿಸುತ್ತಿಲ್ಲವೆಂಬಂತೆ ಹೇಳುತ್ತಾ ಬೆನ್ನ ಹಿಂದಿನಿಂದ ದ್ರೋಹ ಬಗೆಯುವುದರಲ್ಲಿ ನಿರತರಾಗಿದ್ದಾರೆ. ಹಲವಾರು ರಾಜಕಾರಣಿಗಳೊಂದಿಗೆ ಮಾತುಕತೆಯಾಡಿದ ನಮ್ಮ ಪತ್ರಿಕೆಗೆ ಈ ಬಗ್ಗೆ ತೋಚಿದ್ದು ಒಂದೇ ಒಂದು ವಿವರಣೆ : 'ಕಾರಣಗಳು ತೀರಾ ಸ್ಪಷ್ಟ. ಪುರುಷರು ತಮ್ಮ ಅಧಿಕಾರದ ಸ್ಥಾನಗಳನ್ನು ಬಿಟ್ಟುಕೊಡಲು ಯಾವ ಕಾರಣಕ್ಕೂ ಸಿದ್ಧರಿಲ್ಲ'.



"ನಮಗೆ ಪ್ರತ್ಯಕ್ಷವಾಗಿ ಕಾಣುವ ನಿಸರ್ಗ ಸಹಜವಾದ ಭೇದವಲ್ಲದೆ ಹೆಣ್ಣು ಗಂಡಿನಲ್ಲಿ ನನಗೆ ಬೇರಾವ ಭೇದವೂ ಇದ್ದಂತೆ ತೋರುವುದಿಲ್ಲ."

(ಮೋ. ಕಾ. ಗಾಂಧಿ)

# 'ಅಚಲ'ದ ಗಾಯಿತ್ರಿಯೊಂದಿಗೆ ಒಂದಿಷ್ಟು ಹರಟೆ

(ಸಂ)

ಪತ್ರಿಕೆಯೊಂದನ್ನು ನಡೆಸುವುದು ಎಂದರೆ ಅದೆಂತಹ ದೊಡ್ಡ ಸವಾಲು ಎಂಬ ಅನುಭವ ಬರುವುದು ಅಂಥದೊಂದು ಹೊಣೆಯನ್ನು ಹೊತ್ತು ಕೆಲಸ ಮಾಡತೊಡಗಿದಾಗಲೇ. ಓದುಗರಾಗಿ ನಾವೆಲ್ಲರೂ ವಿವಿಧ ಪತ್ರಿಕೆಗಳ ಬಗ್ಗೆ ಟೀಕೆ ಟಿಪ್ಪಣಿಗಳನ್ನು ಮಾಡುತ್ತಲೇ ಇರುತ್ತೇವೆ. ಪತ್ರಿಕೆಯ ಆರೋಗ್ಯಕ್ಕೆ ಅರ್ಥಪೂರ್ಣ ವಿಮರ್ಶೆಗಳು ಅಗತ್ಯವೂ ಹೌದು. ಆದರೂ ಪತ್ರಿಕೆಯ ಅಳಿವು ಉಳಿವಿನ ಕಾರಣಗಳಾಗುವ ಸಂಗತಿಗಳು ಇನ್ನೂ ಹಲವಾರಿವೆ. ಆರ್ಥಿಕ ಸ್ಥಿತಿಗತಿ, ವ್ಯವಹಾರ ಜ್ಞಾನಗಳಂತಹವು ಒಂದು ಭಾಗವಾದರೆ, ತನ್ನ ಧ್ಯೇಯೋದ್ದೇಶಗಳಿಗೆ ಒಪ್ಪುವ ಬರಹಗಳನ್ನು ಸಿದ್ಧಪಡಿಸಿಕೊಳ್ಳುವ ಜವಾಬ್ದಾರಿ ಇನ್ನೊಂದು ಮುಖ್ಯ ಭಾಗ.

ಎಲ್ಲೋ ಒಂದೆರಡು ಪತ್ರಿಕೆಗಳನ್ನು ಬಿಟ್ಟರೆ ಮಿಕ್ಕಂತೆ ಸದ್ಯದ ನಮ್ಮ ಎಲ್ಲ ಸಣ್ಣ ಕನ್ನಡ ಪತ್ರಿಕೆಗಳೂ ಆರ್ಥಿಕ ಮುಗ್ಗಟ್ಟು, ಸೀಮಿತ ಮಾರುಕಟ್ಟೆ, ಚಿಕ್ಕ ವ್ಯಾಪ್ತಿಯ ನಿರ್ದಿಷ್ಟ ಓದುಗರು, ಎಲ್ಲಕ್ಕೂ ಮಿಗಿಲಾಗಿ ಸೂಕ್ತ ಬರಹಗಳ ಕೊರತೆ - ಇಂಥಾ ಎಲ್ಲ ಸವಾಲುಗಳನ್ನು ಒಟ್ಟೊಟ್ಟಿಗೆ ನಿರ್ವಹಿಸಬೇಕಾದ ಅನಿವಾರ್ಯಗಳಲ್ಲೇ ಇವೆ. ಅಂಥಾದ್ದರಲ್ಲಿ ಮಹಿಳಾ ಪತ್ರಿಕೆಯೊಂದನ್ನು ಗಂಭೀರವಾಗಿ ಪರಿಗಣಿಸಿ ತರುತ್ತೇನೆನ್ನುವವರಲ್ಲಿ ವಿಪರೀತವಾದ ನಿಷ್ಠೆ, ಅದನ್ನು ಮೀರಿದ ಸಾಹಸವೇ ಬೇಕೇನೋ. ಕನ್ನಡ ವಿಶ್ವವಿದ್ಯಾಲಯದಂತಹ ಸದೃಢವಾದೊಂದು ಸಂಸ್ಥೆ ಬೆನ್ನಿಗಿದೆ ಎಂಬ ವಿಶ್ವಾಸವಿದ್ದರೂ 'ಮಹಿಳಾ ಅಧ್ಯಯನ'ಕ್ಕೆ ಮೀಸಲಾದ ಪತ್ರಿಕೆಯೊಂದನ್ನು, ಈ ಕ್ಷೇತ್ರವು ಪ್ರಸ್ತುತದಲ್ಲಿ ನಿರೀಕ್ಷಿಸುವಷ್ಟು ಸಮರ್ಥವಾಗಿ ಸಿದ್ಧಪಡಿಸುವುದು ಸವಾಲಾದೀತೇನೋ ಎಂಬ ಆತಂಕದಲ್ಲೇ ನಾನು ಕೆಲಸ ಮಾಡಲು ತೊಡಗಿದೆ. ಹಲವಾರು ವರ್ಷಗಳ ಕಾಲ ಒಂದು ಪತ್ರಿಕೆಯನ್ನು, ಅದರಲ್ಲೂ ಮಹಿಳಾ ಪತ್ರಿಕೆಯೊಂದನ್ನು ನಡೆಸಿಕೊಂಡು ಬರುತ್ತಿರುವವರೊಂದಿಗೆ ಒಂದಿಷ್ಟು ಮಾತುಕತೆಯಾಡಿದರೆ ನನ್ನ ಕೆಲಸಗಳಿಗೆ ಒಂದಿಷ್ಟು ಉಪಯುಕ್ತ ಸೂಚನೆಗಳು ದೊರಕಬಹುದೇನೋ ಎನ್ನಿಸಿತು. ಈ ಹಿನ್ನೆಲೆಯಲ್ಲಿ 'ಅಚಲ' ಪತ್ರಿಕೆಯ ಗಾಯಿತ್ರಿಯವರನ್ನು ಸಂದರ್ಶನ ಕೊಡಿ ಎಂದು ಫೋನಿನಲ್ಲಿ ಕೇಳಿದೆ. 'ಛೇ, ಸಂದರ್ಶನ ಅಂತ ದೊಡ್ಡ ಮಾತೇನೂ ಹೇಳಬೇಡಿ. ಗೆಳತಿಯರು ಕುಳಿತು ಒಂದಿಷ್ಟು ಹರಟೆ ಹೊಡೆಯೋಣ. ಅದರಲ್ಲೇನು Formality ನಿಮಗೆ ಉಪಯೋಗವಾಗೋದಾದ್ರೆ ಅದೂ ಆಗಲಿ' ಅಂತ ಸರಳವಾಗಿ ಹೇಳಿದರು.

ಶ್ರೀಮತಿ ಎನ್. ಗಾಯಿತ್ರಿಯವರು ಮಹಿಳಾ ಚಳುವಳಿಯಲ್ಲಿ ಬೌದ್ಧಿಕವಾಗಿ ಹಾಗೂ ಕ್ರಿಯಾತ್ಮಕವಾಗಿ ತೊಡಗಿಕೊಂಡವರು. ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಕಾರ್ಯಕರ್ತರೂ 'ಅಚಲ ಪತ್ರಿಕೆ'ಯ ಸಂಪಾದಕರೂ ಆಗಿದ್ದಾರೆ. ಅಲ್ಲದೆ ಮಹಿಳಾ ಅಧ್ಯಯನವನ್ನು ಕೇಂದ್ರ ವಿಷಯವಾಗಿ ಹೊಂದಿರುವ ಹಲವಾರು ಲೇಖನಗಳನ್ನೂ, ಪುಸ್ತಕಗಳನ್ನೂ ಪ್ರಕಟಿಸಿದ್ದಾರೆ.

ಬೆಂಗಳೂರಿಗೆ ಹೋದಾಗ ಬ್ಯಾಂಕಿನಿಂದ ಆಕೆ ಮನೆಗೆ ಬರುವ ವೇಳೆ ತಿಳಿದುಕೊಂಡು ಹೋದೆ. ಅವರಿನ್ನೂ ಮನೆ ತಲುಪುವ ಮೊದಲೇ ನಾನು ಹಾಜರಾಗಿದ್ದೆ. ಅವರ ಪುಟ್ಟ ಮಗಳೊಂದಿಗೆ ಮಾತನಾಡುತ್ತಾ ಕುಳಿತಿದ್ದೆ. ಗಾಯಿತ್ರಿ ಬಂದರು. ಪಾಪ ಮುಖ ತೊಳೆದು ಕಾಫಿ ಕುಡಿಯಲೂ ಪುರಸೊತ್ತು ಕೊಡಲಿಲ್ಲವಲ್ಲ ಎಂಬ ಸಂಕೋಚ ನನಗೆ. ಆಕೆ ಮಾತ್ರ ಅದೊಂದು Problem ಅಲ್ಲವೇ ಅಲ್ಲ ಎಂಬಂತೆ ಆಚೀಚೆ ಓಡಾಡುತ್ತಾ, ನನ್ನೊಂದಿಗೆ ಅದೂ ಇದೂ ಮಾತಾಡುತ್ತ ಮುಖ ತೊಳೆದರು. ಕಾಫಿ ಮಾಡಿ ನನಗೊಂದು ಕಪ್ ಕೊಟ್ಟು, ತಾವೊಂದನ್ನು ಹಿಡಿದು 'ಈಗ ನಿಧಾನವಾಗಿ ಮಾತಾಡಬಹುದು' ಎನ್ನುತ್ತಾ ಕುಳಿತರು. ನನ್ನ ಉದ್ದೇಶಕ್ಕೆ ಸಂಬಂಧಿಸಿದ್ದೇ ಆದರೂ ಅದೊಂದು ಬಗೆಯ ಆತ್ಮೀಯವಾದ 'ಹರಟೆ' ಎರಡೂವರೆ ಗಂಟೆಗಳಿಗೂ ಮೀರಿ ಸಾಗಿಯೇ ಸಾಗಿತು. ಹರಟೆಯಷ್ಟನ್ನೂ ಸಾಂಗವಾಗಿ ಬರವಣಿಗೆಯಲ್ಲಿ ತರುವುದಾಗದಲ್ಲ. ಅದೆಷ್ಟನ್ನೋ ಬಿಟ್ಟು ಒಂದಿಷ್ಟನ್ನೇ ಕೂಡಿಸಿ ಇಲ್ಲಿ ಕೊಟ್ಟಿದ್ದೇನಷ್ಟೆ. ಉಳಿದದ್ದಷ್ಟೂ ಊಹೆಗೆ.

ಸಂ : ಗಾಯಿತ್ರಿ ಮಹಿಳಾ ಪತ್ರಿಕೆಯೊಂದನ್ನು ನಡೆಸಬೇಕು ಅನ್ನುವ ಮಾತಿಗೆ ನಿಮಗೆ ಚಾಲನೆ ದೊರೆತದ್ದು ಹೇಗೆ. ಯಾವಾಗ ಅಂತ ಒಂದಿಷ್ಟು ಕತೆ ಹೇಳಿ.

ಅಚಲಾ : ಅಚಲಾ ಪತ್ರಿಕೆಯ ವಿಷಯ ಹೇಳ್ಬೇಕೂಂದ್ರೆ ನಾನಿದ್ದ ಸಾಮಾಜಿಕ ಸನ್ನಿವೇಶವೇ ಇಂಥದೊಂದಕ್ಕೆ ನನಗೆ ಚಾಲನೆ ನೀಡಿದ್ದು. ಇದು ೮೫ರಲ್ಲಿ ಶುರುವಾಯ್ತು. ಅದಕ್ಕೆ ಮುಂಚೆ ಕೂಡ ನಾವು ಚಳುವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸ್ತಿದ್ವಿ. ಇದರ ಆರಂಭದಲ್ಲಿ ಕೆಲವರಿದ್ದರು. ಕೆಲವರು ಅನ್ನೋದಕ್ಕಿಂತ Main ಆಗಿ ನಾನು, ಇನ್ನೊಬ್ರು ಗಾಯಿತ್ರಿ ...... ನಾವಿಬ್ರೂನೂ ಅವತ್ತು ಜನವಾಹಿ ಮೇಳ ತಂಡದಲ್ಲಿ ಇದ್ದು ಅದರ ಆರಂಭದ ಕಾರ್ಯದರ್ಶಿ ಮತ್ತು ಅಧ್ಯಕ್ಷರಾಗಿದ್ದೆವು. ಅವಳು ಅಧ್ಯಕ್ಷೆಯಾಗಿದ್ದಳು. ನಾನು ಕಾರ್ಯದರ್ಶಿಯಾಗಿದ್ದೆ. ಅದಕ್ಕೆ ಮುಂಚೇನೂ CPM Women's ವಿಂಗಿನೊಳಗೆ ತುಂಬಾ active ಆಗಿ ನಾವಿದ್ವಿ. ಅದ್ಯಾವುದೋ ಒಂದು ಹಂತದಲ್ಲಿ ಅದರ ಆರ್ಗನೈಸೇಷನ್ Structure ನಲ್ಲಿ ನಮಗೆ ಕೆಲ್ಸ ಮಾಡ್ಲಿಕ್ಕಾಗ್ಲಿಲ್ಲ. ಆಮೇಲೆ ಅಖಿಲ ಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆ ಅಂತ ಕರೀತಾರೆ. ನಾವು ಅದರ ಸ್ಥಾಪನಾ ಸಮಾವೇಶಾಂತ ಒಂದು ದೊಡ್ಡ State Level Conference ಮಾಡಿ ಸಂಘಟನೇನೂ ಮಾಡಿದ್ವಿ. ಸುಮಾರು ಓಡಾಡ್ತಿದ್ವಿ. ಇಬ್ರಿಗೂ ಮದ್ವೇನೂ ಆಗಿರಲಿಲ್ಲ. ಟೈಂ ಇತ್ತು. ಮನೇಲಿ ಬೈಯಿಸ್ಕೊಂಡೂನೂ ಮಾಡ್ತಿದ್ವಿ.

ಸಂ : ಅಂದರೆ ಪತ್ರಿಕೆ ಶುರುವಾಗೋದರ ಹಿನ್ನೆಲೆಯಲ್ಲಿ ಈ ಚಳುವಳಿಗಳಿದ್ದವು.

ಅದಕ್ಕೂ ಮುಂಚಿನ ಪ್ರಶ್ನೆಗೆ ಬರಬೇಕೂಂದ್ರೆ ಅಂಥ ಚಳುವಳಿಗಳೊಂದಿಗೆ ಸೇರಿಕೊಳ್ಳಬೇಕು ಅಂತ ನಿಮಗೆ ಪ್ರೇರಣೆ ದೊರೆತದ್ದು ಹೇಗೆ ? ನಿಮಗಿವಾಗ ಅಂತಹ ಸಂದರ್ಭಗಳು ಒದಗಿ ಬಂದಿರಬೇಕಲ್ಲ. ಎಷ್ಟೋ ಸಲ ಮನಸ್ಸಿನಲ್ಲಿ ಅಂದ್ಕೊಂಡಿರ್ತಿವಿ. ಇನ್ಯಾವುದೋ ಜೀವನದ ಸಂದರ್ಭದಲ್ಲಿ ಕಳೆದುಹೋಗ್ತೀವಿ. ಹಾಗೆ ಕಳೆದು ಹೋಗದೆ ಚಳುವಳಿಗಳಲ್ಲಿ ಭಾಗವಹಿಸೋದು, ಮತ್ತದರಲ್ಲಿ ಪಾಲ್ಗೊಳ್ಳೋದು, ಅದರ ಮುಂದುವರಿಕೆಯಾಗಿ ಪತ್ರಿಕೆ ಬಂತು ಅಂದ್ರಲ್ಲ. ಆ ಮೂಲವನ್ನು ಕುರಿತು ಹೇಳಿ.

ಅಚಲಾ : ಅಲ್ಲ ಹಾಗೇಳ್ಬೇಕೂಂದ್ರೆ ನಾನು ತುಂಬಾ ಸಾಂಪ್ರದಾಯಿಕ ಕುಟುಂಬದಿಂದ ಬಂದಿರೋಳು. ಒಂಥರಾ ತುಂಬಾ ಸ್ವಾತಂತ್ರ್ಯವನ್ನೇನೂ ನಾವು ವಿದ್ಯಾರ್ಥಿ ಜೀವನದಲ್ಲಿ ಅನುಭವಿಸಿಲ್ಲ. ತುಂಬಾ ಸ್ಟ್ರಿಕ್ಟ್. ಕಾಲೇಜಲ್ಲಿ Class attend ಮಾಡ್ಲಿಲ್ಲಾಂದ್ರೆ Next ಮನೆಗೆ ಹೋಗ್ತಿದ್ವು ಒಂದು theatre ಗೂ ಹೋಗ್ತಿರಲಿಲ್ಲ. ಸಾಧ್ಯಾನೂ ಇರಲಿಲ್ಲ. ಆತರ ಹೋಗ್ಬಾರ್ದು ಅನ್ನೋ ನಂಬಿಕೆ ಕೂಡ ಇತ್ತು. ಆ ಕಟ್ಟೆಟ್ಟಲ್ಲೇ ಎಂ. ಎ. ಮುಗಿಸೋವರ್ಗೂ ಇದ್ವಿ. ಅದ್ಕೆ ಆಡ್ಕೋಳ್ತಾ ಇದ್ರೂ. ನಮ್ಮ ಮೇಷ್ಟ್ರು ಲೆಕ್ಚರರೆಲ್ಲಾ ತುಂಬಾ ಆಡ್ಕೋಳೋರು. especially ಕಾಲೇಜ್‌ಗೆ ಹೋದಾಗ್ಲೆಲ್ಲಾ ಒಂಥರಾ ಗೇಲಿ ಮಾಡೋ ತರಾನೆ ಮಾತಾಡೋರು. ಆದ್ರೆ ಹಾಗೆ ಹೋಗ್ತಾ ಇದ್ರೂ ಕೂಡಾ ನಮಗೆ ಜಿ. ಆರ್. ಅಂಥವರ ಸಂಪರ್ಕ ಇತ್ತು. ಬೌದ್ಧಿಕವಾಗಿ ನಾವು ಸಾಮಾಜಿಕ ಚಿಂತನೆಯನ್ನು ಅಳವಡಿಸ್ಕೊಂಡಿದ್ವಿ. ಆಮೇಲೆ ಅದಕ್ಕೊಂದು ಕ್ರಿಯಾರೂಪ ಕೊಡ್ಲಿಕ್ಕೆ ಸಾಧ್ಯವಾಯ್ತು. ಒಂದು ಸಾಂಪ್ರದಾಯಿಕ, ಎಷ್ಟು ಸಾಂಪ್ರದಾಯಿಕ ಕುಟುಂಬದಿಂದ ಬಂದಿದೀವಿ ನಾವೂಂದ್ರೆ ಆ ಮೂರು ದಿನ ಅನುಭವಿಸ್ತಿದ್ವಲ್ಲಾ ಅದನ್ನ ಊಹಿಸ್ಕೊಳೋಕೆ ಸಾಧ್ಯವಿಲ್ಲ. ಎಷ್ಟು ಸಿಟ್ಟಿನಿಂದಾಂದ್ರೆ ನಾನು ಚಾಪೆ ಈಸ್ಕೋಳಲ್ಲಾ. ಚಂಬು ಈಸ್ಕೊಳಲ್ಲಾ ಅಂತ ರೇಗಾಡ್ತಿದ್ದೆ. ಮತ್ತೆ ನಮ್ಮದೋ ಬಾಡಿಗೆ ಮನೆ, ತುಂಬಾ ಚಿಕ್ಕ ಮನೆ. ನಾನು ತುಂಬಾ ಕೆಳ ಮಧ್ಯಮವರ್ಗದಿಂದ ಬಂದಿದ್ದು. ನಮ್ಮ ತಂದೆ ಪ್ರೈಮರಿಸ್ಕೂಲ್ ಮೇಷ್ಟ್ರು. ಅಂದ್ರೆ ನಾಲ್ಕೂ ಜನ ಬೆಂಗಳೂರಲ್ಲಿ ಬಾಡಿಗೆ ಮನೇಲಿದ್ಕೊಂಡು ವಾಸ ಮಾಡೋದು. ನಂಗೆ ಒಂದು ದೊಡ್ಡ ಅವಮಾನದ ವಿಷಯ. ಯಾಕೇಂದ್ರೆ ಮನೇಲಿ ಗಂಡಸರಿದ್ದಾರೆ ತಂದೆ ಇದಾರೆ. ಒಂದಿಷ್ಟು ಹಾಲ್, ಇನ್ನೊಂದು ರೂಂ. ಇಂಥದರೊಳಗೆ ನೀನು ಚಾಪೆ ಇಟ್ಕೋಬೇಕು. ಚೊಂಬಿಟ್ಕೋಬೇಕು. ತಟ್ಟೆ ಇಟ್ಕೋಬೇಕು. ಆ ಅನುಭವ ಇದೆಯಲ್ಲಾ. ನನ್ನ ಯಾವ ತಂಗಿರ್ಗೂ ಈ ತರದ ಅನುಭವ ಆಗಿಲ್ಲ. ನನಗೆ ಮಾತ್ರ Basically ನಾನು Sensitive ಇರ್ಬಹುದು. ಬಿ. ಎ. ಮುಗಿಸಿ, ಕೆಲಸಕ್ಕೆ ಸೇರ್ಕೊಂಡು Evening College M. A. ಮಾಡಿದ್ದು. ಆವಾಗ First Stipend ಕೊಟ್ರು. 130 ರೂಪಾಯಿ. ನಮ್ಮ ಅಮ್ಮ ಒಂದ್ಸೊಲ್ಪ Modern. ಆದ್ರೆ ಅವರೇನೂ ಮಾಡ್ಲಿಕ್ಕಾಗ್ತಾ ಇರ್ಲಿಲ್ಲ. ಈ ಸಾಂಪ್ರದಾಯಿಕ ಕುಟುಂಬದಲ್ಲಿ ನಾವೇ ಮಾಡ್ಬೇಕು. ನಮ್ಮಮ್ಮ ನನಗೆ ಹೇಳ್ತಾಯಿದ್ರು. "ನೋಡಮ್ಮಾ ನನಗೆ ಗೊತ್ತಾಗ್ದಂಗೆ ನೀನಿರೊಕೆ ಸಾಧ್ಯವಾದ್ರೆ ನಿನಾಗಿರೋದು ನನಗೆ ಗೊತ್ತಾಗ್ಬಾರ್ದು. ಆವಾಗ ನಾನು ಮನ್ನಾ ಮಾಡ್ತೀನಿ. ನಾನೇನೂ question ಮಾಡೋಕಾಗೊಲ್ಲ. ನನ್ನ ಮಗಳು ಆದಳೋ ಇಲ್ವಾಂತ. So 130 ರೂಪಾಯಿ Stipend ಬಂದಾಗ ನಾನು

ಕೊಂಡ್ಕೊಂಡ ಮೊದಲನೆಯದು Carefree ಪ್ಯಾಕೆಟ್ಟು. ಅದು ನನ್ನ ಸ್ವಾತಂತ್ರ್ಯದ ಸಂಕೇತ. ನೋಡಿ ಸ್ವಾತಂತ್ರ್ಯ ಒಂದೊಂದು ವ್ಯಕ್ತಿಗೆ ಹ್ಯಾಗೆ Defferent ಆಗುತ್ತೆ. ನನ್ನ ಮೊದಲ ಸ್ವಾತಂತ್ರ್ಯದ ಸಂಕೇತ ಅದು. Second ಸ್ವಾತಂತ್ರ್ಯ ನಾನು ಗಾಡಿ ಕಲಿತು, ಗಾಡಿ ಬಿಡೋಕೆ ಶುರು ಮಾಡಿದ್ದು. ಇದು ಎಷ್ಟು different ಆಗಿದೆ. ಆಮೇಲೆ ನಾನು ಎಂ. ಎ. ಮಾಡುವಾಗಲೇ ಕೆಲ್ಸ ಮಾಡ್ತಿದ್ದೆ. ನಿಜವಾದ ಆರ್ಥಿಕ ಸ್ವಾತಂತ್ರ ಬಂತಲ್ಲ. ಮೊದಲಾದರೆ ನಾನು ಒಂದು ನಾಟಕ ನೋಡ್ಬೇಕಂದ್ರೆ ನನ್ನ ತಂದೇನಾ ದುಡ್ಡು ಕೇಳಕ್ಕೆ ಸಂಕೋಚ ಆಗ್ತಿತ್ತು. and National College ನಲ್ಲಿ ಎಷ್ಟೊಂದು Prize ಬಂದಿದ್ದೋ. ಆ Prize Competition ಹೋಗೋದಿಕ್ಕೆ ಬಸ್ ಚಾರ್ಜಿಗೆಲ್ಲಾ ದುಡ್ಡೇನೋ ಕೇಳಿಬಿಡ್ತಿದ್ದೆ. ಆದರೆ Prize ತೊಗೊಳ್ಳಕ್ಕೆ ಹೋಗ್ತಿರಲಿಲ್ಲ. ನಿಜವಾಗಿ ಇಂಥಾ ಆರ್ಥಿಕ ಕಷ್ಟ ಕೂಡಾ ನನಗೆ ಸಾರ್ವಜನಿಕವಾಗಿ ಕ್ರಿಯಾಶೀಲವಾಗೋದಿಕ್ಕೆ ಅಡ್ಡಿ ಆಗ್ತಿತ್ತು. ಒಂದು ಸಲ ಕೆಲ್ಸಕ್ಕೆ ಸೇರ್ಕೊಂಡ ಮೇಲೆ ಸಾಮಾಜಿಕ ಚಿಂತನೆ ಅನ್ನೋದು ಮೊದಲು ಬರೀ ತಲೆ ಒಳಗೆ ಇದ್ದದ್ದು ಕ್ರಿಯಾರೂಪಕ್ಕೆ ಬರಲು ಸಾಧ್ಯ ಆಯ್ತು. ಆಗ ನಾನು ಮೊದಲು ಕ್ರಿಯಾಶೀಲವಾಗಿ ನನ್ನನ್ನು ತೊಡಗಿಸಿಕೊಂಡದ್ದು ಸಮುದಾಯದಲ್ಲಿ. And ಅವರು ವಾರ್ತಾ ಪತ್ರಿಕೆ ನಡೆಸ್ತಿದ್ದರಲ್ಲಾ ಆ ಪತ್ರಿಕೆನಲ್ಲಿ ನಾನು ಮಾಲತಿ ಜೊತೆಗೆ ಕೆಲ್ಸ ಮಾಡ್ತಿದ್ದೆ. ಮಾಲತಿ ಜೊತೆ ಸುಮ್ನೆ Assistant ತರ ಒಂದು ಸ್ವಲ್ಪ ದಿನ ಕೆಲ್ಸ ಮಾಡಿದ್ದೆ. ಪತ್ರಿಕೆಯಲ್ಲಿ ಈತರ ಕೆಲ್ಸ ಮಾಡೋದು ಮಹಿಳಾ ಚಳುವಳಿಗೆ ಬರೋದಿಕ್ಕೆ ಮುಂಚೇನೂ ತಲೆ ಒಳಗಿತ್ತು. ಆಮೇಲೆ ನಾವು ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯಲ್ಲಿ ಕ್ರಿಯಾಶೀಲವಾಗಿಯೂ ಇದ್ವಿ. ಯಾವುದೋ ಕಾರಣಕ್ಕೆ ಇಬ್ರೂನೂ ಒಮ್ಮತದಿಂದ ಅದನ್ನು ಬಿಟ್ವಿ. ಬಿಟ್ಟ ಮೇಲೆ ನಮಗೆ ಸುಮ್ನೇ ಇರೋ ಸ್ವಭಾವಾನೇ ಅಲ್ಲ. ಒಂದು Mass Organisation ಜೊತೆ ಕೆಲಸ ಮಾಡಿದ್ವಿ. ಆ ಅನುಭವವೂ ಹೊಂದಿಕೆಯಾಗಲಿಲ್ಲ. ಈ ರಾಜಕೀಯ ಪಕ್ಷಗಳ ವಿಂಗ್‌ಗಳನ್ನು ಬಿಟ್ಟು ಸ್ವತಂತ್ರವಾಗಿ ಏನಾದರೂ ಮಾಡಬೇಕು ಅನ್ನಿಸಿತು. ನಾವು ಆತರದ ಒಂದು ರಾಜಕೀಯ ಚಿಂತನೆ - ಅಥವಾ ಇನ್ನೇನಾದರೂ ಅನ್ನಿ. ಸ್ವಾಯತ್ತ ಮಹಿಳಾ ಸಂಘಟನೆ, ಇನ್ನೇನೋ Concept ಇರಬಹುದು-ಆಲೋಚನೆ ಬಂದದ್ದನ್ನು ಕಾರ್ಯರೂಪಕ್ಕೆ ಹೇಗೆ ತರೋದು ಮುಂದಿನ ಪ್ರಶ್ನೆ. But ಕೆಲವು Friends, ಹಿತೈಷಿಗಳು, ಸುಮಾರು ಒಂದು ವರ್ಷ ಕೂತು discuss ಮಾಡಿ ಒಂದು ರೂಪಕ್ಕೆ ತಂದ್ವಿ. ಯಾಕೆಂದ್ರೆ ಇದರಲ್ಲಿ Finance ಪ್ರಶ್ನೆ involve ಆಗುತ್ತಲ್ಲಾ.

ಸಂ : ಅಂದರೆ ಅಚಲ ಮೂಲತಃ ನಿಮ್ಮಿಬ್ಬರ ಆಲೋಚನೆ ಅನ್ನಿ ?

ಅಚಲ : ನಮ್ಮಿಬ್ಬರ ಆಲೋಚನೆಯಿಂದಾನೆ ಹುಟ್ಟಿದ್ದು. ಆದ್ರೆ ಇಬ್ಬರೆ ಕೆಲಸ ಮಾಡಿದ್ವಿ ಅಂತ ಹೇಳೋಲ್ಲ. ಅದಿಕ್ಕೆ ಒಂದು Editorial board ಅಂತ ಮಾಡಿಕೊಂಡ್ವಿ. ಒಂದಿಷ್ಟು ಮಹಿಳೆಯರನ್ನ, ಶ್ಯಾಮಲಾದೇವಿಯಂತ ಅವಳು 'ಐಸೆಕ್' (ಸಮುದಾಯದಲ್ಲಿ ಸನತ್ಕುಮಾರ ನಾಟ್ಕ ಮಾಡಿದ್ಲಲ್ಲಾ ಅವಳು) ನಲ್ಲಿ Sociology reasearch ಮಾಡ್ತಿದಾಳೆ ಅವಳಿದ್ಲು ಶುರೂನಲ್ಲಿ. ಆಮೇಲೆ ಲಕ್ಷ್ಮೀ ಚಂದ್ರಶೇಖರ್ ಇದ್ರು.

ಅವರೆಲ್ಲಾ ಈಗಲೂ ಸಹಾಯಾನೂ ಮಾಡ್ತಿದಾರೆ. ಯಾಕಂದ್ರೆ ಯಾರಾದ್ರೂ ಇಬ್ರು ಸೇರಿ ಪತ್ರಿಕೆ ಮಾಡೋಕಾಗಲ್ಲ. But ಒಟ್ಟು ಆಲೋಚನೆ ಮಾಡಿದ್ದು ಶುರು ಮಾಡಿದ್ದು ಮತ್ತು ಕೆಲ್ಸ ಮಾಡ್ತಿದ್ದು ನಾವಿಬ್ರೆ. Slowly ಕೆಲವರು ಬಿಟ್ಟು ಹೋಗ್ತಿದ್ರು. ಹೊಸಬ್ರು ಬರ್‍ತಿದ್ರು. ಆತರ ಒಂದು ಹದಿಮೂರು ವರ್ಷದಿಂದ ನಡಕೊಂಡು ಬಂದಿದೆ. ಆದರೆ ನಾವಿಬ್ರೂ ಈಗ್ಲೂ ಇದೀವಿ. ಹೊಸ ಹೊಸಬ್ರು ಬಂದಿದಾರೆ and ಈಗ ಪ್ರಸಕ್ತದಲ್ಲಿ ಹೇಳ್ಬೇಕೂಂದ್ರೆ ತುಂಬಾ comfortable position ನಲ್ಲಿ ಇದ್ದೀವಿ. ಅಂದ್ರೆ Activist ದೃಷ್ಟಿಯಿಂದ ನೇಮಿ ಚಂದ್ರ ಇದಾರೆ, ಶಾಂತಾ ನಾಗರಾಜ್ ನಿಮಗೆ ಪರಿಚಯ ಇರಬಹುದು. Theatre person ಅವರು. ನಾಟಕ ಮಾಡ್ತಾರೆ. ಮಾಡಿಸ್ತಾರೆ. Lecturer ಆಗಿದ್ರು ವಿದ್ಯಾವರ್ಧಕದಲ್ಲಿ. So ತುಂಬಾ ಉತ್ಸಾಹ ಇದೆ ಅವರಿಗೆ ವಯಸ್ಸು ೫೨ ವರ್ಷ ತುಂಬಿದೆ. ಸುಮಿತ್ರಾಬಾಯಿ ಹಾಸನದಿಂದ ಬೆಂಗಳೂರಿಗೆ ಬಂದ್ರು. ನಾವು ಅವರು ಬಂದಿದ್ದೇ opportunity ಅಂತ ಎಳಕೊಂಡು ಬಿಟ್ವಿ. ಸಮುದಾಯದಲ್ಲಿ ಇದ್ದೋರೇ ಲಕ್ಷ್ಮೀ ಚಂದ್ರಶೇಖರ್ ಇದ್ರು. ಶಾಮಲಾ ಇದ್ರು ಸಮಾನ ಮನಸ್ಕರು.

ಸಂ : ಇದರಲ್ಲಿ ನೀವು ಧ್ಯೇಯೋದ್ದೇಶ ದೃಷ್ಟಿಯಿಂದ frame work ನ್ನು.ಹೇಗೆ ಹೇಗೆ ಕಟ್ಕೊಂಡಿದ್ದೀರಿ ? ಮೊದಲಿಗೆ ಅಂದ್ಕೊಂಡಿದ್ದು : ಮತ್ತೆ ಅದನ್ನ Develop ಮಾಡಿದ್ದು....

ಅಚಲ : ಮೊದಲು ನಮಗೆ ಆ ಚಳುವಳಿ ಬಿಸಿ ಇತ್ತಲ್ವಾ, ಇದು ಕೇವಲ ಅಧ್ಯಯನಕ್ಕೆ ಮೀಸಲಾದ ಪತ್ರಿಕೆ ಆಗಬಾರ್ದು. ಅದು ಚಳುವಳಿಗೆ ಕೂಡಾ ಒಂದು Frame work ಆಗ್ಬೇಕೂನ್ನೋದು ನಮ್ ತಲೆ ಒಳಗೆ ಇತ್ತು. and ಆಗ಼್್ಲೇನೇ ವಿಮೋಚನೆ ವಾರ್ತಾಪತ್ರ ಬರ್‍ತಿತ್ತು. ನಾವು ಅಚಲ ಶುರು ಮಾಡ್ದಾಗ ಅದರದೊಂದು ಸ್ವರೂಪ ಇತ್ತಲ್ವಾ, so ಅದರ ಅಂಶಗಳು ನಮಗೆ ಇಷ್ಟ ಇರಬಹುದು ಇಲ್ದೇ ಇರಬಹುದು. ಅದನ್ನು ಗಮನದಲ್ಲಿಟ್ಟುಕೊಂಡು ಈವರೆಗೆ ಏನಾಗಿದೆ ಏನಾಗಬೇಕಿದೆ ಮತ್ತೆ ಸರಸ್ವತಿ (ಕಲ್ಯಾಣ ಸರಸ್ವತಿ) ಪತ್ರಿಕೆಗಳೆಲ್ಲ ಇದ್ವಲ್ಲಾ. ಆ ಎಲ್ಲದರ ಹಿನ್ನೆಲೆಯೊಳಗೆ ನಾವು ಅವರಿಗಿಂತ ಏನ್ Different ಆಗ್ಬೇಕೂ ಏನ್ ಕೊಡ್ಬೇಕೂ ಅನ್ನೋದನ್ನೂ ಒಂದು ಚರ್ಚೆ ಮಾಡ್ಕೊಂಡು ಮಾಡಿದ್ವಿ. ಅದು ಚಳುವಳಿಗೆ ದಿಕ್ಸೂಚಿ ಆಗೋತರ ಇರ್ಬೇಕು, ಆಮೇಲೆ Academic discussion ಕೂಡ ಆಗ್ಬೇಕು. ಮತ್ತೆ ಕೆಲವು ಸಲ ವಿಚಾರಗಳನ್ನು ಹೇಳೋದಕ್ಕೆ ಅವರೇನು ಚಳುವಳೀಲಿ ಇಲ್ದೇ ಇರಬಹುದು. ಈ debates ಅಂತ ನೀವೇನ್ ಹೇಳ್ತೀರಾ ಆ ಚರ್ಚೆ ಆಗ್ಬೇಕು. ಅವೆಲ್ಲದಕ್ಕೂ ಇದೊಂದು ಫೋರಂ ಆಗ್ಬೇಕು. ಸಾಮಾನ್ಯವಾಗಿ ಪತ್ರಿಕೆಗಳು ಯಾವುದಾದರೂ ಒಂದು ಪಕ್ಷದ 'ಮೌತ್‌ಪೀಸ್' ತರ ವರ್ಕಾಗುತ್ತೆ. ಇದು ಆ ತರ ಆಗ್ಬಾರ್ದು. ಚರ್ಚಿಸಬಹುದಾದ ವಿಚಾರಗಳನ್ನು ಯಾರಾದ್ರೂ ಹೇಳಿದ್ರೆ ಅದನ್ನು ಒಂದೊಂದು platform ತರ ಮಾಡ್ಕೋಬೇಕು. ತುಂಬಾ broad base ನಲ್ಲಿ ಜನರನ್ನು involve ಮಾಡ್ಕೋಬೇಕು.

ಸಂ : ನೀವು ಆರಂಭ ಮಾಡಿದ್ದಕ್ಕೂ ಇವತ್ತಿಗೂ ಏನೂ ವ್ಯತ್ಯಾಸ ಇಲ್ವಾ ? ಅದರ ಇಡೀ ಚೌಕಟ್ಟಿನಲ್ಲಿ ಏನೂ ಬದಲಾವಣೆ ಬಂದಿಲ್ವಾ ?

ಅಚಲ : ನೀವು ಮೊದಲನೇ issue ಗೂ ಈಗ್ಲೂ ನೋಡಿದ್ರೆ ತುಂಬಾ ಅಂತವೇನೂ ಬದಲಾವಣೆ ಇದೇಂತ ನನಗೆ ಅನ್ಸಿಲ್ಲ. ಆದ್ರೆ ಕಾಲಾ ಅನ್ನೋ ಸಂದರ್ಭದಲ್ಲಿ ಯಾರು ಅದರಲ್ಲಿ ಹೆಚ್ಚು involve ಆಗ್ತಾರೋ ಅವರ ಆಲೋಚನೆಗೆ ಅನುಗುಣವಾಗಿ ಅದು ಕೆಲವು ವಿವರಗಳಲ್ಲಿ ಬದಲಾಗ್ತಾ ಇರುತ್ತೆ. ಉದಾಹರಣೆಗೆ : ಸುಮಿತ್ರಾಬಾಯಿ 92 ರಲ್ಲೋ ಏನೋ ಬಂದ್ರೂ ಅನ್ಸುತ್ತೆ. ಬಂದಾಗ ಅದು ಹೆಚ್ಚು ಸಾಹಿತ್ಯಕ್ಕೆ ಹೋಗ್ತಾ ಹೋಯ್ತು. ಮತ್ತೆ ಅವರು basic ಆಗಿ ಸಾಹಿತ್ಯದವರೇ ಆದ್ರಿಂದ. ನಮ್ಗೂನೂ ಈ ಒಂದು ಪತ್ರಿಕೆ ತರೋದು ಎಷ್ಟು ಕಷ್ಟಾಂದ್ರೆ ಆ ಹೆಡ್‌ಲೈನ್‌ಗೆ ಏನಾದ್ರೂ Matter ಹೊಂದಿಸಲೇಬೇಕು. ಯಾರೂ ಕೊಡ್ಲಿಲ್ಲಾಂದ್ರೆ ನಾವೇ ಬರೀಬೇಕು. ಯಾಕೆಂದ್ರೆ ನಾವು ಕಮರ್ಶಿಯಲ್ ಪೇಪರಿನವರ ತರ ಯಾರ್ಗೂ Remuneration ಕೊಡಲ್ಲ. ಏನೂ ಮಾಡಲ್ಲ. ಆದ್ದರಿಂದ ನಮ್ಮ ಬಗೆಗೆ ವ್ಯಕ್ತಿಗತ ಸಂಬಂಧ, ನಾವು ಮಾಡ್ತಿರೋ ಕೆಲಸದ ಬಗ್ಗೆ ಗೌರದ ಎರಡು ಇದ್ದವರು ಮಾತ್ರ ನಮಗೆ ಬರೆದು ಕೊಡೋಕೆ ಸಾಧ್ಯ. ಸುಮಿತ್ರಾಬಾಯಿ enter ಆದ ತಕ್ಷಣ ಸಾಹಿತ್ಯಿಕ ಆಯ್ತು ಅಂತ ಹೇಳ್ಳಿಕ್ಕೆ ಬರೋಲ್ಲ. 92 ರಲ್ಲಿ ಅವರು ಬಂದ್ರು. ಆ ಸಂದರ್ಭದಲ್ಲಿ ಇದರ ಮೇಜರ್ ಆಫೀಸ್ ವರ್ಕರ್ಸ್ ಎಲ್ಲರೂವೆ ಲೇಖಕಿಯರ ಸಂಘದ ಪದಾಧಿಕಾರಿಗಳಾಗಿ ಕೆಲ್ಸ ಮಾಡ್ತಿದ್ವಿ. And ನಮಗೆ ಹೆಚ್ಚು ಲೇಖಕಿಯರ ಸಂಪರ್ಕ ಉಂಟಾಯ್ತು. ಆ ಸಂಪರ್ಕ ಬಂದಾಗ ಅವರುಗಳೆಲ್ಲಾ ಬರೆಯೋಕೆ ಶುರು ಮಾಡಿದ್ರು. ಇದು ಸಾಹಿತ್ಯಿಕ ಪತ್ರಿಕೆಯಾಗಿ ಸ್ವಲ್ಪ ದಿನ, ಎಷ್ಟೂಂದ್ರೆ objectionable ಆಗೋ ಹಾಗೆ ನಡೀತು.

ಸಂ : ಆ ವೇಳೆಯಲ್ಲಿ ಸ್ತ್ರೀವಾದಕ್ಕೆ ಸಂಬಂಧಪಟ್ಟಂತೇನೇ ಅಂಥ ವಾತಾವರಣ ಕರ್ನಾಟಕದಲ್ಲಿ ಶುರುವಾಗಿತ್ತು. ಅದೇ ಇನ್ನೂ Continue ಆಗ್ತಾ ಇರೋ ಹಾಗೂ ಇದೆಯಲ್ಲ.

ಅಚಲಾ : ಆಗ್ತಾಯಿದೆ. 80ರ ದಶಕದಲ್ಲೇ ಸ್ತ್ರೀವಾದ ಹೆಚ್ಚು ಚರ್ಚೆಗೆ ಬಂದಿದ್ದು. ಆಮೇಲೆ ಲೇಖಕಿಯರ ಸಂಘ ಹೆಚ್ಚು lead ತಗೋತು. ಅದರೊಳಗೆ ಹಳೆಯ ಲೇಖಕಿಯರ ಪುಸ್ತಕಗಳನ್ನು print ಮಾಡಿಸೋರು. ಆವಾಗ ಇದನ್ನು ನಾವು platform ಆಗಿ ಬಳಸ್ಕೊಂಡ್ವಿ.

ಸಂ : ಪತ್ರಿಕೆ ನಡೆಸ್ತಾ ಇರೋವಾಗ, ಅಂದ್ರೆ ಶುರುಮಾಡೋವಾಗಿನಿಂದಲೂ ಆರ್ಥಿಕ ಸಮಸ್ಯೆ ಇತ್ಯಾದಿಗಳನ್ನು ಹೇಗೆ ಎದುರಿಸಿದಿರಿ? ವ್ಯಕ್ತಿಗತವಾಗಿ ಇದನ್ನು Solve ಮಾಡಿದ್ರಾ ಹೇಗೆ? ಆರ್ಥಿಕವಾದ ಸಮಸ್ಯೆ ಅಲ್ಲದೆ, ಹೇಳಬಹುದಾದ ಇನ್ನಿತರ ಸಮಸ್ಯೆಗಳೇನು? ಅಂದ್ರೆ ಲೆಕ್ಕಕ್ಕೆ ಸಿಗಬಹುದಾದ್ದು? ಲೆಕ್ಕಕ್ಕೆ ಸಿಗಲಾರದ abstract ಆದ ಸಮಸ್ಯೆಗಳು ಸಾವಿರಾರಿವೆ. ಅದು ಬಿಟ್ಟು ಅನ್ನಿ. ನೀವದನ್ನ ಹೇಗೆ face ಮಾಡಿದ್ರಿ. ಈವಾಗ ಹೇಗೆ ನಿಭಾಯಿಸ್ತಿದ್ದೀರಿ? ಬರವಣಿಗೇದು ಇರಬಹುದು, ಸಾಮಾಜಿಕವಾದ್ದು ಇರಬಹುದು. ಅಂದ್ರೆ ನಿಮ್ಮ ವೃತ್ತಿ, ನಿಮ್ಮ ಸಂಸಾರ ಸಂಬಂಧಗಳು, ಸಾಮಾಜಿಕ ಸಮಸ್ಯೆಗಳು ಇತ್ಯಾದಿ ಎಲ್ಲದರ ನಡುವೆ ಇಷ್ಟು ದಿನ ಪತ್ರಿಕೆಯನ್ನು ನಡೆಸ್ಕೊಂಡು

ಬಂದಿರೋದು ಸಾಧನೆಯೇ.

ಅಚಲಾ : ಅಲ್ಲ, major problem ಅಂದ್ರೆ ನೋಡಿ, ಇದರಲ್ಲಿ ಕೆಲ್ಸ ಮಾಡ್ತಿರುವ ಅಷ್ಟೂ ಜನರ ಮುಖ್ಯ ವೃತ್ತಿ ಪತ್ರಿಕೆ ತರೋದಲ್ಲ. ಬೇರೆ ಉದ್ಯೋಗದಲ್ಲಿದ್ದಾರೆ. ಹಾಗಾಗಿ time limit ಆಗಿದೆ. ಆಮೇಲೆ ಸಾಮಾನ್ಯವಾಗಿ ಎಲ್ರೂ ಕುಟುಂಬದಲ್ಲಿರೋರೆ. ಮಕ್ಕಳು ಮುಂತಾದ ಸಂಸಾರ ಜವಾಬ್ದಾರಿಗಳನ್ನು ಹೊತ್ತಿದ್ದಾರೆ. ಎಷ್ಟೇ ಕುಟುಂಬದ ಜನಗಳು ಸಹಾಯ ಮಾಡಿದ್ರೂ ಕೂಡ ಅದರ ಹೊಣೆಯ ಪ್ರಮಾಣ ನಮಗೆ ತಾನೇ ? ಪತ್ರಿಕೆಯನ್ನ ತರೋವಾಗ ನಾವು ಒಂದು ಆರೇಳು press ನ್ನು ಬದಲಾಯಿಸಿದ್ದೀವಿ. ನಮ್ಗೆ ಒಂದು press ನ ಹುಡುಕೊಳ್ಳುವಾಗ ನಮ್ಮ main criteria ಏನೂಂದ್ರೆ ಯಾರು ಚೀಪಾಗಿ ಮಾಡ್ಕೊಡ್ತಾರೆ ಅದು. ಯಾಕಂದ್ರೆ ನಮಗೆ ಹಣದ ಸಮಸ್ಯೆ ಇರೋದ್ರಿಂದ. ಹೀಗೆ ಆಯ್ಕೆ ಮಾಡಿದ ಪ್ರೆಸ್ಸು ಎಲ್ಲರ ಮನೆಗೂ ಹತ್ರ ಇರೋಕೆ ಸಾಧ್ಯ ಇಲ್ಲ. ಮತ್ತೆ ಎಲ್ರೂ ಒಂದೇ ಜಾಗದಲ್ಲಿ ವಾಸ ಮಾಡ್ತಿಲ್ಲ. ಅದ್ರಿಂದ ಏನಾಗುತ್ತೆ Co-ordination ಕಡಿಮೆ ಆಗಬಹುದು. ಬೇರೆ ಬೇರೆ ಕಾರಣಗಳಿಗೆ ನಮ್ಮ ನಮ್ಮಲ್ಲೇ ಚಿಕ್ಕ ಪುಟ್ಟ ವೈಮನಸ್ಸುಗಳು ಬರಬಹುದು. ಸಾಮಾನ್ಯವಾಗಿ ಅಂಥದ್ದನ್ನು ನಾವು ಬೆಳೆಯಗೊಟ್ಟಿಲ್ಲ. ಈಗ ನಾವೇನ್ಮಾಡ್ತಿದೀವಿ. Matter ತುಂಬಾ ಜಾಸ್ತಿ ಆಯ್ತು ಅನ್ನೋವಾಗ ನಮ್ಮ ಸಂಪಾದಕ ಮಂಡಲಿಯುವರು ಯಾರಾದ್ರೂ ಬರೆದಿರೋದನ್ನ ತೆಗೆದು ಪಕ್ಕಕ್ಕೆ ಇಟ್ಟುಬಿಡ್ತೀವಿ. ಹೊರಗಿನವರಿಗೆ ಕಾಯಿಸ್ಬಾರ್ದೂಂತ ಹಾಕ್ತೀವಿ. ಇಂಥ ಸಂದರ್ಭಗಳು ತುಂಬಾ ಬಂದಿವೆ. ಆಮೇಲೆ ಕೆಲವು ಸಲ ತಪ್ಪುಗಳಾಗುತ್ವೆ. ಇವಾಗ ನಮ್ಮಲ್ಲಿ ಯಾರೋ ಒಬ್ಬರು ಪತ್ರಿಕೆಗಾಗಿ ಒಂದು Article ತಂದಿರ್ತಾರೆ. ನಾನು ಶ್ರೀಮತಿ ಹತ್ರ ಬರೆಸ್ಕೊಂಡಿರ್ತೀನಿ. ಅದು ಎಲ್ಲೋ ಒಂದ್ಕಡೆ ನಮ್ಮಿಬ್ಬರ ಸಂಬಂಧದ ಮೇಲೆ ನಿಂತಿರ್ತದೆ Actual ಆಗಿ ನೀವು ಬರ್‍ಕೊಟ್ರೂನೂ ಗಾಯತ್ರಿ ಮುಖ ನೋಡಿ ಬರ್‍ಕೊಟ್ಟಿರ್ತೀರಾ ಅಂತ ಇಟ್ಕೊಳ್ಳಿ. ಆದ್ರೆ ಅಲ್ಲಿ article ನ print ಮಾಡೋ ರೀತೀನಲ್ಲೋ, ಅಥ್ವಾ ಜಾಗ ಸಾಲ್ದು ಅಂತಲೋ ನಂಗೂ ಗೊತ್ತಾಗ್ದೆ edit ಆಗ್ಬಿಟ್ಟಿರತ್ತೆ. ಆಮೇಲೆ ಅದು ಸರಿಯಾಗೂ ಬಂದಿರಲ್ಲ. ಆವಾಗ ಒಂದು meeting ನಲ್ಲಿ ನನಗದು ಪ್ರತಿಷ್ಠೆಯ ಪ್ರಶ್ನೆ. ಈ ತರ ಒಂದೆರಡು ಮೂರು ಸಲ ಆಗಿದೆ. ಅದ್ಕೆ ಹೇಳಿದ್ದು. ಶ್ರೀನಿವಾಸ ಒಂದು Philosophy article ಬರ್‍ಕೊಟ್ಟಿದ್ದಾರೆ. edit ಮಾಡೋದು ಅಷ್ಟು ಸುಲಭದ ಕೆಲಸ ಅಲ್ಲ. ನಿಮ್ಗೆ ಸಬ್ಜೆಕ್ಟೇ ಗೊತ್ತಿಲ್ದೆ ಇರುವಾಗ ಸುಮ್ನೆ ಲಾಸ್ಟ್ ಪ್ಯಾರಾ ತೆಗೆದು ಬಿಟ್ರೆ ಅದರಲ್ಲಿ Conclusion ಇರುತ್ತೆ. Whole analysis ದು. ತಂದವರ್‍ಯಾರ್‍ಗೂ ಮುಖಪರಿಚಯ ಇರಲ್ಲ. ಆಮೇಲೆ ಗುದ್ದಾಡ್ಬೇಕಾದ್ದು ಲೇಖನ ತಂದವರು. ಈ ರೀತಿ ಆಗುತ್ತೆ. ಅದು ಗಾಯಿತ್ರಿಗಾಗ್ಬಹುದು, ಸುಮಿತ್ರಾಬಾಯಿಗಾಗ್ಬಹುದು. ನೇಮಿಚಂದ್ರಗಾಗ್ಬಹುದು. ಅದು ಎಲ್ಲೋ ಒಂಥರಾ ಇರುಸುಮುರುಸು ಇರುತ್ತೆ. ಆದ್ರೆ ಅಂತಹ ಇರುಸುಮುರುಸು ನಮ್ಮ ಸಂಘಟನೇನ ಒಡೆದಿಲ್ಲಾ ಅನ್ನೋದೊಂದು ಆಶ್ಚರ್ಯ. ಆ ಕ್ಷಣದಲ್ಲಿ ಆಯಾ meeting ನಲ್ಲಿ ಕಾರ್‍ಕೊಂಡು ಬಿಡ್ತೀವಿ. ರೇಕ್ಕೊಂಡ್ ಬಿಡ್ತೀವಿ. ಇವೆಲ್ಲಾ ಚಿಕ್ಕ ಪುಟ್ಟದ್ದು ಇದ್ದೆ ಇರುತ್ತೆ. ಅವೆಲ್ಲಾ ಇಲ್ದೆ ಮಾಡೋಕಾಗಲ್ಲ. and ನೀವು ಆಮೂರ್ತವಾದದ್ದು

ಅಂದ್ರುಲ್ಲಾ, ಮೂರ್ತವಾದ ಸಮಸ್ಯೇನೆ ಇನ್ನೂ ಬೇಕಾದಷ್ಟಿದೆ. ಏನೂಂದ್ರೆ ನಾವೆಲ್ಲ ಹೆಂಗಸ್ರೇ. ಮಾಡಬೇಕಾದ ಕೆಲಸಗಳು ಎಷ್ಟೋ ಸಲ ವಲ್ಯೂಮಿನಸ್ ಆಗಿರುತ್ತೆ. Post ಮಾಡೋದಿಕ್ಕೆ ರೆಡಿಯಾದ ಪತ್ರಿಕೆಗಳನ್ನು ಬಂಡಲ್ ಮಾಡಿ physically ಎತ್ತೋದು ಎಷ್ಟು ಕಷ್ಟ ಗೊತ್ತಾ ನಿಮಗೆ ? ನಾವು ನಿಜ ಹೇಳ್ಬೆಕೂಂದ್ರೆ ಜಿ. ಆರ್. ನ Printer, publisher ಅಂತ ಹಾಕ್ಬೇಕು.... ಆದ್ರೆ ಯಾವ ಕೆಲಸವನ್ನು ಅವರಿಗೆ ಹೇಳಬಹುದು ಅನ್ನುವ ಸಂಬಂಧ ನಮ್ಮಲ್ಲಿದೆ. ಇನ್ನೂ ಇಂಥಾದ್ದು ಎಷ್ಟೋಂದಿದೆ ಗೊತ್ತಾ? ಎಲ್ಲೂ ಕೆಲ್ಸಕ್ಕೋಗ್ತೀವಿ. ನಾವು post office ಗೆ ಯಾವಾಗ ಹೋಗ್ಬೇಕೂಂದ್ರೆ ಬೆಳಿಗ್ಗೆ ಒಂಬತ್ತು ಗಂಟೆ ಒಳಗೆ ಹೋಗ್ಬೇಕು. ಒಂದು ದಿನ 9 ಗಂಟೆಗೆ ಹೋಗ್ಬೇಕೂಂದ್ರೆ ನೀವು ರಾತ್ರೀನೇ ತಿಂಡಿಗೆ ಯೋಚ್ನೇ ಮಾಡ್ಬೇಕು. ಈಗ ನಾವು ಹೆಂಗಸ್ರು ಹೆಂಗಸ್ರು ಹೇಳ್ಕೋಬಹುದು. ಗಂಡಸರಿಗೆ ಅರ್ಥಾನೇ ಆಗೋದಿಲ್ಲ ಈ ಸಮಸ್ಯೆ. ಯಾವತ್ತು ಹೋಗ್ಬೇಕೋ ಆವತ್ತಿನ ದಿನ ಒಂದು ಉಪ್ಪಿಟ್ಟು ಮಾಡ್ತೀವಿ. ಚಪಾತಿ ಮಾಡೋಕೆ ಹೋಗೋದಿಲ್ಲ.

ಈತರ ಎಲ್ಲಾ ಮೆಂಟಲ್ Adjustment ಗಳೊಂದಿಗೆ ಮನೆಯುವರೆಲ್ಲರನ್ನೂ ಹೊಂದಿಸಬೇಕು. ಆಮೇಲೆ ಇನ್ನೊಂದು ನಮ್ಮ ಪತ್ರಿಕೆಯು ವಿಷಯುದಲ್ಲಿ ಏನ್ ಹೇಳ್ಬೇಕೂಂದ್ರೆ ಇದು Bi-monthly Bi. monthly ಗೆ postel Concession ಇಲ್ಲ. ಅದನ್ನ ಅದೇನೋ ಒಂದು Printed registered magzine ಅಂದ್ಬಿಟ್ಟು first 30 ಪೈಸಾ ಹಾಕ್ಬಹುದಿತ್ತು. ಆಮೇಲೆ 50 ಪೈಸಾ ಹಾಕ್ಬಹುದಿತ್ತು. ಇವಾಗ ಆ Concession ಇಲ್ವೇ ಇಲ್ಲ. ಹೋದ ವರ್ಷದಿಂದ. ಅದಕ್ಕೆ ನಾವು ಮಾಸಿಕ ಮಾಡಲು ಹೊರಟಿರೋದು. ಒಂದೊಂದ್ರುಪಾಯಿ ಸ್ಟಾಂಪ್ ಹಾಕಿ ಈ ಪತ್ರಿಕೇನಾ ನಮ್ಕೈನಲ್ಲಿ ತೆರೋಕೆ ಆಗಲ್ಲ. ಇನ್ನೊಂದು ಈ ಥರದ್ದು. ಯಾವ post office ನಲ್ಲಿ ಬೇಕಾದ್ರೂ Post ಗೆ ಕೊಡಬಹುದು ಅವರ ರೂಲ್ ಪ್ರಕಾರ. ಆದ್ರೆ ಎಲ್ಲಾ post office ನಲ್ಲೂ. ಅವರ Recruitment ಕಡಿಮೆ ಇರೋದ್ರಿಂದ ಅವರು ತಗೊಳ್ಳೋದಿಕ್ಕೆ ಇದ್ ಮಾಡ್ತಾರೆ. And ನನಗಿರುವ ಒಂದು Advantage ಏನೂ ತಂದ್ರೆ ನಾನು P & T ನಲ್ಲಿ ಕೆಲ್ಸ ಮಾಡ್ತೋಳು. ಮತ್ತೆ ನಾನು ಅಲ್ಲಿ union ನಲ್ಲಿ ಇದ್ದುದರಿಂದ ನಾನಾಗಲೀ, ಜಿ. ಆರ್. ಆಗಲೀ ; ಅವರು ನಮ್ಮನ್ನೇನೋ ಗೆಸ್ಟ್‌ಗಳ ತರ ಕರ್ಕೊಂಡು ಹೋಗೋದು ಇತ್ತು. ನನಗೆ ತುಂಬಾ ಒಳ್ಳೇ ಸಂಪರ್ಕ ಸಂಬಂಧ ಇದೆ. Adress ತಪ್ಪು ಬರೆದಿದ್ರೆ ಓದಿ ಮನೆಗೆ ತಂದ್ಕೊಡ್ತಾರೆ. ನಾನೇನೋ ಎರಡು ತಿಂಗಳು ಬೇರೆ ಊರಿಗೆ ಹೋದೆ ಅಂತ ತಿಳ್ಕೊಳ್ಳಿ. ಅದು ಬೇರೆಯವರಿಗೆ ಕಷ್ಟಕ್ಕೆ ಬರುತ್ತೆ. ನಾನು ಮೊನ್ನೆ May ನಲ್ಲಿ trecking ಹೋದೆ. ಹಿಮಾಲಯಕ್ಕೆ. ಹೋಗುವಾಗ ಪಾಪ ಇವರೆಲ್ಲಾ ಅಂದ್ರು, ನಾವು Post ಮಾಡ್ತೀವಿ ಅಂತ. ಯಾವ ಪೋಸ್ಟಾಫಿಸ್‌ನಲ್ಲಿ ಏನ್ ಮಾಡ್ಬೇಕು ಎಲ್ಲಾ ಕೇಳಿದ್ರು. ಹೂಂ ಅಂತ ಇಟ್ಬಿಟ್ಟೆ. ಒಂದು ತಿಂಗಳು trecking ಮುಗಿಸ್ಕೊಂಡು ಬರ್ತೀನಿ, ಅವೆಲ್ಲ ಹಂಗೇ ಕೂತಿವೆ. ಇವರು ಹೋದಾಗ ಅವು ಯಾವತರ ವರ್ತಿಸಿದರೋ ಗೊತ್ತಿಲ್ಲ. ಇವರಿಗೆ ಯಾರನ್ನ ಕೇಳ್ಬೆಕೂಂತ....... ಒಂದತ್ತು ವರ್ಷದ ಹಿಂದೆ, 15 ವರ್ಷದ ಹಿಂದೆ ನಾನು P & T Union ನಲ್ಲಿ ಇದ್ದೋಳು ಅಂದ್ನಲ್ಲ. P & T ನಲ್ಲಿ ಒಂದ್ನಾಲ್ಕು office ನಲ್ಲಿ ಒಂದ್ನಾಲ್ಕು ಜನ

ಗೊತ್ತಿರೋರು. ನಾನೇನು ಹೋಗ್ಬೇಕಾಗಿರ್ಲಿಲ್ಲ. ಅವರು function ಮಾಡ್ದಾಗ ಹೋದ್ರೆ ಆಗಿರೋದು. ಒಬ್ಬೊಬ್ರು 25 ಚಂದಾಗಳನ್ನು ಅವರೇ renew ಮಾಡಿಸಿಕೊಡೋರು. ಒಂದು ದುರಾದೃಷ್ಟ ಅಂದ್ರೆ ಈಗ ಅಷ್ಟು ಸುಲಭವಾಗಿ ಮಾಡ್ಸೋಕೆ ಆಗ್ತಿಲ್ಲ. ಆದರೂ ಸ್ತ್ರೀವಾದದ ಬಗ್ಗೆ ಹೆಚ್ಚು ಕಾಳಜಿ ಇರುವ ಬೇರೆ ತರ ರೀಡರ್ಸ್ ಸಿಕ್ಕಿದಾರೆ. ಆದರೂ Trade Union ಗಳಲ್ಲಿ ನಾವು ನುಗ್ಗಿ ಮಾಡಿಸ್ತಿದ್ದೆವಲ್ಲಾ ಅದಿವಾಗ ನಮಗೆ ಮಾಡ್ಸಕಾಗೋದಿಲ್ಲ. ಆದ್ರೆ ಬೇರೆ ಪಾಕೆಟ್ಸ್ ಇದೆ. ಉದಾಹರಣೆಗೆ ಲೆಕ್ಚರರ್ಸು. ಅಲ್ಲೂ ಅಷ್ಟೆ. ಹಿಂದೆ ನಾನು Valuation Centre ಗೆ ಹೋಗ್ಬಿಟ್ರೆ ಐವತ್ತೈವತ್ತು ಜನ ಸಿಕ್ಕೋರು. ಈಗ Valuation Centre ನಲ್ಲಿ ಬರೀ ಪೋಲೀಸ್‌ನೋರು ಇರ್ತಾರೆ. ನೀವೆಲ್ಲಿ ಹೋಗ್ತೀರಾ? ಅಲ್ವಾ ? ಹೇಗೆ ನಮ್ಮ ಹೊರಗಿನ ಬದಲಾವಣೆಗಳೂ ಕೂಡ ಪತ್ರಿಕೇನ effect ಮಾಡ್ತಿರ್ತಾವೆ. ಪತ್ರಿಕೆಯ ಈ ಪ್ರಕ್ರಿಯೆ ಇದೆಯಲ್ಲಾ subscription ಮಾಡ್ಸೋದು ನಾನದಕ್ಕೆ ಹೇಳೋದು. Pin ಹೊಡೆಯೋದು, Editorial ಬರೆಯೋದು ಎಲ್ಲಾ ಪ್ರಕ್ರಿಯೆ ಒಟ್ಟಿಗೆ ನಡೆಯುತ್ತೆ. ತುಂಬಾ independent ಆಗೇನೂ ಅಚಲ ನಡೀಲಿಕ್ಕೆ ಸಾಧ್ಯ ಇಲ್ಲ. ಸುತ್ತ ಸಮಾಜ ಹೇಗಿದೆಯೋ ಹಾಗೆ ಅದನ್ನ ಅರಗಿಸಿಕೊಂಡಿದೆ. ಮತ್ತೆ financially ಕೆಲವು ಸಾರಿ ನಾವು ತುಂಬಾ ತುಂಬಾ ಕಷ್ಟ ಅನುಭವಿಸಿದೀವಿ.

ಸಂ : ಒಂದು issuue ನ ಖರ್ಚೆಷ್ಟು ?

ಅಚಲ : ಒಂದ್ನಾಲ್ಕು ಸಾವಿರ. subscription ನಲ್ಲಿ ತುಂಬಾ ಏನೂ ಮಾಡೋಕೆ ಆಗೋಲ್ಲ. ಒಂದೆರಡು ವರ್ಷದಿಂದ regular ಆಗಿ ಒಂದು advertisement ತಗೋತಿದೀವಿ ಅದು 1250 ರೂ. ಬರುತ್ತೆ. ಆಮೇಲೆ ಕೆಲವು donor ಗಳಿದ್ದಾರೆ regular ಆಗಿ ಕೊಡೊಲ್ಲ. ಈಗ ಜಿ. ಆರ್. ಯಾವ್ದೋ ಮುದುಕನ್ನ ಇಟ್ಕೊಂಡಿದ್ರು ಅವರ ಮನೆಯಲ್ಲಿ. ಮನೆಯಿಂದ ಹೋಗುವಾಗ ದುಡ್ಡು ಕೊಡೋಕೆ ಬಂದ್ರು paying guest ಆಗಿದ್ದೆ ಅಂತ ಹೇಳಿ. ಜಿ. ಆರ್. ದುಡ್ಡು ತಗೋತಾರಾ ? ಅದೂ ಮುದುಕರತ್ರ. ಅವರು ಬೇಡಾ ಅಂದ್ರೆ. ಇವರು ಒಂದೈದು ಸಾವಿರಾನ ನಿಮಗೆ ಬೇಡವಾ ಅಚಲಾಗೆ ಕೊಡ್ತೀವಿ ಅಂತ ಕೊಟ್ರು.ಇದೊಂದು ಉದಾಹರಣೆಗೆ ನಾನೇಳಿದ್ದು. ಆತರ donor ಗಳು ಕೆಲವರಿದ್ದಾರೆ. ನಮ್ಮ ಬಗೆಗೆ ತುಂಬಾ ಅಭಿಮಾನ ಇಟ್ಕೊಂಡಿರೋರು. ಬೆನ್ನು ತಟ್ಟುವವರು. ತುಂಬಾ ಕಷ್ಟ ಆಗುತ್ತೆ. ನಮ್ಗಿರೋ personality ಏನು ಹೇಳಿ ಎಲ್ಲಿಂದಾದರೂ ದುಡ್ಡು ತರೋಕೆ.

ಸಂ : ನೀವು ಬೇರೆ ಪತ್ರಿಕೆಗಳನ್ನ, ಅಂದ್ರೆ ಸಣ್ಣ ಪತ್ರಿಕೆಗಳನ್ನ, ಗಮನದಲ್ಲಿ ಇಟ್ಕೊಂಡು ಹೇಳೋದಾದ್ರೆ ನಿಮ್ಮ ಪತ್ರಿಕೆಯ ಸಮಸ್ಯೆಗಳನ್ನು ಹೇಗೆ ನಿಭಾಯಿಸ್ತೀರಾ ?

ಅಚಲ : ಪತ್ರಿಕೆಗಳ ಜೊತೆ ಹೋಲಿಸ್ಕೊಳ್ಳೋದು ಗೊತ್ತಿಲ್ಲಪ್ಪ. ಅವರ ಕಷ್ಟ ಸುಖ ನಿಜವಾಗಿಯೂ ಬೇರೆ ಎಲ್ಲೋ ಇರಲೂಬಹುದು. ಹಾಗೆ ನೋಡೋಕೆ ಹೋದ್ರೆ ಅಂಥಾ ಎಷ್ಟೋ ಮಾದರಿ ಪತ್ರಿಕೆಗಳೂ ನಮ್ಮ ಹಾಗೇನೇ ಒಳ್ಳೆಯ ಸಾಮಾಜಿಕ ಚಿಂತನೆಗಳ ಮೂಲದಿಂದಲೇ ಹುಟ್ಟಿದ್ದು ತಾನೇ ?

ಸಂ : ಮೊದಲ ಹಂತಗಳಲ್ಲಿ ಈ ಮಾತು ಎಷ್ಟೋ ಅಂಥಾ ಪತ್ರಿಕೆಗಳಿಗೂ ನಿಜವಲ್ಲವೆ? ಮುಂದೆ ಅವು ಎಲ್ಲೋ ಒಂದು ಕಡೆ Compromise ಮಾಡ್ಕೊಂಡವು ಅನ್ನಿಸುವುದಿಲ್ಲವೆ ?

ಅಚಲ : ಆ ಅರ್ಥದಲ್ಲಿ ನಾವು Compromise ಮಾಡ್ಕೊಳ್ಳೋದಿಲ್ಲ. ನಾವಾಗಲೀ, ಮಾನಸ ಪತ್ರಿಕೆಯಾಗಲಿ ಮಾಡ್ಕೊಂಡಿಲ್ಲಾ.

ಸಂ : ಅದು ಸರಿ

ಅಚಲ : ಅಲ್ಲ Compromise ಅನ್ನೋದು ಇವತ್ತು ಏನಾಗಿದೇಂದ್ರೆ, ಪತ್ರಿಕೆ ವಿಷಯದಲ್ಲಿ ಮಾತ್ರವಲ್ಲ. ನಾವಿವತ್ತು ಗೌರವಿಸುವ ಎಷ್ಟೋ ವ್ಯಕ್ತಿಗಳು ಎಷ್ಟು Compromise ಮಾಡ್ಕೊಂಡ್ಬಿಟ್ಟಿದಾರೇಂದ್ರೆ ಅವರು ಎಲ್ಲಿ ಏನ್ಮಾಡ್ತಾರೇಂತ ತಿಳಿಯೋಲ್ಲ. ಒಂದು ಸಣ್ಣ ಉದಾಹರಣೆ ಕೊಡ್ತೀನಿ. ನನ್ನ ಪತ್ರಿಕೆ ವಿಷಯದಲ್ಲೇನೆ. ಏನೂಂದ್ರೆ ಕಮಲಾದಾಸ್ ಬೆಂಗಳೂರಿಗೆ ಬಂದಿದ್ರು. ಅವರಿಗೆ ಶಾಶ್ವತಿ ಅವಾರ್ಡ್ ಸಿಕ್ಕಿತ್ತು. ಬಂದಿದ್ರು. ಚಿ. ನ. ಮಂಗಳರವರು ನಮ್ಮೆಲ್ಲರನ್ನೂ ಪತ್ರಕರ್ತರೂಂತಲೋ, ಲೇಖಕರೂಂತಲೋ invitation ಕೊಟ್ರು. " meet the author" ಅಂತ ಒಂದು program. ನಾವು ಕಮಲಾದಾಸ್ ಸಾಹಿತ್ಯ ಇಷ್ಟೆಲ್ಲಾ ಓದ್ಕೊಂಡಿದ್ದೂ ಕೂಡ ಕಮಲಾದಾಸ್ ಅವರ ಬಗ್ಗೆ ನಮ್ಗೇನೋ ಒಂಥರಾ Curiosity ಇತ್ತು. ಅದೆಲ್ಲಾ ಇರುತ್ತೆ. ಅವರ ಸಾಹಿತ್ಯ ಹೇಳೋದೇನೊ ಅವರು ಬದುಕೋದೇನೂಂದ್ರೆ ಆ ಕುತೂಹಲಕ್ಕೆ ಇನ್ನೊಂಚೂರು ತುಪ್ಪಾ ಹಾಕೋತರ. ಅವರಿಗೆ prize ಕೊಟ್ಟಿದ್ದು ಸಾಹಿತ್ಯ ಕೃತಿಗೆ. ಆದ್ರೆ ಅವ್ರು ಸಾಹಿತ್ಯದ ವಿಚಾರಾನೇ ಬಿಟ್ಬಿಟ್ರು ಆ ಮೀಟಿಂಗ್‌ನಲ್ಲಿ. ತಾಯ್ತನ ಎಷ್ಟು ಮುಖ್ಯ, ನಾನು ತಾಯಾಗಿ ಹೇಳ್ತೀನಿ, ಸಿಂಹಳಕ್ಕೆ ನಮ್ಮ ಸೈನಿಕರನ್ನ ಕಳ್ಸಿದಾರೆ, ಎಷ್ಟು ಮಕ್ಕಳು ಸತ್ತಿದ್ದಾರೆ, ಅವರಮ್ಮನ ಕಣ್ಣೀರು ಆಮೇಲೆ ಇನ್ನೂ ಈ ತರ ಏನೇನೋ ಮಾತಾಡಿದ್ರು. ನಾನವರತ್ರ ಒಂದು appointment ತಗೊಂಡಿದ್ದೆ. ಅದೆಲ್ಲೋ ಕೋರಮಂಗಲ್‌ನಲ್ಲಿ ಯಾವ್ದೋ ನೆಂಟ್ರು ಮನೇ ಅದು. ಆವತ್ತು ಒಬ್ರು English ಮೇಷ್ಟ್ರನ್ನು ಜೊತೇಲಿ ಕರ್ಕೊಂಡ್ಹೋಗಿದ್ದೆ. ನಾನು ಕನ್ನಡ ಸಾಹಿತ್ಯ ವಿದ್ಯಾರ್ಥಿ. ಅವರೂ ಹೆಚ್ಚು ಓದ್ಕೊಂಡಿದ್ದವರು. ಆಕೆ ಅದೇನು ಮೂಡ್‌ನಲ್ಲಿದ್ರೋ ಏನೋ ನನ್ನ ಜೊತೆ ಬಂದಿದ್ದ ಮೇಷ್ಟ್ರು ಒಂದೆರಡು ಮಾತಾಡಿದ್ರು ಅಷ್ಟೆ. ಬೈದ್ರು, ಬೈದ್ರು, ಬೈದ್ರು ಇನ್ನೇನ್ ನಾಯಿ ನನ್ಮೇಲೆ ಬಿಡೋದಷ್ಟೇ ಬಾಕಿ. ಏನಾಯ್ತೂಂದ್ರೆ, ನನ್ನ ಜೊತೆ ಬಂದ ಸುಂದರ್‌ರಾಜ್ ಒಂದು ಪ್ರಶ್ನೆ ಕೇಳಿದ್ರಪ್ಪ " ನಿಮ್ಮ ಕೃತಿಗಳಲ್ಲಿ Sensual ಆದ Image ಗಳು ಬರುತ್ತವಲ್ಲಾ ಅದರದು ನಿಮ್ಮ main purpose ಏನು? ಅದು ಯಾತಕ್ಕೆ? ಅಂತ. " ಏನು ಗೀತಗೋವಿಂದ್‌ನಲ್ಲಿ ಬರ್ದ್ದೆ ಇರೋ sensual image ಗಳಾ? ಅವರ purpose ಗಳ ಬಗ್ಗೆ ಹೀಗೇ ಕೇಳ್ತೀರಾ? ನೀವು ಪೇಪರ್‌ನೋರು. ದುಡ್ಡು ಮಾಡ್ಕೋಳೋದಿಕ್ಕೆ ಇದು ಮಾಡ್ತೀರಾ " ಅಂತೆಲ್ಲಾ ಬಾಯಿಗೆ ಬಂದಂಗೆ ಬೈದು ಬಿಟ್ರು. ಹೊರಗೆ ಬಂದ್ವಿ. ಈಗ ನಾನನ್ನೋದು. ಅಂತದೇ ಒಂದು ಸನ್ನಿವೇಶಾನ ಬೇರೆ ಪತ್ರಿಕೆಗಳವರು ಹೇಗೆ deal

ಮಾಡ್ತಿದ್ರು. ನನಗೆ ಗೊತ್ತಿಲ್ಲಪ್ಪ. ನಾವು ಅಚಲದಲ್ಲಿ ಹಿಂದಿನ ದಿನ ಅವರು ಮಾತ್ನಾಡಿದ್ದು, ಅವರ ಮನೇಗೋಗಿದ್ದು ಅದನ್ನ ಹಾಗೇ ಬರೆದ್ವಿ. ಅದರಿಂದ ಆಗಿದ್ದೂಂದ್ರೆ ಚಿ. ನ. ಮಂಗಳಾಗೆ ವೈರಿ ಆದ್ವಿ ನಾವು. ಆತರದ ಯಾವ ಮುಲಾಜನ್ನು ಇಟ್ಕೊಂಡಿಲ್ಲ ನಾವು. ಯಾಕೆಂದ್ರೆ ನಮಗೆ ಬೆಂಬಲ ಕೊಡ್ತಿರೋರು ನಿಜವಾದ concern ನಿಂದ ಕೊಡ್ತಿದಾರೆ. ಅವರ ಬಗ್ಗೆ ಮೊದಲುಗೊಂಡು ನಾವು ವಸ್ತುನಿಷ್ಠವಾಗಿ ಇರಬಲ್ಲೆವು ಅನ್ನೋದು ನನ್ನ ವಿಶ್ವಾಸ. ಯಾರದೋ ಮುಲಾಜಿಗೆ ಯಾರದೋ ದುಡ್ಡಿಗಾಗಿ ಪತ್ರಿಕೆ ನಡೆಸ್ತಿಲ್ಲ. ಇದರಲ್ಲಿ collective effort ಇದೆ. ನಾನೇನೋ official ಆಗಿ ಸಂಪಾದಕೀ ಅಂತ ಕರ್ರೊಬಹುದು. ಜಿ. ಆರ್.ನ ಇನ್ನೇನೋ ಒಂದು ಅಂತ ಕರಿಯಬಹುದು. ಅಕ್ಷರದ ಅಭಿವ್ಯಕ್ತೀನೇ ತುಂಬಾ ಕಷ್ಟ ಆಗಿರೋವಾಗ ಒಂಚೂರು ಬರೆದ್ರೆ ಜಾತಿಗೀತಿಗಳಂತಹ ಸಂಬಂಧವಿಲ್ಲದ ನೆಪಗಳಲ್ಲಿ ಬೆದರಿಸೋಕ್ಕೆ ನಿಲ್ಲೋದೂ ಇದೆ.

ಒಂದ್ ಸಾರಿ ಮುಸ್ಲಿಂ ಅದಿವೇಶನವೊಂದರ ಬಗ್ಗೆ ಬರೆದಿದ್ದೆ. ಕೇರಳದಲ್ಲಿ ನಡೆದದ್ದು. ಅದು RSS ತರಾನೇ ಒಂದು ಲೀಗ್. ಮುಸ್ಲಿಂ ಲೀಗ್ ಅಂತ ಮಾಡ್ಕೊಂಡಿದಾರೆ. ಆದರೆ ಅದರಲ್ಲೂ ನಮಗೆ ಒಂದು ಪ್ರಗತಿ ಪರ ಅಂಶ ನೋಡೋದಿಕ್ಕೆ ಸಿಕ್ತು. ಮುಸ್ಲಿಂ ಲೀಗ್ ಇರ್‍ಬಹುದು. But ಆ ಹೆಂಗಸರು ಸಹ ಗಂಡಸರ ತರ ಆ ಮಹಾ ಅಧಿವೇಶನದಲ್ಲಿ ಕೂತಿದ್ರು. ಪ್ರಗತೀನೇ ಅಲ್ವಾ? ಬುರ್ಕಾ ಹಾಕ್ಕೊಂಡು ಕೂತಿರೋದೇ ಆಗ್ಲಿ. ನಾನೂ ನೀವೂ ಅಧಿವೇಶನದಲ್ಲಿ ಬಂದು ಕೂತ್ರೆ ಯಾವ ದೊಡ್ಡ ಸಂಗತಿಯೂ ಅಲ್ಲ ಸರಿ. ಅಲ್ಲಿನ ಜನ ಹೊರಗೆ ಬರ್‍ಬೇಕು. Slow ಆಗಿ move ಆಗ್ಬೇಕು. ಅದನ್ನೇ ಬರೆದ್ರೆ, ನಮಗೆ ಸಾರಾ ಅಬೂಬಕರ್ ಅವರಿಂದ ಕಾಗದ ಬಂತು ' ಏನು ನೀವು ? RSS ಜಮಾತೆ ಇಸ್ಲಾಂ ಎರಡೂ ಒಂದೇ. ಅದನ್ನ ಹೊಗಳಿದ್ರಿ ನಾನು ಅಚಲದಿಂದ ಇಂಥದನ್ನು Expect ಮಾಡಿರಲಿಲ್ಲ' ಅಂತ ಸುದೀರ್ಘವಾಗಿ ಬರೆದಿದ್ರು.

ಸಂ : ನೀವು ಹ್ಯಾಗೆ react ಮಾಡಿದ್ರಿ ?

ಅಚಲ : ನಾವು ಇದನ್ನ publish ಮಾಡಲ್ಲಾಂತ ಬರ್‍ದು ಹಾಕ್ಬಿಟ್ವಿ. ಹೇಮಲತಾ ಅವರು ನಾನು ಜವಾಬ್ದಾರಿ ತಗೋತಿನಿ ಅಂದ್ರು. 'ನಿಮ್ಮ ಹಿತದೃಷ್ಟಿಯಿಂದ ಪ್ರಕಟಿಸುವುದು ಬೇಡಾ ಎಂದು ನಿರ್ಧರಿಸಿದ್ದೇವೆ. ಈ ಕುರಿತು ಎಲ್ಲರನ್ನೂ ಕರೆದು ಚರ್ಚೆ ಮಾಡಿದ್ವಿ' ಅಂತ ಬರೆದರು ; ಹೀಗೆ ಎಲ್ಲ ಸಂದರ್ಭಗಳಲ್ಲೂ ನಾವು ಒಟ್ಟುಗೂಡಿ ನಿರ್ಧಾರಗಳನ್ನು ತಗೊಂಡಿದೀವಿ. ಸಾರಾ ಅವರು ಬರೆದದ್ದನ್ನು ನಾವು print ಮಾಡಲಿಲ್ಲ ಅಂದ್ರೆ ಕಾರಣ ಹೆದರಿ ಅಂತ ಅಲ್ಲ. ವ್ಯಕ್ತಿಗತ ಕಾರಣವೂ ಏನಿಲ್ಲ. ಆಮೇಲೆ ನಮ್ಮ ಪತ್ರಿಕೇನ ಯಾವ್ದೇ ಒಂದು ಜನರನ್ನ ಮೇಲೆತ್ತೋಕೆ ಕೆಳಗಿಳಿಸೋಕೆ ಬಳಸೋಕಾಗಲ್ಲ.

ಸಂ : ಹಾಗೆ ಮಾಡೋದು ಅದೊಂದು ತರದ ರಾಜಕಾರಣ ಅನ್ನಿ.

ಅಚಲ : ಆ ತರ ಅಚಲಾ ಆಗಲಿ, ಮಾನಸ ಆಗಲೀ ಯಾವುದೇ ವ್ಯಕ್ತಿಗಳ ಹಿಂದೆ ಇಲ್ಲ.

ಸಂ : ಒಂದು ವಿಶ್ವವಿದ್ಯಾಲಯದಂಥ ಸಂಸ್ಥೆಯೊಂದಿಗೆ ಸಣ್ಣ ಪತ್ರಿಕೆಗಳು ಅರ್ಥಪೂರ್ಣವಾಗಿ ಕೆಲಸ ಮಾಡುವ ಬಗ್ಗೆ ನಿಮಗೇನನ್ನಿಸುತ್ತೆ ?

ಅಚಲ : ನನಗೆ ವಿಶ್ವವಿದ್ಯಾಲಯಗಳಂತಹ ಸಂಸ್ಥೆಗಳೊಂದಿಗೆ ಕೆಲಸ ಮಾಡೋದರ ಬಗ್ಗೆ ಕೆಲವು ಪ್ರಶ್ನೆಗಳಿವೆ ಅನ್ನಿಸುತ್ತೆ. ಅಲ್ಲಿ ಪಾಲಿಸಿಗಳು ಸಾರ್ವತ್ರಿಕವಾಗಿರೋದು ಸಾಧ್ಯವಿಲ್ಲ. ಯಾವ್ದೋ ಒಂದು ಅವಧಿಯಲ್ಲಿ ಯಾರು ಆ ಸ್ಥಾನಗಳಲ್ಲಿ ಇದಾರೆ ಅನ್ನೋದರ ಮೇಲೆ ನಿರ್ಧಾರವಾಗ್ತದೆ. ಅದಕ್ಕೆ ಅಂಥಾ ಸಂದರ್ಭದಲ್ಲಿ ನಮ್ಮಂತ ಸಂಘಟನೆಗಳು ಅದರ ಜೊತೆ ನಿರಂತರವಾದ ಸಂಪರ್ಕ ಹೇಗೆ ಬೆಳೆಸಬಹುದು ? ನಮಗೆ ದೊಡ್ಡ ಪ್ರಮಾಣದಲ್ಲಿ ಕೆಲಸ ಮಾಡೋಕೆ ಶಕ್ತಿ ಇಲ್ಲ ಅನ್ನೋದು ನಿಜ. ಆದರೆ ಒಂದು ಸಾತತ್ಯ ಇರುತ್ತೆ ನಮ್ಮತರ ಚಳುವಳಿಗೆ. ನಾನೊಂದು ಸರ್ವೇಮಾಡಿ ನೋಡಿದೀನಿ. ಸುಮಾರು ವಿಶ್ವವಿದ್ಯಾಲಯಗಳಲ್ಲಿ ಈವಾಗ ಕಲ್ಕತ್ತಾ, ಬಾಂಬೆ, ಹೈದರಾಬಾದ್ ಈ ಮೂರು ಜಾಗಗಳಲ್ಲಿ. ಮಹಿಳಾ ಅಧ್ಯಯನಕ್ಕೆ ಅವಕಾಶ ಕಲ್ಪಿಸಿರುವ ವಿಶ್ವವಿದ್ಯಾಲಯಗಳಿವೆ. ಇಲ್ಲಿನ ಮಹಿಳಾ ಅಧ್ಯಯನ ಕೇಂದ್ರಗಳಲ್ಲಿ ಸ್ವಂತ ಏನೇನು ಗಿಟ್ಟಿಸಿಕೊಳ್ಳಬಹುದು ಅನ್ನೋ ಸ್ತ್ರೀವಾದಿಗಳು ತುಂಬಾ ಜನ ಇದ್ದಾರೆ. ಈ ಮಾತು ಎಲ್ಲ ವ್ಯಕ್ತಿಗಳಿಗೂ ಅನ್ವಯಿಸದಿದ್ದರೂ ತುಂಬಾ ಜನ ಹಾಗೇ ಕಾಣ್ತಾರೆ.

ಸಂ : UGC. ಅಂತಹ ದೊಡ್ಡ ಸಂಸ್ಥೆಗಳು ಬೇರೆ ಬೇರೆ University ಗಳಿಗೆ separate Dept. ಜೊತೆಗೆ ಸೆಲ್ಸ್ ಅಂತ ಕೊಡ್ತಾರೆ. ಅವರು ಏನ್ಮಾಡ್ತಾರೆ ಅಂದ್ರೆ ಒಂದು ವ್ಯಕ್ತಿಗೋ ಅಥವಾ ಒಂದು dept. ಗೋ ಈ ಸೆಲ್ಲನ್ನು ಅಸೈನ್ ಮಾಡಿಬಿಡ್ತಾರೆ. ಈ ಅಸೈನ್‌ಮೆಂಟ್ ಜವಾಬ್ದಾರಿಯನ್ನು ಪದೇ ಪದೇ ಬದಲಾಯಿಸ್ತಾನೂ ಇರ್ತಾರೆ. ನಮ್ಮಲ್ಲಿ ಮೈಸೂರು, ಗುಲ್ಬರ್ಗಾ, ಧಾರವಾಡ university ಗಳಲ್ಲೂ ಇಂಥಾ ಸೆಲ್‌ಗಳಿವೆ. UGC. ಸಂಸ್ಥೆಯಿಂದ ಬರೋದು ಆರ್ಥಿಕವಾದ ನೆರವು ಮಾತ್ರ. ಜೊತೆಗೆ ಈ ಅವಕಾಶ ಅಲ್ಪಾವಧಿಗೆ ದೊರೆತಿರೋದು ಅಂದಾಗ ಏನಾಗುತ್ತೆ ಅಂದ್ರೆ ಆ ಸೆಲ್‌ಗಳು ಏನೂ ಸಾಧನೆ ಮಾಡಲಿಕ್ಕಾಗಲ್ಲ. ಮೈಸೂರಿನ ಒಂದು ಸೆಲ್‌ನಲ್ಲಿ ಸ್ವಲ್ಪ ಕೆಲ್ಸ ನಡೆದಿದೆ. ಕೆಲವು ಸೆಲ್‌ಗಳಲ್ಲಿ ಏನೂಂದ್ರೆ ಏನೂ ನಡೆದಿಲ್ಲ. ಅವಧಿ ಬರತ್ತೆ, ಹೊರಟುಹೋಗುತ್ತೆ ಅಷ್ಟೇ. ಇಂತಹ ಕಷ್ಟಗಳು ಯೂನಿವರ್ಸಿಟಿಯಲ್ಲಿರುವ ಜನಗಳಿಗೂ ಇದೆ ಅನ್ನಿ.

ಅಚಲ : ನಮ್ಮಂತಹ ಸಂಘಟನೆಗಳಿಗೆ ಮಹಿಳಾ ಅಧ್ಯಯನ ಅನ್ನೋದು ಒಂದು ಕಮಿಟ್‌ಮೆಂಟ್. ಯಾವ ಪರ್ಸ್‌ಪೆಕ್ಟಿವ್ ಇಲ್ಲದೆ, ಕಮೀಟ್‌ಮೆಂಟ್ ಇಲ್ಲದೆ ಸರ್ಕಾರಿ ಹುದ್ದೆಗಳಲ್ಲಿ ಇರುವವರಿಗೆ ಇದು ಕೇವಲ ಸಂಬಳದ ಆಸಕ್ತಿಯಾಗಬಹುದು.

ಸಂ : ಅಷ್ಟು ಸಲೀಸಾಗಿ ಸರ್ಕಾರದ್ದು ಅನ್ನೋ ಕಾರಣಕ್ಕಾಗಿ ಸಾರಾಸಗಟಾಗಿ ಆರೋಪಗಳನ್ನು ಮಾಡಬೇಕಾಗಿಲ್ಲ ಅನ್ನಿಸುತ್ತೆ. ನಾವೇ ಕಂಡ ಹಾಗೆ ಎಷ್ಟೋ ಸರ್ಕಾರಿ ಕಾರ್ಯಕ್ರಮಗಳು ಮೂಲತಃ ಅರ್ಥಪೂರ್ಣವಾಗಿರತ್ವೆ. ಅವುಗಳಲ್ಲಿ ಹಣಾನೂ ಇರುತ್ತೆ. ಇನ್ನೂ ಎಷ್ಟೋ ಸೌಲಭ್ಯಗಳೂ ಇರುತ್ತವೆ. ಅವುಗಳ ಬಳಕೆ ಸರಿಯಾಗಿ ಆಗದೇ ಹೋಗೋದಕ್ಕೆ ಕಾರಣಗಳು ಬೇರೆ ಕಡೆಯೂ ಇರಬಹುದು. ಈಗ ದಲಿತರಿಗೆ ಸಂಬಂಧ

ಪಟ್ಟಂತೆ ಪರಿಶಿಷ್ಟರಿಗೆ ಸಂಬಂಧ ಪಟ್ಟಂತೆ ಸರ್ಕಾರಿ ಯೋಜನೆಗಳು ಅವರ ವರ್ಗಕ್ಕೆ ತಲುಪದೇ ಇರೋದಿಕ್ಕೆ ಏನೇನು ಕಾರಣಗಳಿದ್ದಾವೋ ಹಾಗೆ. ಮಹಿಳೆಯರಿಗೆ ಇರೋ ಸೌಲಭ್ಯಗಳನ್ನು ಅವರಿಗೆ ತಲುಪದಂತೆ ಮಾಡುವ ಕಾರಣಗಳೂ ಇವೆ. ಈ negetive aspects ನಮ್ಮ ಸಮಾಜದ ಉದ್ದಗಲಕ್ಕೂ ಇದೆ. ಆ ಚರ್ಚೆ ಇಲ್ಲಿ ಬೆಳೆಸೋದು ಬೇಡ. ಸದ್ಯಕ್ಕೆ ನಾನು ಕೇಳ್ತಿರೋ ಪ್ರಶ್ನೆ ಸಣ್ಣ ಪ್ರಮಾಣದ ಸಂಘಟನೆಗಳು ಸಮುದಾಯಗಳು ವಿಶಾಲವ್ಯಾಪ್ತಿಯ ಸರ್ಕಾರಿ ಸಂಘಸಂಸ್ಥೆಗಳೊಂದಿಗೆ ಯಾವ ಬಗೆಯಲ್ಲಾದರೂ ಕೂಡಿ ಕೆಲಸ ಮಾಡುವ ಸಾಧ್ಯತೆಗಳನ್ನು ಕುರಿತದ್ದು.

ಅಚಲ : ನಮ್ಮಂತಹ ಸಂಘಟನೆಗಳು ಸರ್ಕಾರದೊಂದಿಗೆ ಹೇಗೆ ಸಂಪರ್ಕ ಸಾಧಿಸೋದು ಅನ್ನೋದು ನಮಗೆ ನಿತ್ಯದ ಹೋರಾಟ. ಉದಾಹರಣೆಗೆ Women's Commission ತೊಗೊಳ್ಳಿ. ಮಹಿಳೆಯರ ಮೇಲಿನ ದೌರ್ಜನ್ಯದ ಪ್ರಸಂಗಗಳನ್ನು ಯೂನಿವರ್ಸಿಟಿ ವಿದ್ವಾಂಸರಿಗೆ ಹೇಳೋದಿಕ್ಕೆ ಹೋಗ್ಲಿ. ಅವರಿಗೆ ಅರ್ಥಾನೇ ಆಗೋ ಹಾಗೆ ಕಾಣಲ್ಲ. ಹೋಗ್ಲಿ ಈ Womens commission ಗಳಲ್ಲಿ ಮೋಹಿನಿಗಿರಿ ಅಂಥವರು ನಮಗೆ ಬೇಕು. ಆದ್ರೆ ಗೌರ್ಮೆಂಟ್ ಅನ್ನೋದೇನ್ ಮಾಡತ್ತೆ? ಇವರು ತಮ್ಮ ಪಕ್ಷಕ್ಕೆ ಬೇಕಾದೋರ್ನ ಅವರಿವರನ್ನ, ಎಲ್ಲಿ ಅತೃಪ್ತ ಜೀವಿಗಳಿರ್ತಾರಲ್ಲ ಅವರನ್ನ ತೃಪ್ತಿ ಮಾಡೋಕೆ Womens commission ಗಳಲ್ಲೂ ಅಂಥವರನ್ನೇ ತುಂಬಿರ್ತಾರೆ. ಮಹಿಳೆಯರ ಬಗೆಗೆ ಅಂತ ಇಂಥವರಲ್ಲಿ ವಿಶೇಷ ಆಸಕ್ತಿ ಅನ್ನೋದೇನೂ ಇರಲ್ಲ. ಇವರಿಂದ ನಿಜವಾದ ಕಮಿಟ್‌ಮೆಂಟ್‌ನಿಂದ ಕೆಲಸ ಮಾಡುವ ಸಂಘಟನೆಗಳು ಏನನ್ನು ತಾನೇ ನಿರೀಕ್ಷಿಸಬಹುದು? "ಸೌಂದರ್ಯಸ್ಪರ್ಧೆ" ಸಮಯದಲ್ಲಾದದ್ದನ್ನೇ ತೊಗೊಳ್ಳಿ. ಇಲ್ಲಿ ನಾವು ಸೌಂದರ್ಯ ಸ್ಪರ್ಧೆಗೆ ಕಾವ್ಯ ಪ್ರತಿಭಟನೆ ಅಂತ ಕವನ ಬರ್ಕೊಂಡು ಕೂತಿದ್ರೆ, ಕೈಮುಗಿತಾ ಪೋಲಿಸ್ ಸಬ್‌ಇನ್‌ಸ್ಪೆಕ್ಟರ್ ಬಂದು "ಮೇಡಂ ಲೇಡಿ ಪೋಲಿಸ್ ಇಲ್ಲಾ, ದಯವಿಟ್ಟು ಮನೆಗೆ ಹೋಗಿ" ಅಂದರು. ಆಗಲೂ ಪೇಪರ್ನಲ್ಲಿ ನಾವೆಲ್ಲ ಅರೆಸ್ಟ್ ಆಗಿದ್ದೀವಿಂತ ಬಂದಿತ್ತು. ಅದ್ ನೋಡಿ! ಅರೆಪ್ಟಾಗದೇನೂ ಬರುತ್ತೆ ನ್ಯೂಸು! ಲೇಡಿ ಪೋಲಿಸ್ ಇಲ್ಲಾಂತ ನಮ್ಮನ್ನ ಮುಟ್ಟಿಲ್ಲ. ಆದರೆ ಹಳ್ಳಿಗಳ ಗಲಾಟೆಗಳ ಸಂದರ್ಭದಲ್ಲಿ ಹೋಗಿ ಜುಟ್ಟಿಡಿದು, ಸೀರೆ ಎಳೆದು, ಅವರ ಮೈಮೇಲೆಲ್ಲ ಬಡಿದು ಎಲ್ಲಾ ಪೋಲಿಸ್ ಇನ್‌ಸ್ಪೆಕ್ಟರೇ ಮಾಡಿದಾರೆ. Womens commission ಏನ್ ಕತ್ತೆ ಕಾಯ್ತಾ ಇದೆಯಾ? So ಯಾತಕ್ಕೇಳ್ತಿನೀಂದ್ರೆ ನೀವೇಳ್ದಂಗೆ project ಗಳಿವೆ. ಬಾಡಿಗಳಿವೆ. ಅಲ್ಲಿಗೋಗ್ಬೇಕಾದವರಿಗೆ ಅರ್ಹತೆ ಇದೆಯಾ ಪ್ರಶ್ನೆ. ಇದಕ್ಕೆಲ್ಲಿ ಸೇತುವೆ ನಿರ್ಮಿಸ್ಬೇಕೊಂದ್ರೆ 'ಅಯ್ಯೋ ನಾನೇನ್ ಹೇಳೋಕ್ಕಾಗುತ್ತೆ' ಅಂತ ಕೂತ್ಕೋಳೋಕಾಗಲ್ಲ. ನಾವದನ್ನ ಒತ್ತಾಯ ಮಾಡಿ ಇವತ್ತು womens Commission, next ಇನ್ನೊಂದು ಸಾವು ಗಲಾಟೆ ಮಾಡ್ಬೇಕು. ನೀವು ಅದರಲ್ಲಿ ಹಾಕುವವರು ಚಳುವಳಿಗಳಿಗಾಗಲಿ ಮಹಿಳೆಯರಿಗಾಗಲಿ ಏನಾರು ಮಾಡುವಂತಹ ಮನಸ್ಸು, capacity ಇರ್ಬೇಕು ಮತ್ತು ಅವರು non political ಆಗಿರ್ಬೇಕು ಅಂತ ಗಲಾಟೆ ಮಾಡೋದು. ಆದ್ರೆ ಅಲ್ಲಿ Womens commission ನಲ್ಲಿ ಗಲಾಟೆ ಮಾಡ್ಬಹುದು. ಈ university

body ಗೆ ಯಾರು ಮಾಡೋಕಾಗುತ್ತೆ ಅದು independet ತಾನೆ?

ಸಂ : ನಾನು ಆ ಹಿನ್ನೆಲೆಯಲ್ಲೇ ಕೇಳಿದ್ದು. ಅಕಾಡೆಮಿಕ್ ಚಿಂತನೆಗಳು ಕೇವಲ ಬೌದ್ಧಿಕ ಕಸರತ್ತುಗಳೆನಿಸಿ ಹೊರೆಯಾಗಬಾರದು. ಹಾಗೆಯೇ activist ಚಟುವಟಿಕೆಗಳು ಯಾವ ದಿಕ್ಸೂಚಿಗಳನ್ನೂ ನಿರ್ಮಿಸದ ಭಾವೋದ್ವೇಗದ ಪ್ರಸಂಗಗಳೆನಿಸಿ ದುರ್ಬಲವಾಗಬಾರದು. ಇದಕ್ಕೊಂದು ದಾರಿಯಾಗಿ ಈ ಎರಡೂ ಕ್ಷೇತ್ರಗಳು ಎಲ್ಲಾದರೂ ಒಗ್ಗೂಡುವುದು ಉಚಿತವಲ್ಲವೆ?

ಅಚಲ : ನಿಮ್ಮ ಸಮಸ್ಯೆ ನನಗೆ ಅರ್ಥ ಆಯ್ತು. ಈಗ ನನಗೇನನ್ನುತ್ತೇಂದ್ರೆ Theory ಒಂದ್ ಕಡೆ ಇದೆ. Practie ಒಂದ್ ಕಡೆ ಇದೆ. ಈಗ Theory ಮತ್ತು practice ಬೇರೆ. ಯಾರು practice ಮಾಡ್ತಾ ಇರೋ ಜನ ಇದಾರಲ್ಲ ಅವರಿಗೆ Theory ಬಗೆಗೂ ತಿಳಿಸುವಂತಹ, ಹೇಗಾದ್ರೂ, ಯಾವ್ದಾದ್ರೂ ಒಂದು ರೀತಿ Theory ಜೊತೆ ಹೊಂದಿಕೊಳ್ಳೋ ಅಂತಾದ್ದು, ಮತ್ತೆ ಬರೀ ಸಿದ್ಧಾಂತಿಗಳು (theoreticians) ಆಗಿ ಕೂತಿರೊರ್ಗೆ ಪ್ರಾಗ್ಮಾಟಿಸಂ ಕಡೆ ಎಳ್ಕೊಂಡು ಬರುವ ಅಥವಾ ಅದನ್ನ ಪರಿಚಯ ಮಾಡ್ಸೋದು. ಎಳ್ಕೊಂಡು ಬರೋದೂಂದ್ರೆ ನೀವು ಬಂದು ಇಂಥಾ ಕಡೆ ನಿಂತ್ಕೊಳ್ರಿ ಅಂತ ಅಲ್ಲ. ಆದರೆ ಅದರ ಬಗೆಗೆ ಒಂದು ರೀತಿಯ positive ಅಭಿಪ್ರಾಯ ಇರ್ಬೇಕು. ನಾನಿವಾಗ 'ಹೌದು ಬಿಡಪ್ಪ ದಂತಗೋಪುರದಲ್ಲಿ ಕೂತ್ಕೊಂಡೇನೋ ಬರ್ಕೊತಾರೆ' ಅನ್ನೋದನ್ನೂ ಮಾಡ್ಬೇಕಾಗಿಲ್ಲ. ಯಾಕೇಂದ್ರೆ ವಿಶ್ಲೇಷಣೆ ಇಲ್ದಿದ್ರೆ ನಮ್ಮ ಚಟುವಟಿಕೆ ಕೂಡ ತಪ್ಪಾಗಿ ಹೋಗ್ಬಿಡುತ್ತೆ. ತಪ್ಪು ದಾರಿಗೆ ಹೋಗುತ್ತೆ. ಆ Theory ಮಾಡ್ತಾ ಇರೋರು 'ದಾರಿಲೇನೋ slogan ಕೂಕ್ಕೊಂಡು ಹೋಗ್ತಾರೆ ಅದು ಯಾರಿಗ್ಗೊತ್ತು' ಅನ್ನುವಂತಹ ಮನೋಭಾವ ಇದ್ರೆ ಕಷ್ಟ. ನಮ್ಮ ಚಟುವಟಿಕೆಗಳನ್ನು ವಿವರಿಸಿ ವಿಶ್ಲೇಷಿಸುವ ಬಗ್ಗೆ ಇಬ್ಬರೂ ಒಟ್ಟುಗೂಡಿ ಚರ್ಚೆ ನಡೆಸಿದರೆ ಹೆಚ್ಚು ಉಪಯುಕ್ತ. ನಮ್ಮ ಕೆಲಸಗಳನ್ನು ವಿವಿಧ ಆಯಾಮಗಳಿಂದ ನೋಡಿ, ಮುಂದಿನ ಕೆಲಸಗಳಿಗೆ ನಾವು ಅನೇಕ ಸೂಚನೆಗಳನ್ನು ಪಡೆದುಕೊಳ್ಳಬಹುದು. ಹಾಗೆಯೇ ಜೀವಂತ ಚಟುವಟಿಕೆಗಳನ್ನು ವಿವರವಾಗಿ ನೋಡಿ ಗ್ರಹಿಸುವ ಮೂಲಕ ಚಿಂತನೆ ಸಿದ್ಧಾಂತಗಳನ್ನು ರೂಪಿಸುವವರು ಹೊಸ ಬೆಳಕನ್ನು ಕಂಡುಕೊಳ್ಳಬಹುದು. ಬಹುಶಃ ಪರಸ್ಪರರು ಪದೇ ಪದೇ ಒಂದು ಕಡೆ ಸೇರಿ ಒಂದಿಷ್ಟು ವಿಚಾರ ವಿನಿಮಯ ಮಾಡಿಕೊಳ್ಳುವ ಅವಕಾಶಗಳನ್ನು ಕಲ್ಪಿಸಿಕೊಳ್ಳಲು ಸಾಧ್ಯವಾದರೆ ಇಂಥದೊಂದು ಉದ್ದೇಶವೂ ಈಡೇರಬಹುದು. ಈಗ ನೀವು ನಮ್ಮ ಅನುಭವಗಳನ್ನು ಕೇಳಲು, ಸ್ಪಂದಿಸಲು ಬಂದಿರಲ್ಲಾ ಹಾಗೆ.

ಸಂ : ನೀವೂ ಅಷ್ಟೇ ಸ್ನೇಹದಿಂದ, ಮುಕ್ತವಾಗಿ ಮಾತಾಡಿದಿರಿ. ತುಂಬಾ ಸಂತೋಷವಾಯ್ತು. ಇಬ್ಬರಿಗೂ ಇದು ಉಪಯುಕ್ತವಾಗಿದೆ ಅಂತ ತಿಳೀತೀನಿ.

ರಾತ್ರಿ ಒಂಬತ್ತು ಹೊಡೆದು ಹೋಗಿತ್ತು. ದೂರದ ಚಾಮರಾಜಪೇಟೆಗೆ ನಾನು ತಲುಪಬೇಕೆಂದರೆ ಇನ್ನೂ ಒಂದುಗಂಟೆ ಬೇಕಾಗಬಹುದು. ಹರಟೆಯ ಸೌಖ್ಯವನ್ನು ಮೊಟಕುಗೊಳಿಸಲೇಬೇಕು. ಅದೇನೋ ಗಂಭೀರ ಚರ್ಚೆ ಎಂಬಂತೆ 'ಅಚಲ ಪತ್ರಿಕೆಯ

ಸಂದರ್ಶನ'ಕ್ಕೆ ಬಂದಿದ್ದ ನಾನು, ಗಾಯಿತ್ರಿಯೊಂದಿಗೆ ಹರಟೆ ಹೊಡೆಯುತ್ತಾ ಕುಳಿತೆ. ಆಕೆ ಮೊದಲು ಹೇಳಿದ ಹಾಗೆಯೇ ನಾನೂ ಪ್ರೊಫೆಷನಲ್ ಸಂದರ್ಶಕಿಯಾಗಲಿಲ್ಲ, ಆಕೆಯೂ ಅಂತಹ 'ಸಂದರ್ಶನ'ವನ್ನೇನೂ ನೀಡಲಿಲ್ಲ. ಆದರೂ ಉಪಯುಕ್ತವಾದ ಅನುಭವ ವಿನಿಮಯವಂತೂ ಆಗಿತ್ತು. ಕಾಳಜಿ, ಮುತುವರ್ಜಿ, ನಿಷ್ಠೆಗಳು ಇರಬೇಕೆಂಬುದು ಮೊದಲ ಅಗತ್ಯ. ಮಿಕ್ಕ ಅರ್ಹತೆಗಳನ್ನು ನಿಧಾನವಾಗಿ ಕೂಡಿಸಿಕೊಳ್ಳುತ್ತಾ ಪತ್ರಿಕೆಯನ್ನು ಉಪಯುಕ್ತವೆನಿಸುವಂತೆ ಬೆಳೆಸುವುದು ಕಷ್ಟವಾಗಲಾರದು. ಇಷ್ಟಕ್ಕೂ ಒಬ್ಬಿಬ್ಬರು ವ್ಯಕ್ತಿಗಳು ಕೂಡಿ ಇಷ್ಟನ್ನು ಮಾಡಬಹುದಾದರೆ, ಒಂದು ಗಣ್ಯ ಸಂಸ್ಥೆಯ ಭರವಸೆ ಬೆಂಬಲಗಳು ನಮ್ಮ ಪತ್ರಿಕೆಗೆ ಇದೆ ಎಂದ ಮೇಲೆ ಎಷ್ಟನ್ನೋ ಸಾಧಿಸಬಹುದು ಎಂಬ ಆತ್ಮವಿಶ್ವಾಸದಿಂದ ಅವರನ್ನು ಬೀಳ್ಕೊಟ್ಟು ಬಂದೆ.



"ಗಂಡ, ಬ್ರಹ್ಮ ವಿಷ್ಣು ಮಹೇಶ್ವರನಾದರೆ ಹೆಂಡತಿಯೂ ಅಷ್ಟೇ.
ಹೆಂಡತಿ ದಾಸಿಯಲ್ಲ; ಸಮಾನಾಧಿಕಾರವುಳ್ಳ ಗೆಳತಿ, ಸಹಚಾರಿಣಿ.
ಇಬ್ಬರೂ ಪರಸ್ಪರ ಗುರುಗಳು"

(ಮೋ. ಕ. ಗಾಂಧಿ)

## ಅನುಭವ ಕಥನ

# ಪಿಳ್ಳಮ್ಮನವರ ಕಥೆ

ನಿರೂಪಣೆ ಡಾ. ಎಂ. ಉಷಾ

### ಅಂಗನವಾಡಿಗಳು

ಭಾರತ ಸರ್ಕಾರವು ಗ್ರಾಮಾಂತರ ಮತ್ತು ನಗರ ಪ್ರದೇಶಗಳಲ್ಲಿ ೩,೦೦,೦೦೦ ಅಂಗನವಾಡಿ ಕೇಂದ್ರಗಳಲ್ಲಿ ೬,೦೦,೦೦೦ ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕಿಯರನ್ನು ಸಮಗ್ರ ಮಕ್ಕಳ ಮತ್ತು ತಾಯಂದಿರ ಅವಶ್ಯಕ ಸೇವೆಯನ್ನು ಒದಗಿಸಲು ನೇಮಿಸಿದೆ. ಕರ್ನಾಟಕದಲ್ಲಿ ೨೯,೦೦೦ ಕೇಂದ್ರಗಳಲ್ಲಿ ೫೮,೦೦೦ ಮಂದಿ ರಾಜ್ಯದ ಗ್ರಾಮೀಣ ಪ್ರದೇಶ ಗುಡ್ಡಗಾಡು ಪ್ರದೇಶ ಮತ್ತು ಕೊಳಚೆ ಪ್ರದೇಶಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ದೇಶದ ನೀತಿ "ಮಕ್ಕಳು ದೇಶದ ಅತ್ಯಂತ ಪ್ರಮುಖ ಆಸ್ತಿ ಅವರ ಪೋಷಣೆ ಸರ್ಕಾರದ ಹೊಣೆ" ಎಂಬುದಾಗಿದೆ. ಅದರಂತೆ ಸರ್ಕಾರ ಮಕ್ಕಳ ಜನನ ಪೂರ್ವ ಮತ್ತು ಜನನದ ನಂತರದ ದೈಹಿಕ ಮತ್ತು ಮಾನಸಿಕ ಬೆಳವಣಿಗೆಗೆ ಅಗತ್ಯ ಸೇವೆ ಒದಗಿಸಲು ಬದ್ಧವಾಗಿದೆ. ಅದಕ್ಕೆ ಪೂರಕವಾಗಿ ಸಮಗ್ರ ಬಾಲ ವಿಕಾಸಯೋಜನೆ ಅಕ್ಟೋಬರ್ ೧೯೭೫ ರಲ್ಲಿ ಪ್ರಾರಂಭವಾಯಿತು. ಅಂಗನವಾಡಿಗಳು ಯೋಜನೆಯ ಫಲವನ್ನು ಮಕ್ಕಳಿಗೆ ಮತ್ತು ತಾಯಂದಿರಿಗೆ ತಲುಪಿಸುವ ಕೇಂದ್ರಗಳು. ಆದ್ದರಿಂದ ಅಂಗನವಾಡಿ ಕಾರ್ಯಕರ್ತೆಯರ ಪಾತ್ರ ಯೋಜನೆಯ ಯಶಸ್ವಿ ಅನುಷ್ಠಾನದಲ್ಲಿ ಅತಿ ಪ್ರಮುಖವಾದುದ್ದು ಅಂಗನವಾಡಿ ಕಾರ್ಯಕರ್ತೆಯರು ಅಲ್ಲಿನ ಸಮುದಾಯಕ್ಕೆ ಸೇವೆಯನ್ನು ಖುದ್ದಾಗಿ ಅಥವಾ ಇತರ ಇಲಾಖೆ (ಆರೋಗ್ಯ, ವಿದ್ಯಾ, ಗ್ರಾಮೀಣ ಅಭಿವೃದ್ಧಿ) ಗಳ ನೆರವಿನಿಂದ ಒದಗಿಸುತ್ತಾರೆ. ಆದಕ್ಕಾಗಿ ರಾಜ್ಯದ ಎಲ್ಲೆಡೆ ತರಬೇತಿ ಕೇಂದ್ರಗಳಲ್ಲಿ ತರಬೇತಿ ನೀಡಲಾಗುತ್ತದೆ. (೧೯೫ರ ಮಾಹಿತಿ)

ಪತ್ರಿಕೆಯ ಮೊದಲ 'ಅನುಭವ ಕಥನ' ಅಂಕಣವನ್ನು ಅಂಗನವಾಡಿ ಕಾರ್ಯಕರ್ತೆಯರಿಗೆ ಸಂಬಂಧ ಪಟ್ಟಂತೆ ಸಿದ್ಧಪಡಿಸಲಾಗಿದೆ. ಸಮಾಜದ ತಳಮೂಲದ ಹಂತದಲ್ಲಿ ಕೆಲಸ ನಿರ್ವಹಿಸುತ್ತಿರುವ ಅಂಗನವಾಡಿ ಕಾರ್ಯಕರ್ತೆಯರ ಸೇವೆಯಂತೆಯೇ ಅವರ ಸಮಸ್ಯೆಗಳು ಸಹ. ಅತ್ಯಂತ ಹೆಚ್ಚು ಕೆಲಸ ಹಾಗು ಅತೀ ಕಡಿಮೆ ಪ್ರತಿಫಲದ ಕ್ಷೇತ್ರವಾದ ಇದರ ಬಗ್ಗೆ ನಾವು ವಿಶೇಷವಾದ ಎಚ್ಚರವೊಂದನ್ನು ಸಮಾಜದಲ್ಲಿ ತರಬೇಕಿದೆ ಎನ್ನುವಂತಹ ವಿಚಾರ ನಮ್ಮ ಮುಂದಿದ್ದಾಗ ಬೆಂಗಳೂರು ಜಿಲ್ಲೆಯ ಅನೇಕಲ್ ತಾಲ್ಲೋಕಿನ ನಿಕ್ಕುಂದಿ ದೊಮ್ಮಸಂದ್ರದಲ್ಲಿ ಕೆಲಸ ನಿರ್ವಹಿಸುತ್ತಿರುವ ಬಿ. ಪಿಳ್ಳಮ್ಮ ಅವರನ್ನು ಕುರಿತ ಸಣ್ಣ ವರದಿಯೊಂದು ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟಗೊಂಡದ್ದು ಕಣ್ಣಿಗೆ ಬಿತ್ತು. 'ನೆಕ್ಕುಂದಿ ದೊಮ್ಮಸಂದ್ರದ ಮಾದರಿ ಅಂಗನವಾಡಿ ಕೇಂದ್ರ ಅದೃಷ್ಟವನ್ನು ಹೊಂದಿದೆ.. ಏಕೆಂದರೆ ಈ ಕೇಂದ್ರಕ್ಕೆ ಉತ್ತಮ ಕಟ್ಟಡ ಇದೆ. ಕಟ್ಟಡದ ಮುಂದೆ ವಿಶಾಲವಾದ ಜಾಗವಿದೆ. ಪಿಳ್ಳಮ್ಮ ಎಂಬ ಉತ್ತಮ ಕಾರ್ಯಕರ್ತೆ ಇದ್ದಾರೆ' ಎನ್ನುವ ವಿವರ ದೊರಕಿತು. ಅವರನ್ನೇ ಏಕೆ ಸಂದರ್ಶಿಸಬಾರದು ಎಂದು ನಿರ್ಧರಿಸಿ ಅವರನ್ನು ಭೇಟಿಮಾಡಿದೆ. ವ್ಯಕ್ತಿ-ಸರ್ಕಾರ- ಸಮಾಜ ಎನ್ನುವ ತ್ರಿಕೋನ ರಚನೆಯಲ್ಲಿ ಅವರನ್ನು ಮಾತನಾಡಿಸಿದೆ. ಪಿಳ್ಳಮ್ಮನವರೂ ಸರಿ ಸುಮಾರು ೨೦ ವರ್ಷದ ತಮ್ಮ ಸೇವಾವಧಿಯಲ್ಲಿ ಹನ್ನೆರಡಕ್ಕೂ ಹೆಚ್ಚು ಸೇವಾ ತರಬೇತಿ ಕೇಂದ್ರಗಳಲ್ಲಿ ಭಾಗವಹಿಸಿ, ತರಬೇತಿ ಪಡೆದು, ಅದರ ಜ್ಞಾನವನ್ನೆಲ್ಲ ತಮ್ಮ ಸೇವೆಯಲ್ಲಿ ಅಳವಡಿಸಿಕೊಂಡಿರುವುದಲ್ಲದೆ ೧೯೯೦ ರಲ್ಲಿ ಸಮಗ್ರ ಬಾಲ ವಿಕಾಸ ಯೋಜನೆಯ ಪ್ರಶಸ್ತಿಯ ಜೊತೆಗೆ ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಹಲವಾರು ಬಹುಮಾನಗಳನ್ನು ಪಡೆದುಕೊಂಡವರು. ತಮ್ಮ ಅಂಗನವಾಡಿ ಕೇಂದ್ರವು ಮಾದರಿ ಅಂಗನವಾಡಿ ಕೇಂದ್ರವಾಗಿ ರೂಪುಗೊಳ್ಳುವಲ್ಲಿ ದುಡಿದವರು. ಅವರ ಆ ಮಾತುಕತೆಯೊಂದಿಗೆ ಈ ಅಂಕಣ ರೂಪುಗೊಂಡಿದೆ.



**ಅಂಗನವಾಡಿಯ ಅಂಗಳದಲ್ಲಿ .....**

'ನನ್ ಹೆಸ್ರು ಪಿಳ್ಳಮ್ಮ ಅಂತ. ಆನೇಕಲ್ ತಾಲ್ಲೋಕ್ ನೆಕ್ಕುಂದಿ ದೊಮ್ಮಸಂದ್ರದಲ್ಲಿ ಅಂಗನವಾಡಿ ಟೀಚರ್ ಆಗಿದೀನಿ. ನಮ್ಮೂರು ಮುತ್ತಾನಲ್ಲೂರು. ಅದೇ ತಾಲೋಕ್‌ನಲ್ಲಿದೆ. ಎಂಟನೇ ಕ್ಲಾಸ್‌ವರೆಗೆ ಓದಿದೀನಿ. ಅಷ್ಟೊತ್ತಿಗೆ ಮದ್ವೆ ಆಗೋಯ್ತು. ನಂಗೀಗ ನಲವತ್ತೈದು ವರ್ಷ. ಸುಮಾರು ಇಪತ್ತೊರ್ಷದಿಂದ ಈ ಕೆಲ್ಸ ಮಾಡ್ತಿದೀನಿ... ನಮ್ ತಂದೆನೂ ತುಂಬಾ ಬಡವ್ರು. ಟೈಲರ್ ಕೆಲ್ಸ ಮಾಡ್ತಿದ್ರು... ಆವೊತ್ತು ನನ್ನ ಇಷ್ಟು ಓದಿಸಿದ್ದೇ ಹೆಚ್ಚು... ನನ್ನ ಕೊಟ್ಟ ಮನೇಲೂ ಬಡತನಾನೇ ... ನಾನೂ ತುಂಬಾ ಕಷ್ಟಪಟ್ಟಿದೀನಿ... ಆ ಕಷ್ಟದಲ್ಲೇ ಮೂರು ಮಕ್ಕಳನ್ನ ಹೆತ್ತೆ. ಎರಡು ಗಂಡು ಒಂದು ಹೆಣ್ಣು...'

ಆ ಹೆಣ್ಣು ಮಗಳ ಮನೆಯಲ್ಲೇ ಕುಳಿತು ಬಿ. ಪಿಳ್ಳಮ್ಮ ತಮ್ಮ ಬಾಳಿನ ಬುತ್ತಿಯನ್ನು ನನ್ನೆದುರು ಬಿಚ್ಚಿದ್ದರು. ಸ್ವಲ್ಪ ದಿನದ ಹಿಂದಷ್ಟೇ ದಿನಪತ್ರಿಕೆಯೊಂದರಲ್ಲಿ ಪಿಳ್ಳಮ್ಮನ

ಕುರಿತ ಮಾಹಿತಿ ಇದ್ದ ಪೇಪರ್ ಕಟಿಂಗ್ ನನ್ನ ಕೈಲಿತ್ತು. ಮೊಮ್ಮಗನ ಜೊತೆ ಎರಡು ದಿನ ಇದ್ದು ಹೋಗಲೆಂದು ಬಂದಿದ್ದ ಪಿಳ್ಳಮ್ಮ ನನ್ನೊಡನೆ ನಿಸ್ಸಂಕೋಚವಾಗಿ ಬೆರೆತರು. ತನ್ನ ಬೆವರಿನ ಬೆಲೆಯಾಗಿ ನಾಲ್ಕು ಒಳ್ಳೆಯ ಮಾತಿಗೆ ಹಂಬಲಿಸುವ ಮುಗ್ಧ ಸ್ವಭಾವದ ಆಕೆ ಪತ್ರಿಕೆಯಲ್ಲಿ ನಿಮ್ಮ ಬಗ್ಗೆ ಬರೀತೀನಿ ಅಂದ ಕೂಡಲೆ ಓಗ್ಗಿದರು.

'ಜೀವನದಲ್ಲಿ ನಾನು ಬಾಳಾ ನೊಂದಿದೀನಿರ್ರಿ. ಗಂಡನ ಆಶ್ರಯವಿಲ್ದೆ.. ಸರಿಯಾದ ವಿದ್ಯೆ ಇಲ್ಲ. ತೌರಿನವರ ಹಂಗಿಗೆ ಬೀಳಲಾರ್ದೆ. ಒಬ್ಬೊಂಟಿಯಾದ್ರೂ ಸರಿ ಒಳ್ಳೆಯದಾಗಿ ಬದುಕಿ ತೋರ್ಸಬೇಕು ಅಂದ್ಕೊಂಡು... ಬಾಳ ಕಷ್ಟಪಟ್ಟಿದೀನಿ.... ನಾನು ಮದ್ವೆಯಾಗಿ ಹೋದ ಮನೇಲೂ ನಂಗೆ ಸುಖ ಸಿಗ್ಲಿಲ್ಲ. ನಮ್ಮೆ ಜಮಾನ್ರು ಏನೂ ಕೆಲ್ಸ ಮಾಡ್ತಿರಲಿಲ್ಲ. ತೀರ ಸೋಮಾರಿ. ದುಡಿಯುವ ಗಂಡಸಿಲ್ಲದ ಮನೆಯ ಎಲ್ಲ ಕೊರತೆಗಳೂ, ಹಿಂಸೆಯೂ ಅಲ್ಲಿತ್ತು. ನಾನು ಕೂಲಿ ಕೆಲ್ಸಕ್ಕೆ ಹೋಗ್ತಿದ್ದೆ. ಒಂದೆರಡು ರೂಪಾಯಿಗೆಲ್ಲ ಐದಾರು ಮೈಲಿ ನಡ್ಕೊಂಡೋಗಿ ಇಡೀ ದಿನಾ ಕೂಲಿ ಮಾಡಿ ಬರ್ತಿದ್ದೆ. ಒಟ್ಟು ಕುಟುಂಬದಲ್ಲಿ ಹೆಣ್ಣಿಗೆ ಬೆಲೆ ಬರೋದೇ ಅವಳ ಗಂಡನ ಕೆಲ್ಸದಿಂದ. ಆ ತರದಲ್ಲಿ ನಾನು ತುಂಬಾ ನತದೃಷ್ಟೆ. ಆದ್ರೂ ಹಲ್ಲುಕಚ್ಚಿ ನನ್ನ ಪಾಲಿಗೆ ಬಂದದ್ದು ಇಷ್ಟೇ ಅಂತ ತೀರ್ಮಾನ ಮಾಡ್ಕೊಂಡಿದ್ದೆ... ಒಂದಿನ ನನ್ನ ತಂದೆ ಮನೇಲಿ ಸ್ವಲ್ಪ ರಾಗಿ ಕೊಟ್ಟಿದ್ರು. ನನ್ನ ಕಷ್ಟ ನೋಡ್ಲಾರ್ದೆ ಆಗಾಗ ಏನಾದ್ರೂ ತಮ್ಮ ಕೈಲಾದ್ದು ಕೊಡ್ತಿದ್ರು. ನಾನ್ ತಾನೇ ಏನ್ ಮಾಡ್ಲಿ. ಕೊಟ್ಟಿದ್ದನ್ನು ಬೇಡ ಅನ್ನದೆ ತರ್ತಿದ್ದೆ. ಹಂಗೆ ಅವತ್ತು ಸಣ್ಣ ಗೋಣಿಚೀಲದಲ್ಲಿ ಕಟ್ಕೊಂಡು ಹೊತ್ಕೊಂಡು ಮನೆಗೆ ತಂದೆ. ಅದೇ ನೋಡಿ ನನ್ನ ಸಂಸಾರಕ್ಕೆ ಅಂತ್ಯ ತಂದುಬಿಡ್ತು... ನಮ್ಮೆ ಜಮಾನ್ರು ಬಾಯಿಗೆ ಬಂದಂಗೆ ಮಾತಾಡೋಕೆ ಶುರು ಮಾಡಿದ್ರು. ಎಲ್ಲಿಂದ ತಂದೆ.......?

**ಅಂಗನವಾಡಿ ಕಾರ್ಯಕರ್ತೆಯರ ಕರ್ತವ್ಯಗಳು**

ಅಂಗನವಾಡಿಗಳನ್ನು ಶುಚಿಯಾಗಿ ಇಟ್ಟುಕೊಳ್ಳಬೇಕು. ಮಕ್ಕಳಿಗಾಗಿ ಆಹಾರ ಸಿದ್ಧಪಡಿಸಿ ಹಂಚಬೇಕು. ಮಕ್ಕಳಿಗೆ ಶಿಕ್ಷಣ ನೀಡಬೇಕು. ಮಕ್ಕಳ ಶುಚಿತ್ವ ಮತ್ತು ರೋಗದ ಲಕ್ಷಣಗಳನ್ನು ಪರಿಶೀಲಿಸುತ್ತಿರಬೇಕು. ಈ ನಿತ್ಯದ ಕೆಲಸಗಳಲ್ಲದೆ ಕಾಲಕಾಲಕ್ಕೆ ಆರೋಗ್ಯ ತಪಾಸಣೆ, ಮಕ್ಕಳಿಗೆ ರೋಗ ನಿರೋಧಕ ಔಷಧಿಗಳನ್ನು ಕೊಡಿಸುವುದು. ಗರ್ಭಿಣಿ ಸ್ತ್ರೀಯರಿಗೆ ಪೌಷ್ಠಿಕ ಮಾತ್ರೆಗಳನ್ನು ವಿತರಿಸುವುದು ಮತ್ತು ತಾಯಂದಿರ ಭೇಟಿ ಮತ್ತು ಮಹಿಳಾ ಮಂಡಲಿಗಳ ಭೇಟಿ ಕಾರ್ಯಕ್ರಮ ಹಮ್ಮಿಕೊಳ್ಳುವುದು ಇತ್ಯಾದಿ. ಪ್ರತಿ ತಿಂಗಳು ಬಾಲ ವಿಕಾಸ ಯೋಜನಾಧಿಕಾರಿಯವರಿಗೆ ಕುಟುಂಬ ಸಮೀಕ್ಷೆ ವರದಿ, ಮಕ್ಕಳ ಜನನ ಮತ್ತು ಮರಣ ದಾಖಲೆಗಳ ಬಗ್ಗೆ ವರದಿ ಸಲ್ಲಿಸಬೇಕು. ಅಂಗನವಾಡಿ ಕಾರ್ಯಕರ್ತೆಯರ ಕೆಲಸವನ್ನು ಮುಖ್ಯ ಸೇವಕಿಯರು ಮೇಲ್ವಿಚಾರಣೆ ಮಾಡುತ್ತಾರೆ. ಈ ಕರ್ತವ್ಯದ ನಡುವೆ ವಯಸ್ಕರ ಶಿಕ್ಷಣ, ಮಹಿಳಾ ಸಂಮೃದ್ಧಿ ಯೋಜನೆ, ಕುಟುಂಬ ಯೋಜನೆಗಳ ಕೆಲಸವನ್ನು ನಿರ್ವಹಿಸಬೇಕಾಗುತ್ತದೆ. ಆದರೆ ಅದಕ್ಕಾಗಿ ಹೆಚ್ಚಿನ ಗೌರವಧನವನ್ನು ನೀಡುವುದಿಲ್ಲ.

ಯಾವನ್ ಕೊಟ್ಟ ....? ಅಂತ ಕೂಗಾಡಿದ್ರು. ನನ್ ಮಾನ ಕಳೀತೀಯ ಫಾಲಿಡಾಲ್ ಕುಡ್ಕೊಂಬಿಡ್ತೀನಿ ನೋಡ್ತಿರು ಅಂತ ಹೆದರಿಸಕ್ಕೆ ಶುರು ಮಾಡಿದ್ರು. ದಿನ ಬೆಳಗಾದರೆ ಗಲಾಟೆ, ಹೊಡೆದಾಟ, ಬಡಿದಾಟ, ನಾನು ತಾನೇ ಎಷ್ಟೂಂತ ಸಹಿಸ್ಕೊಳ್ಳಿ, ಹೇಳಿ.....ಒಂದಿನ ನಮ್ ತಂದೆ ಬಂದಿದ್ರು. ಅವರತ್ರ ಎಲ್ಲ ಹೇಳ್ದೆ. ನಂಗೆ ತುಂಬಾ ಹಿಂಸೆ ಅಕಸ್ಮಾತ್ ಅವರೇನಾದ್ರೂ ಕುಡಿದ ಜ್ಞಾನದಲ್ಲಿ ಹೆಚ್ಚು ಕಮ್ಮಿ ಮಾಡ್ಕೊಂಡ್ರೆ ನಾನ್ ಬದುಕಿರೋಕೆ ಸಾಧ್ಯನಾ? ಆ ಅಪಮಾನ ಹೊತ್ಕಂಡು ನಾನು ಬದ್ಕಿರಲಾರೆ. ನನ್ನು ನಿಮ್ಜೊತೇನೆ ಕರ್ಕೊಂಡೋಗಿ. .. ಹಿಟ್ಟೊ ಸೊಪ್ಪೊ ನೀವು ಹಾಕಿದ್ದು ... ಅಂತ ಬೇಡ್ಕೊಂಡೆ ಗೋಗರ್ದೆ... ನನ್ನ ಗೋಳಾಟ ನೋಡ್ಲಾರ್ದೆ ನಮ್ ತಂದೆ ಗಟ್ಟಿ ಮನಸ್ಸು ಮಾಡಿ ಒಪ್ಕೊಂಡ್ರು... ನನ್ನ ಗಂಡು ಮಕ್ಕಳಿಬ್ಬರೂ ಸ್ಕೂಲಿಗೋಗಿದ್ರು. ಮಗಳು ಮಾತ್ರ ಮನೇಲಿದ್ಲು. ಮೂರು ವರ್ಷ ಅವಳ್ಗೆ. ಅವಳನ್ನ ಹೆಗಲ ಮೇಲೆ ಹಾಕ್ಕೊಂಡು ಹೊರಟು ಬಿಟ್ಟೆ..... ನನ್ ಗಂಡು ಮಕ್ಕಳು ಅಲ್ಲೇ ಉಳಿದೋದ್ರು.... ಇಪ್ಪತ್ತೊರ್ಷದ ಮೇಲೆ ಆಗೋಯ್ತು ನೋಡಿ. ನನ್ನ ಗಂಡು ಮಕ್ಕಳು ದೊಡ್ಡವರಾಗಿದಾರೆ. ಕೆಲ್ಸದಲ್ಲಿದಾರೆ. ಮದ್ವೆ ಮಾಡ್ಕೊಂಡು ಚನ್ನಾಗಿ ಬದುಕ್ತಿದಾರೆ. ಆದ್ರೆ ನಂಗೆ ಮಾತ್ರ ಹೆಚ್ಚು ಸಂಪರ್ಕ ಇಲ್ಲ. ಆ ಮಕ್ಕಳಿಗೆ ಆವಾಗೇನೂ ಮಾಡೋಕ್ಕಾಗ್ಲಿಲ್ಲ ಇವಾಗ್ಯಾಕೆ ಬೇಕು ಅಂತ ನಾನು ದೂರಾನೇ ಇದ್ಬಿಟ್ಟಿದೀನಿ. ನಾನಿಲ್ಲದೆ ಬೆಳೆದ ಮಕ್ಕಳು ಈಗ ನಾನಿಲ್ಲದೆ ಬದುಕಲಾರರೆ ಹೇಳಿ ........'

ಇದುವರೆಗೂ ತಾನು ತುಂಬಾ ಗಟ್ಟಿ ಎನ್ನುವ ಧಾಟಿಯಲ್ಲೇ ಮಾತಾಡ್ತಿದ್ದ ಪಿಳ್ಳಮ್ಮನವರ ಗಟ್ಟಿತನ ಈಗ ಕೊಂಚ ಕೊಂಚವೇ ಕರಗ ತೊಡಗಿತ್ತು. ಒಲೆಯ ಹಿಂದಿನ ಗೋಡೆಯಂತೆ ಕಪ್ಪು ಆವರಿಸಿದ್ದ ಅವರ ಕಣ್ಣೊಳಗೆ ನೀರು ತುಂಬ ತೊಡಗಿತ್ತು ನನ್ನ ನೋಡಿ

**ಅಂಗನವಾಡಿ ಕಾರ್ಯಕರ್ತೆಯರ ಬೇಡಿಕೆಗಳು**

* ಅಂಗನವಾಡಿಗಳ ಖಾಸಗೀಕರಣಬೇಡ
* ಮಹಾರಾಷ್ಟ್ರ ವರದಿ ಜಾರಿಗೆ ಬರಲಿ
* ಸಮಗ್ರ ಬಾಲವಿಕಾಸಯೋಜನೆಗಾಗಿಯೆ ಪ್ರತ್ಯೇಕ ನಿರ್ದೇಶನಾಲಯ ಆರಂಭವಾಗಬೇಕು
* ಕಾರ್ಯಕರ್ತೆಯರಿಗೆ ಸಹಾಯಕಿಯರಿಗೆ ನಿವೃತ್ತಿವೇತನ ಹಾಗೂ ವಿಮಾ ಸೌಲಭ್ಯ ಒದಗಿಸಬೇಕು
* ಮುಖ್ಯ ಸೇವಕಿಯರ ಹುದ್ದೆಗೆ ಕಾರ್ಯಕರ್ತೆಯರನ್ನೇ ಆಯ್ಕೆ ಮಾಡಬೇಕು
* ಸಹಾಯಕಿಯರಿಗೂ ಗೌರವಧನದಲ್ಲಿ ಬಡ್ತಿ ನೀಡಬೇಕು
* ಕಾರ್ಯಕರ್ತೆಯರ ಸಹಾಯಕಿಯರಿಗೆ ಸೇವಾಭದ್ರತೆ ನೀಡಿ-ಕನಿಷ್ಠ ವೇತನ ನಿಗದಿಪಡಿಸಿ
* ಕಾರ್ಯಕರ್ತೆಯರ -ಸಹಾಯಕಿಯರ ಕಲ್ಯಾಣ ನಿಧಿಯನ್ನು ತಕ್ಷಣ ಜಾರಿಗೆ ತನ್ನಿ

ನಗೋಕೆ ಪ್ರಯತ್ನ ಮಾಡಿದ್ರು. ಅವರ ನಟನೆಯನ್ನು ಮೀರಿ ಕಣ್ಣು ಕಣ್ಣೀರನ್ನು ತುಳುಕಿಸಿತು. ನಾನೇನು ಮಾಡ್ಲಿ ತಡೆಯೋಕ್ಕಾಗಿಲ್ಲ ಅನ್ನೋತರ ಕೈ ಆಡಿಸಿದ್ರು. ಆ ಕ್ಷಣದಲ್ಲಿ ಪಿಳ್ಳಮ್ಮನವರ ಮುಖಕ್ಕೆ ಮುಖ ಕೊಡುವುದು ನನಗೂ ತುಂಬಾ ಕಷ್ಟದ ಕೆಲ್ಸ ಅನ್ನಿಸ್ತು. ಯಾಕೆಂದ್ರೆ ನಾನಾಗ ಏನು ಮಾಡಿದ್ರೂ ಅದರ ಭಾವೋದ್ವೇಗವನ್ನು ಜಾಸ್ತಿ ಮಾಡ್ತಿತ್ತು. ಅದಕ್ಕೆ ನಾನು ಕೈಯಲ್ಲಿ ಹಿಡಿದಿದ್ದ ಪೆನ್ನಿನಿಂದ ಕಾಗದದ ಮೇಲೆ ಚುಕ್ಕೆ ಇಡತೊಡಗಿದ್ದೆ.

ನಾನು ಮಾತನಾಡಿಸಲು ಹೋದ ಪಿಳ್ಳಮ್ಮನ ಕತೆ ಈ ರೀತಿ ವಿಘಟನೆಗೊಂಡ ದಾಂಪತ್ಯದ ಕತೆಯಾಗಿ ತಿರುವು ಪಡೆದುಕೊಳ್ಳುತ್ತದೆ ಅನ್ನುವುದರ ಕಿಂಚಿತ್ ಸುಳಿವೂ ನನಗಿರಲಿಲ್ಲ. ನಾನಂತೂ ಅವರ ಕೌಟುಂಬಿಕ ಬದುಕನ್ನು ಸಾಧ್ಯವಾದಷ್ಟು ಟಚ್ ಮಾಡದೆ ವೃತ್ತಿಯ ಬಗೆಗಿನ ವಿವರಗಳನ್ನು ಮಾತ್ರ ಪಡೆದುಕೊಳ್ಳಬೇಕು ಅಂದ್ಕೊಂಡು ಹೋಗಿದ್ದೆ. ಆದರೀಗ ವೃತ್ತಿ ಪರತೆ ಮತ್ತು ಕುಟುಂಬ ವ್ಯವಸ್ಥೆಗಳು ಹೆಣ್ಣಿನ ಸಂದರ್ಭದಲ್ಲಿ ಯಾಕೆ ಹಲವಾರು ವಿರೋಧಗಳನ್ನು ತಮ್ಮೊಳಗೆ ಸೃಷ್ಟಿಸಿಕೊಂಡು ಬಿಡುತ್ತವೆ ಅನ್ನೋದರ ಕಡೆ ನನ್ನ ಮನಸ್ಸನ್ನು ಹರಿಸಲೇ ಬೇಕಾಯಿತು. ಒಬ್ಬ ಪುರುಷ ತನ್ನ ಕೌಟುಂಬಿಕ ಬದುಕಿನ ಸುಳಿವೇ ಇಲ್ಲದ ರೀತಿಯಲ್ಲಿ ತನ್ನ ವೃತ್ತಿಯ ಬಗ್ಗೆ ಮಾತನಾಡಬಲ್ಲ. ವೃತ್ತಿ ಮತ್ತು ಕುಟುಂಬಗಳು ಸಂಪೂರ್ಣವಾಗಿ ಬೇರೆ ಬೇರೆ ಆದವು ಅನ್ನೋ ರೀತಿಯಲ್ಲಿ ನಿಭಾಯಿಸಬಲ್ಲ.ಕೌಟುಂಬಿಕ ಸಂಗತಿಗಳು ತನ್ನ ವೃತ್ತಿಯನ್ನು ಪ್ರಭಾವಿಸ ಬಲ್ಲವು ಅಥವಾ ತನ್ನ ವೃತ್ತಿಪರತೆ ಕೌಟುಂಬಿಕ ಒತ್ತಡಗಳನ್ನು ಸೃಷ್ಟಿಸಬಲ್ಲವು ಅನ್ನುವ ಆಲೋಚನೆಗಳು ಪುರುಷ ಉದ್ಯೋಗಿಯ ಸಂದರ್ಭದಲ್ಲಿ ಮುಖ್ಯ ಸಂಗತಿಗಳಾಗುವುದೇ ಇಲ್ಲ. ಅದನ್ನು ಸಮಾಜವಾಗಲಿ, ಆತನಾಗಲಿ ನಿರೀಕ್ಷಿಸುವುದೂ ಇಲ್ಲ. ಆದರೆ ಹೆಣ್ಣು ಮಾತ್ರ ತನ್ನೆಲ್ಲ ವೃತ್ತಿಪರತೆಯನ್ನು ಕುಟುಂಬದ ಜೊತೆ ಜೊತೆಯಲ್ಲಿಯೇ ನಿರ್ವಹಿಸುತ್ತಾ ಹೋಗುತ್ತಾಳೆ; ಹೋಗಬೇಕಾಗುತ್ತದೆ. ಕುಟುಂಬದ ಕಡೆಯಿಂದ ತನಗೆ ದೊರೆತ ಒತ್ತಾಸೆ ಅಥವಾ ಆಕ್ಷೇಪಗಳು ತನ್ನ ವೃತ್ತಿಪರತೆಯ ಮೇಲೆ ಬೀರಿದ ಪರಿಣಾಮವನ್ನು ಬಹುಮುಖ್ಯ ಸಂಗತಿಯಾಗಿ ಗ್ರಹಿಸಬೇಕಾಗುತ್ತದೆ. ಅಂಗನವಾಡಿಯಿಂದ ವಿಶ್ವವಿದ್ಯಾಲಯದವರೆಗೆ, ಸಿನಿಮಾದಿಂದ ರಾಜಕಾರಣದವರೆಗೆ ಎಲ್ಲ ಕ್ಷೇತ್ರಗಳಲ್ಲು ಕೌಟುಂಬಿಕ ವಿವರಗಳೇ ಅವಳ ವೃತ್ತಿಪರತೆಯ ಹಿಂದಿನ ಪ್ರಶ್ನೋತ್ತರಗಳಾಗಿ ಕೆಲಸ ಮಾಡುತ್ತವೆ. ನಿಮ್ಮ ಕೌಟುಂಬಿಕ ಜವಾಬ್ದಾರಿಗಳನ್ನು ನಿರ್ವಹಿಸಿಕೊಂಡೂ ನಿಮ್ಮ ವೃತ್ತಿಪರತೆಯನ್ನು ಹೇಗೆ ಕಾಯ್ದುಕೊಳ್ಳುತ್ತೀರಿ ಅನ್ನೋದು ಎಲ್ಲ ಬಗೆಯ ವೃತ್ತಿನಿರತ ಸ್ತ್ರೀಯರ ಮುಂದಿಡುವ ತೀರ ಕಾಮನ್ ಆದ ಪ್ರಶ್ನೆ. ಹಾಗೆಯೇ ಕುಟುಂಬದ ಒತ್ತಾಸೆ ಅಥವಾ ವಿಘಟನೆ ತನಗೆ ಅದಮ್ಯವಾದ ಉತ್ಸಾಹ ಅಥವಾ ಹಠವನ್ನು ತಂದುಕೊಟ್ಟಿದೆ ಎನ್ನುವುದು ಅವಳ ಗಂಭೀರವಾದ ಉತ್ತರ. ಅಂದರೆ ಪುರುಷನ ಸಂದರ್ಭದಲ್ಲಿ ಗಮನಕ್ಕೆ ಬರಲಾರದ ಹಲವು ಸಂಗತಿಗಳನ್ನು ಸ್ತ್ರೀಯರ ಸಂದರ್ಭದಲ್ಲಿ ಬಹುಮುಖ್ಯವಾದ, ರಂಜಕವಾದ ಸಂಗತಿಗಳಾಗಿಸುವ ಸಾಧ್ಯತೆಗಳು ನಮ್ಮ ಮೆಥಡಾಲಜಿಯ ಒಳಗೇ ಇದೆ. ಅದಕ್ಕೇ ನಾನು ಈ ಪ್ರಶ್ನೆಯೇ ಬರದ ರೀತಿಯಲ್ಲಿ ನನ್ನ ಕೆಲಸವನ್ನು ನಿರ್ವಹಿಸುವುದಕ್ಕೆ ಸಾಧ್ಯವೇ ಎಂದು ಅಂದುಕೊಂಡಿದ್ದೆ. ಆದರೆ ಪಿಳ್ಳಮ್ಮನವರ ಮಾತುಗಳು ಯಾವ ಪೂರ್ವ ನಿರ್ಧಾರಗಳಿಲ್ಲದೆಯೇ ಆ ಮೆಥಡಾಲಜಿಯ ನೆಲೆಗೆ ನನ್ನನ್ನು ಕರೆತಂದು ನಿಲ್ಲಿಸಿದ್ದವು.....

'ನಮ್ಮ ತಂದೆ ಮನೆಯವ್ರು ಬಡವ್ರು ಅಂತ ಹೇಳಿದ್ನಲ್ಲ. ಎಷ್ಟು ದಿನ ಅಂತ ನನ್ನ ನೋಡ್ಕೊಳ್ಳಿಕ್ಕಾಗುತ್ತೆ. ಈ ಬಡತನ ಅನ್ನೋದು ಇರಬಾರ್ದುರೀ. ಅದು ಜೀವನವನ್ನೇ ನಾಶ

ಮಾಡುತ್ತೆ... ನನ್ನ ಗಂಡನ ಮನೆಲಾದ್ರು ಸರಿ ಬಡತನ ಒಂದಿಲ್ಲದಿದ್ದರೆ ನನ್ನ ಕಷ್ಟಗಳು ಅಷ್ಟು ದೊಡ್ಡದಾಗ್ತಿರಲಿಲ್ಲವೇನೋ? ನೀವೇ ಯೋಚ್ನೆಮಾಡಿ.. ನಮ್ಮಪ್ಪ ರಾಗಿ ಕೊಟ್ಟಿದ್ದು..... ನಾನು ತಂದದ್ದು.... ನನ್ನ ಗಂಡ ಕೂಗಾಡಿದ್ದು... ಎಲ್ಲ ಅದಕ್ಕೆ ಅಲ್ವ ಹೇಳಿ..... ತಮ್ಮಂದಿರಿಗೂ ಅವರವರ ಸಂಸಾರ ಇತ್ತು. ಜವಾಬ್ದಾರಿ ಇತ್ತು..... ಸರಿ ಮನೇಲಿ ತೊಂದರೆ ಶುರು ಆಯ್ತು. ಗಂಡನನ್ನು ಬಿಟ್ಟು ಬಂದ ನಾನು ಒಂದು ಸಮಸ್ಯೆಯಾಗಿ ಹೋದೆ ಅನ್ಸುತ್ತೆ. ನಾನು ಕೂತಲ್ಲಿ, ನಿಂತಲ್ಲೆಲ್ಲ ತಪ್ಪುಗಳು ಕಾಣತೊಡಗಿದವು... ನಾನೂ ಸುಮ್ನೆ ಕೂತಿರಲಿಲ್ಲ. ಕೂಲಿನಾಲಿಮಾಡ್ತಿದ್ದೆ. ಜೀವ ಹಿಡಿ ಮಾಡ್ಕೊಂಡೆ ಇರ್ತಿದ್ದೆ.... ಆದ್ರೂ ಸರಿ ಹೋಗ್ಲಿಲ್ಲ... ಮನೆಯಲ್ಲಿ ದಿನದಿನಕ್ಕೆ ಕಿರಿ ಕಿರಿ ಶುರು ಆಯ್ತು... ಅಯ್ಯೋ ಏನ್ ಜೀವನಾನಪ್ಪ ಇದು.... ಎಲ್ಲಾದ್ರು ಒಂದತ್ತು ರೂಪಾಯಿ ಕೆಲ್ಸ ಸಿಕ್ಕರೆ ಸಾಕು. ನನ್ನ ಜೀವನ ನಾನು ಮಾಡ್ಕೋಬಹುದಲ್ಲ ಅಂತ ಅನ್ನಿಸ್ತಿತ್ತು. ಆದ್ರೆ ಯಾರತ್ರ ಹೇಳ್ಕೊಳ್ಳಿ ನನ್ನ ಕಷ್ಟಾನ. ನಾನು ಓದಿರೋ ಓದಿಗೆ ಕೆಲ್ಸ ಯಾರು ಕೊಡ್ತಾರೆ. ಕೂಲಿ ಕೆಲ್ಸ ಬಿಟ್ಟು ಬೇರೇನೂ ನನ್ನ ಕೈಲಿ ಮಾಡೋಕಾಗಲ್ಲ ಅನಿಸ್ತಿತ್ತು.... ತುಂಬಾ ಹಿಂಸೆ, ಅವಮಾನ ಅನ್ನಿಸಿದಾಗ ಸತ್ತೋಗಬೇಕು ಅಂತ ಕೂಡ ಅಂದ್ಕೊಂಡಿದೀನ್'ರಿ... ಆದ್ರೂ ಈ ಜೀವ ಹೋಗ್ಲಿಲ್ಲ ನೋಡಿ. ಇಲ್ಲಿಯವರೆಗೂ ಎಳ್ಕೊಂಡು ಬಂದಿದೆ... '

ನಿಜಕ್ಕೂ ಪಿಳ್ಳಮ್ಮ ೨೦-೨೫ ವರ್ಷದ ನಂತರ ಮೊದಲ ಬಾರಿಗೆ ಅನ್ನೋ ರೀತಿಯಲ್ಲಿ ತಮ್ಮ ಬದಕಿನ ದಾರಿಯನ್ನು ತಾವೇ ಹಿಂತಿರುಗಿ ನೋಡತೊಡಗಿದ್ದರು. ತಮ್ಮ ಸಾವಿನ ಹತ್ತಿರದ ಗಳಿಗೆಗಳನ್ನು ಗಾಬರಿ ಇಲ್ಲದೆ ನೆನಪಿಗೆ ತಂದುಕೊಂಡಿದ್ದರು. ಅದರೊಂದಿಗೆ ತಮ್ಮ ಊರಿನ ಆಸುಪಾಸಿನ ಹಳ್ಳಿಗಳ ಒಂದೆರಡು ಅಂಗನವಾಡಿ ಟೀಚರುಗಳ ಅಸಹಾಯಕತೆಯ ಸಾವನ್ನು ನೆನಪು ಮಾಡಿಕೊಂಡು ಮರುಗಿದರು. ಅಷ್ಟೆಲ್ಲ ದೂರವನ್ನು ಹಿಂದೆ ಹಾಕಿ ಸಾಗಿದ ತಮ್ಮ ಬದುಕಿನ ದಾರಿಯ ಇಕ್ಕೆಲದಲ್ಲಿ ಸರಿದು ಹೋದ ಹಲವಾರು ಸಾಲು ಮರಗಳನ್ನು ನೆನಪು ಮಾಡಿಕೊಂಡರು. ಅದರಲ್ಲಿ ತಮಗೆ ವಿಶೇಷ ಅನ್ನಿಸಿದ ಒಂದೆರಡು ಘಟನೆಗಳನ್ನು ನನ್ನೊಂದಿಗೆ ಹಂಚಿಕೊಂಡರು.

ಆ ವಿವರಗಳು ನನ್ನ ಕಿವಿಯೊಳಗೆ ಇಳಿಯುತ್ತಿದ್ದರೂ ನನ್ನ ಮನಸ್ಸು ಬಡತನ ಅನ್ನೋದು ಬರಬಾರ್ದುರೀ... ಅನ್ನೋ ಮಾತುಗಳ ಸುತ್ತಲೇ ತಿರುಗುತ್ತಿತ್ತು..... ಭಾರತೀಯ ತಾತ್ವಿಕತೆ ಬಡತನಕ್ಕೆ ಒಂದು ಆದರ್ಶದ ಮುಖವಾಡ ಹಾಕುತ್ತೆ. ಬಡತನದಲ್ಲಿ ಪ್ರೀತಿ ಇರುತ್ತೆ, ಜೀವಂತಿಕೆ ಇರುತ್ತೆ ಅಪಾರವಾದ ಕರುಣೆ ಇರುತ್ತೆ. ಆದ್ದರಿಂದಲೇ ಬಡತನ ಭಗವಂತನ್ನ ಕಾಣೋ ದಾರಿಯನ್ನು ಹತ್ತಿರವಾಗಿಸುತ್ತೆ ಅನ್ನುತ್ತೆ... ಆದ್ರೆ ಪಿಳ್ಳಮ್ಮ ವಿವರಿಸ್ತಿದ್ರು ಬಡತನದ ಇನ್ನೊಂದು ಮುಖವನ್ನ. ಕುಟುಂಬದ ಸಣ್ಣಪುಟ್ಟ ಕಲಹಗಳು ಬಡತನದ ಕಾರಣಕ್ಕಾಗಿ ಎಷ್ಟು ಭೀಕರ ಸಂಗತಿಗಳಾಗಿ ಹೋಗುತ್ತವೆ. ಬಡತನದ ಬೇಗೆಯಲ್ಲಿ ಬೇಯುವ ಒಂದೊಂದು ಅಗುಳು ಅನ್ನವೂ ಹಾಹಾಕಾರವನ್ನ ಸೃಷ್ಟಿಸಿ ಬಿಡುತ್ತೆ. ಯಾಕೆಂದ್ರೇ ಪ್ರತಿಯೊಬ್ಬ ಬಡವನಿಗೂ -ಅವನು ತಂದೆಯಾಗಿರಲಿ, ಅಣ್ಣನಾಗಿರಲಿ, ಗಂಡಾಗಿರಲಿ, ಹೆಣ್ಣಾಗಿರಲಿ -ತನ್ನದಾಗಿ ಉಳಿಸಿಕೊಳ್ಳುವ ಒಂದೊಂದು ತುತ್ತಿನಲ್ಲೂ ಬೆಟ್ಟದಷ್ಟು ಭರವಸೆಗಳು ಕಾಣ ತೊಡಗುತ್ತವೆ ಅನ್ನೋದನ್ನೇ ಪಿಳ್ಳಮ್ಮ ತಮ್ಮ ಜೀವನ ಸಂದರ್ಭದಲ್ಲಿ ಅಸ್ಪಷ್ಟವಾಗಿಯಾದರೂ ಸರಿ ಗ್ರಹಿಸಿದ್ದರು. ಆದ್ದರಿಂದಲೇ ತೌರಿನಲ್ಲಿ ತನ್ನ ಹಕ್ಕು ಚಲಾಯಿಸುವುದಕ್ಕೆ ಬದಲಾಗಿ ತನಗೆ ಒಂದು ತುತ್ತು ಅನ್ನ ನೀಡಲಾರದೆ ಚಡಪಡಿಸುತ್ತಿದ್ದ ತೌರಿನ ಬಗ್ಗೆ, ಅದರ ಬಡತನದ ಬಗ್ಗೆ ಅಯ್ಯೋ ಎಂದು

ಮರುಗುತ್ತಿದ್ದರು. ಅಷ್ಟೇ ಅಲ್ಲದೆ ತನ್ನ ಜೀವನದ ಎಲ್ಲ ಸಂಗತಿಗಳು ಬಡತನದ ಕಾರಣಕ್ಕಾಗಿಯೇ ಹೆಚ್ಚು ದುರ್ಭರವಾಗ ತೊಡಗಿದ್ದವು ಎಂಬುದನ್ನು ಅರಿತಿದ್ದರು. ತಾನು ಸ್ವಾವಲಂಬಿಯಾಗಿ ಬದುಕುವುದರಿಂದ ಮಾತ್ರ ತನ್ನ ಜೀವನದ ಅಪಮಾನಗಳು ಅಭಿಮಾನವಾಗಿ ಬದಲಾಗಲು ಸಾಧ್ಯ ಎಂಬುದನ್ನು ಮನದಟ್ಟು ಮಾಡಿಕೊಂಡು, ಆ ದಿಕ್ಕಿನಲ್ಲಿ ತಮ್ಮ ದಾರಿಯನ್ನು ಹುಡುಕಲಾರಂಭಿಸಿದ್ದರು.

'ನಮ್ ಮುತ್ತಾನಲ್ಲೂರಿನಲ್ಲೇ ಒಂದ್ ಪ್ರೈಮರಿ ಸ್ಕೂಲ್ ಶುರುವಾಯ್ತು. ಪ್ರೈವೇಟ್‌ದು. ನಮ್ ಚೇರ್ಮನ್‌ರೆ ಹೇಳಿ ನನಗೆ ಅಟೆಂಡರ್ ಕೆಲ್ಸ ಕೊಡ್ಸಿದ್ರು. ೫೦ ರೂಪಾಯಿ ಸಂಬಳ ಕೊಡ್ತಿದ್ರು. ಆಗ ಜೀವಕ್ಕೆ ಸ್ವಲ್ಪ ಧೈರ್ಯ ಬಂತು. ಈ ಪ್ರಪಂಚದಲ್ಲಿ ನಂಗೂ ಒಂದು ಬದುಕೋದಾರಿ ಇದೆ ಅಂತ... ಅಷ್ಟೊತ್ತಿಗೆ ನನ್ ಮಗಳು ಸ್ಕೂಲಿಗೋಗ್ತಿದ್ಲು. ಆಗಲೇ ನಮ್ ಚೇರ್ಮನ್‌ರು ದೊಮ್ಮಸಂದ್ರದಲ್ಲಿ ಪ್ರಾಥಮಿಕ ಆರೋಗ್ಯ ಸಹಾಯಕರ ತರಬೇತಿ ಇದೆ ಸೇರ್ಕೋತೀಯ ಅಂತ ವಿಚಾರ್ಸಿ ಸೇರಿಸಿದ್ರು. ಅಲ್ಲಿ ಟ್ರೈನಿಂಗ್ ಮಾಡ್ಕೊಂಡೆ. ಆಮೇಲೆ ಏನು ಮಾಡೋದು ಗೊತ್ತಾಗ್ಲಿಲ್ಲ. ಮೊದಲಿದ್ದ ಕೆಲಸಾನು ಬಿಟ್ಟಿದ್ದೆನಲ್ಲ. ಮತ್ತೆ ಹೆದರಿಕೆ ಶುರುವಾಯ್ತು..... ಆವಾಗ ಯಾರೋ ಹೇಳಿದ್ರು ನಮ್ಮ ಡಿಪಾರ್ಟ್‌ಮೆಂಟಿಂದ ಅಂದ್ರೆ ಮಹಿಳಾ ಮತ್ತು ಕಲ್ಯಾಣ ಇಲಾಖೆಯವರು ಅಂಗನವಾಡಿ ಟೀಚರ್ ಕೆಲ್ಸಕ್ಕೆ ಅರ್ಜಿ ಕರೆದಿದ್ದಾರೆ ಹಾಕು ಅಂತ. ನನ್ ಜೊತೆಯವಳೊಬ್ಬಳು ಎಸ್. ಎಸ್. ಎಲ್. ಸಿ ಮಾಡ್ಕೊಂಡಿದ್ದೋಳು ಹಾಕ್ತಿದ್ಲು. ಅವಳನ್ನ ಕೇಳ್ಕೊಂಡು ನಾನು ಅರ್ಜಿ ಹಾಕ್ಕೊಂಡೆ. ಅರ್ಜಿ ಬರೀತಿದ್ದರೂ ನಂಗೆ ಅಯ್ಯೋ ಎಸ್. ಎಸ್. ಎಲ್. ಸಿ ಪಾಸಾದೋಳ ಮುಂದೆ ನಾನ್ಯಾಕೆ ಅರ್ಜಿ ಹಾಕೋದು. ನಂಗ್ಯಾರು ಕೆಲ್ಸ ಕೊಡ್ತಾರೆ ಅಂತ ಅನ್ನಿಸ್ತಾನೇ ಇತ್ತು. ಆದ್ರೆ ಕೆಲ್ಸ ಸಿಕ್ಕುತ್ತೋ ಬಿಡುತ್ತೋ ಅದು ದೇವ್ರಿಚ್ಚೆ... ಅರ್ಜಿ ಹಾಕಿ ಕಾಯೋವಷ್ಟು ದಿನ ಆದ್ರೂ ಒಂದು ಆಸೆ ಇಟ್ಕೊಂಡು ಬದುಕಬಹುದಲ್ಲ ಅಂತ ಅಂದ್ಕೊಂಡೇ ಅರ್ಜಿ ಹಾಕ್ದೆ....ಆ ದೇವ್ರು ನನ್ ಕೈ ಬಿಡ್ಲಿಲ್ಲ ನೋಡಿ.. ಇಂಟರವ್ಯೂಗೆ ಬಂದೇ ಬಿಡ್ತು. ಅಲ್ಲೂ ಅಷ್ಟೆ ಏನೇನು ಕೇಳ್ತಾರೋ ಅಂದ್ಕೊಂಡಿದ್ದೆ. ಸ್ಕೂಲಲ್ಲಿ ಕಲಿತಿದ್ದು... ಪಾಠದಲ್ಲಿ ಓದಿದ್ದು ಅದೂ ಇದೂ ಅಂತ... ನಾನಂತೂ ಎಲ್ಲ ಮರ್ತುಬಿಟ್ಟಿದ್ದೆ. ಅದುವರೆಗಿನ ಜೀವನದಲ್ಲಿ ಅದ್ರ ಉಪಯೋಗ ಅಂತೂ ನನಗಾಗಿರಲಿಲ್ಲ.. ಆದ್ರೆ ಅಲ್ಲಿ ಅಂತಾದ್ದೇನೂ ಕೇಳ್ಲೇ ಇಲ್ಲ. ಬರೀ ನನ್ನ ಬಗ್ಗೇನೇ ಕೇಳಿದ್ರು. ನಾನು ನನ್ನ ಜೀವನ ಈತರ ಈತರ ಅಂತ ಎಲ್ಲ ಹೇಳ್ಕೊಂಡೆ. ಆದ್ರೆ ಒಂದೇ ಒಂದು ಸುಳ್ಳು ಹೇಳಿದ್ದೆ... ನನ್ನ ಮೂರು ಮಕ್ಳು ನನ್ ಜೊತೆ ಇದಾರೆ ಅಂತ ಹೇಳಿದ್ದೇ... ಆಮೇಲೆ ನೋಡಿದ್ರೆ ನಂಗೇ ಕೆಲ್ಸ ಸಿಕ್ಕಿತ್ತು. ನನ್ ಜೊತೆ ಹಾಕಿದ್ದೋಳ್ಗೆ ಸಿಕ್ಕೇ ಇರ್ಲಿಲ್ಲ... ಮುಂದಿನ ಸಾರಿ ಸಿಕ್ತು ಅನ್ನಿ. ಅರ್ಜಿ ಹಾಕೋವಾಗ್ಲೆ ನಾನು ಎಲ್ಲಿಗಾಕಿದ್ರೂ ಹೋಗ್ತೀನಿ, ಕೆಲ್ಸ ಮಾಡ್ತಿನಿ ಅಂತ ಬರ್ಕೊಂಡಿದ್ದೆ. ಇಂಟರ್‌ವ್ಯೂನಲ್ಲೂ ಅದ್ನೆ ಹೇಳಿದ್ದೆ. ಆದ್ರೂ ನನ್ನೇನು ದೂರಕ್ಕೆ ಹಾಕ್ಲಿಲ್ಲ ಅಲ್ಲೇ ಪಕ್ದಲ್ಲಿ ಒಂದು ಮೈಲಿ ದೂರದ ಅಳಿ ಬೊಮ್ಮಸಂದ್ರಕ್ಕೆ ಹಾಕಿದ್ರು. ಮೂರು ವರ್ಷ ಅಲ್ಲಿದ್ದೆ. ಆ ಮೇಲೆ ನಿಕ್ಕುಂದಿ ದೊಮ್ಮಸಂದ್ರಕ್ಕೆ ಬಂದೆ. ಈಗ ಅಲ್ಲೇ ಇರೋದು. ಹದಿನೈದು ವರ್ಷದಿಂದ ಅಲ್ಲೇ ಇದೀನಿ. ಸ್ವಲ್ಪ ದಿನ ಊರ ಚೇರ್ಮನ್‌ರ ಮನೇಲಿ ಒಂದು ಕಡೆ ಇದ್ದೆ. ಆ ಮೇಲೆ ಬಾಡಿಗೆ ಮನೇಲಿದ್ದೆ. ಮಗಳು ಹಾಸ್ಟೆಲಲ್ಲಿ ಓದ್ತಿದ್ಲು. ಈಗ ಸ್ವಂತ ಮನೆ ತಗೊಂಡಿದ್ದೀನಿ. ಅಂಗನವಾಡಿ ಎದುರ್ಗೆ ಮನೆ..... ಮನೆ ಎದುರಿಗೆ ಅಂಗನವಾಡಿ. ನಂಗೆ ತುಂಬಾ ಸಂತೋಷ ಆಗುತ್ತೆ. ಇಷ್ಟು ಕಷ್ಟ ಪಟ್ಟಿದ್ದಕ್ಕೆ ನಂಗೊಂದು ನೆಲೆ ಸಿಕ್ತು. ಮನೆ ಆಯ್ತು.... '

ಪಿಳ್ಳಮ್ಮ ಹಾಗೇ ಹೇಳ್ತಾ ಹೋದ್ರು. ಅವರು ಹೇಳ್ತ ಹೋದ ಕತೆಯಲ್ಲಿ ನನಗೆ ಗಂಡನನ್ನು ಬಿಟ್ಟು ಬಂದ ಹೆಣ್ಣು ಬರಿ ತಾನು ಬದುಕುವುದಕ್ಕಷ್ಟೇ ಅಲ್ಲ ತಾನು ಒಳ್ಳೆಯವಳು... ತಾನು ಸಾಧ್ವಿ ಅನ್ನೋದನ್ನ ಕೂಡ ನಿರೂಪಿಸೋದಕ್ಕೆ ಪ್ರಯತ್ನ ಪಡಬೇಕಾಗ್ತದೆ ಅನ್ನೋದನ್ನೇ ಮನದಲ್ಲಿಟ್ಟುಕೊಂಡು ಮಾತಾಡ್ತಿದಾರೆ ಅನ್ನಿಸ್ತು. ಗಂಡ ಸಾಯ್ತಿನಿ ಅಂತ ಹೆದರಿಸ್ತಿದ್ದಾಗ ಗಲಿಬಿಲಿಗೊಂಡು ಗಂಡನ ಮನೆ ಬಿಟ್ಟು ಬಂದ ಪಿಳ್ಳಮ್ಮ ಅನಂತರ ಗಂಡನ್ನ ಬಿಟ್ಟವಳು ಅನ್ನೋ ಅಪವಾದದಿಂದ ತನ್ನನ್ನು ತಪ್ಪಿಸಿಕೊಳ್ಳಬೇಕು ಅನ್ನೋದರ ಕಡೆ ಗಮನ ಹರಿಸಲೇ ಬೇಕಾಯ್ತು. ಅದಕ್ಕಾಗಿ ತನ್ನ ಇಡೀ ಬದುಕನ್ನೇ ಮೀಸಲಾಗಿಡಬೇಕಾಯ್ತು. ತಲೆ ಎತ್ತಿ ಬಾಳಬೇಕಾದ ತನ್ನ ಸ್ವಾಭಿಮಾನದ ಬದುಕನ್ನು ಮುಖ ಮೇಲೆತ್ತದ ವಿಧೇಯತೆಯಾಗಿ ಪರಿವರ್ತಿಸಿಕೊಳ್ಳಬೇಕಾಯಿತು. ತನ್ನ ಸಮಾಜದಿಂದ ಒಂದು ಹನಿಯಷ್ಟು ಕರುಣೆ, ಪ್ರೀತಿ ಗೌರವಾದರವನ್ನು ಪಡಿಯೋದಕ್ಕೆ ಸಾಗರದಷ್ಟು ಸಹನೆಯನ್ನು ತ್ಯಾಗವನ್ನು ಸಮಾಜದೆದುರು ಸುರಿಸಬೇಕಾಯ್ತು. ಅನ್ನೋದನ್ನ ಪಿಳ್ಳಮ್ಮ ಇನ್ನೊಂದು ಪರಿಭಾಷೆಯಲ್ಲಿ ವಿವರಿಸ್ತಿದ್ರು.

'ನನ್ ಜೀವನದಲ್ಲಿ ನಂಗಿನ್ನೇನೂ ಆಸೆ ಇಲ್ಲಾರಿ. ನನ್ನ ಪಾಲಿಗೆ ಬಂದ ಮಗಳನ್ನ ಒಂದು ನೆಲೆ ಸೇರ್ಸಿದೀನಿ... ನಾನು ತಗೊಂಡಿರೋ ಮನೇನು ನನ್ನ ಮೊಮ್ಮಗನಿಗೆ ಕೊಟ್‌ಬಿಡ್ತೀನಿ. ನಂಗೆ ಮೊದ್ಲಿಂದ್ಲು ಒಂದೇ ಆಸೆ.... ಒಳ್ಳೆ ಹೆಣ್ಣು ಅನ್ನಿಸ್ಕೋಬೇಕು. ಆ ತರ ಬದುಕಬೇಕು ಅನ್ನೋದಷ್ಟೆ. ಬೀದಿಗೆ ಬೀಳ್ತಿದ್ದೋಳ್ನ ನಮ್ಮೂರಿನವರು ಕಾಪಾಡಿದಾರೆ... ಇನ್ನೇನಪ್ಪ ಗತಿ ಅನ್ನೋ ಹೊತ್ನಲ್ಲಿ ನಮ್ ಇಲಾಖೆಯವರು ನನ್ನ ಕಷ್ಟಕ್ಕೆ ಮರುಗಿ ಕೆಲ್ಸ ಕೊಟ್ಟಿದ್ದಾರೆ. ಅವ್ರಿಬ್ರ ಋಣ ತೀರ್ಸೋದಷ್ಟೆ ನನ್ನ ಜೀವನದ ಗುರಿ. ಅದಕ್ಕಾಗಿ ನನ್ನ ಶಕ್ತಿ ಮೀರಿ ಕೆಲ್ಸ ಮಾಡ್ತೀನಿ. ನನ್ನ ಕೈಲಾಗುವ ಯಾವ ಕೆಲ್ಸ ಆದ್ರು ಸರಿ. ಇಲ್ಲ ಅನ್ನೋಲ್ಲ. ಹೆರುವ ತಾಯಿಯಿಂದ ಹುಟ್ಟುವ ಮಗುವಿನವರೆಗೆ ಹಾಗು ಹುಟ್ಟಿದ ಮಗು ಮತ್ತೆ ತಾಯಿಯಾಗುವವರೆಗೆ ಆಕೆಗೆ ಏನೇನು ಸಹಾಯ ನಾನು ಮಾಡಬಹುದೋ ಅದನ್ನೆಲ್ಲ ಮಾಡ್ತೀನಿ. ತಿಂಗಳಿಗೆ ಎರಡು -ಮೂರು ಬಾರಿ ತಾಯಂದಿರ ಸಭೆ ಮಾಡೋದು, ಅಲ್ಲಿ ಎಲ್ಲ ರೀತಿಯ ತಿಳುವಳಿಕೆ ಕೊಡೋದು, ಅಂದ್ರೆ ಕುಟುಂಬ ಯೋಜನೆ ಬಗ್ಗೆ, ಮಕ್ಕಳನ್ನು ಶುಚಿಯಾಗಿ ಇಟ್ಕೊಳ್ಳೋ ಬಗ್ಗೆ ಇತ್ಯಾದಿ, ದಿನ ತುಂಬಿದ ತಾಯಂದಿರನ್ನ ಆಸ್ಪತ್ರೆಗೆ ಕರ್ಕೊಂಡೋಗೋದು, ಅವರು ಬರದೆ ಹೋದ್ರೆ ಹೋಗ್ಲಿ ಹುಟ್ಟಿದ ಮಗೂನ ಹೊಕ್ಕಳ ಬಳ್ಳಿಯನ್ನ ಸ್ವಚ್ಛವಾದ ಬ್ಲೇಡಿನಿಂದಾದ್ರು ಕುಯ್ಯಿರಿ ಅಂತ ದಾರ ಬ್ಲೇಡು, ಹತ್ತಿ ಟಿಂಚರ್ ಕೊಡೋದು ಹೀಗೆ ಏನೇನೋ ಕೆಲ್ಸಗಳು... ಅವ್ಯಾವುದಿದ್ರೂ ಸರಿ ಅದು ಈ ಪಿಳ್ಳಮ್ಮನ ಕೈಲಿ ಆಗುತ್ತೆ ಅನ್ನೋ ತರದ್ದೆಲ್ಲ ನಾನ್ ಮಾಡ್ತೀನಿ... ನನ್ನ ಕೊನೆ ಉಸಿರು ಇರೋವರ್ಗೂ ಕಷ್ಟ ಪಡೋಕೆ ಇಷ್ಟ ಪಡ್ತೀನಿ. ಕಷ್ಟಕ್ಕೆಲ್ಲ ನಾನು ಹೆದುರೋಳೆ ಅಲ್ಲ. ಅದಿಕ್ಕೆ ಹೆದ್ರೋ ಹಾಗಿದ್ರೆ ಯಾವತ್ತೋ ನಾಶ ಆಗೋಗಿರ್ತಿದ್ದೆ. ನೀವೇ ಹೇಳಿ ಈತರ ಕೈ ತುಂಬಾ ಕೆಲ್ಸ ಇಲ್ದಿದ್ರೆ ನಾನು ಬದುಕೋಕಾಗ್ತಿತ್ತ ಅಂತ?...ಅದ್ಕೆ ಕೆಲ್ಸ ಮಾಡೋದನ್ನೆ ನನ್ನ ಜೀವನ ಮಾಡ್ಕೊಂಡಿದೀನಿ. ಮಕ್ಕಳ ಪೌಷ್ಟಿಕ ಆಹಾರಕ್ಕೆ ಅಂತ ಸರ್ಕಾರದವರು ಕೊಡೋದ್ರ ಜೊತೆಗೆ ನಾನೇ ತರಕಾರಿ ಹಣ್ಣು ಎಲ್ಲ ಬೆಳೆತೀನಿ. ಏನೂ ಇಲ್ಲದಿದ್ದರೆ ಊರವರ ಹತ್ರ ಹೋಗಿ ಕೇಳಿ ತರ್ತೀನಿ. ಕೇಳೋಕೆ ನಂಗೇನು ಬೇಜಾರಿಲ್ಲ. ನನ್ನ ಮಗಳನ್ನು ನಾಲ್ಕು ಜನದ ಸಹಾಯದಿಂದಲೇ ಸಾಕಿ ಬೆಳಸ್ದೆ. ಅದನ್ನೇ ಈ ಮಕ್ಕಳಿಗೋಸ್ಕರಾನು ಮಾಡ್ತೀನಿ ಅಷ್ಟೆ... ನಮ್ಮೂರಿನವರೂ ಅಷ್ಟೆ ನಾನು ಕೇಳಿದ್ರೆ ಇಲ್ಲ ಅನ್ನೋಲ್ಲ. ನಾನು ಕೇಳ್ದೆ ಇದ್ರೂ ಕೊಟ್ಟು ಕಳಿಸ್‌ತಾರೆ. ನಾನೇನು ಅಂತ ಅವ್ರಿಗೆ ಗೊತ್ತು. ೧೫ ವರ್ಷದಿಂದ ಮರ್ಯಾದೆಯಾಗಿ ಜೀವನ

ನಡಿಸಿದ್ದೀನಿ. ಒಂದ್ ಹೆಜ್ಜೆ ಆಚೀಚೆ ಇಟ್ಟವಳಲ್ಲ. ಒಂದ್ ಮಾತು ಮರ್ಯಾದೆ ಮೀರಿ ಆಡಿದ್ದಿಲ್ಲ. ನನ್ನ ಬಗ್ಗೆ ಯಾರೂ ಬೆರಳು ಮಾಡದ ಹಾಗೆ ಬದುಕಿಕೊಂಡು ಬಂದಿದೀನಿ....

ಅದಕ್ಕೇ ನನಗೆ ಪದೇ ಪದೇ ಅನ್ನಿಸಿದ್ದು ಪಿಳ್ಳಮ್ಮನ ಜೀವನ ಎಲ್ಲ ತಾನು ಕುಟುಂಬದಾಚೆಗೆ ಇಟ್ಟ ಒಂದು ಹೆಜ್ಜೆಯ ಸಮರ್ಥನೆಗಾಗಿಯೇ ಸವೆದು ಹೋಗಿದೆ ಅಂತ. ಅದಕ್ಕಾಗಿಯೇ ಅವರು ತನ್ನ ವೈಯಕ್ತಿಕ ಸುಖ ಸಂತೋಷ ಅನ್ನೋದನ್ನ ಇನ್ನೊಬ್ಬರಿಗಾಗಿ ತಾನು ಮಾಡುವ ಕೆಲಸದಲ್ಲಿ ಅರ್ಥೈಸಿಕೊಳ್ಳಬೇಕಾಯಿತು. ತಾನೊಬ್ಬ ಒಳ್ಳೆಯ ಹೆಣ್ಣು ಅನ್ನಿಸಿಕೊಳ್ಳೋದಕ್ಕೆ ಕುಟುಂಬದೊಳಗೆ ಸಲ್ಲಿಸಬೇಕಾಗಿದ್ದ ಶ್ರದ್ಧೆಯ, ಶ್ರಮದ ಹತ್ತು ಪಟ್ಟನ್ನು ಕುಟುಂಬದಾಚೆಯ ಬದುಕಿಗೆ ಸಲ್ಲಿಸುವ ಮೂಲಕ ಸಾಧಿಸಿ ತೋರಿಸಬೇಕಾಯಿತು. ನಾಲ್ಕು ಜನದಂತೆ ತನಗೂ ಈ ಸಮಾಜದಿಂದ ದೊರೆಯಬೇಕಾದ ವಿಶ್ವಾಸ ಗೌರವಾದರಗಳನ್ನು ಸಮಾಜ ತನಗೆ ನೀಡಿದ ಬಹುದೊಡ್ಡ ಋಣವಾಗಿ-ಅದೂ ತೀರಿಸಲೇ ಬೇಕಾದ ಋಣವಾಗಿ-ಭಾವಿಸಿ ಸ್ವೀಕರಿಸಬೇಕಾಯಿತು. ಈ ಸಮಾಜ, ಸರ್ಕಾರಗಳು ತನಗೆ ನೀಡಿದ ಕಿಂಚಿತ್ತು ಅವಕಾಶವನ್ನು ಆ ಸಮಾಜದ ಬಹುದೊಡ್ಡ ಔದಾರ್ಯವಾಗಿ ಕಣ್ಣಿಗೊತ್ತಿಕೊಳ್ಳಬೇಕಾಯಿತು. ಇಂತಹ ಮನೋಭಾವದ ಪ್ರಯೋಜನ ಪಡೆದುಕೊಳ್ಳುವುದಕ್ಕಾಗಿಯೇ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುವ ನಮ್ಮ ಆಧುನಿಕ ಸಮಾಜ ಅಸಹಾಯಕ ಹೆಣ್ಣಿನಲ್ಲಿ ಇಲ್ಲದ ಪಾಪಪ್ರಜ್ಞೆಗಳನ್ನು ಬಿತ್ತಿ ಆ ಮೂಲಕ ತನ್ನ ಸೇವಕರಾಗಿ ಅವರನ್ನು ಪರಿವರ್ತಿಸಿಕೊಳ್ಳುತ್ತದೆ. ನಿಮ್ಮ ತ್ಯಾಗ, ಸೇವೆ ಎಂಬುದು ನೀವು ಗಳಿಸಿಕೊಳ್ಳುವ ಪುಣ್ಯಕ್ಕಿಂತ ಕಳೆದುಕೊಳ್ಳಬೇಕಾದ ಪಾಪದ ಹೊರೆಗೆ ಸಹಾಯಕ ಎಂಬರ್ಥದಲ್ಲಿ ತನ್ನ ಮೌಲ್ಯಾಧಾರಿತ (!) ರಾಜಕಾರಣಕ್ಕೆ ತೊಡಗುತ್ತದೆ. ಹೆಣ್ಣಿಗೆ ಒದಗುವ ಅಸಹಾಯಕತೆಯ ಮೂಲಭೂತ ಸಂಗತಿಗಳ ವಿರುದ್ಧ ಸಮರ ಸಾರುವುದಕ್ಕೆ ಬದಲಾಗಿ ಅಸಹಾಯಕಗೊಂಡ ಹೆಣ್ಣಿಗೆ ಪುನರ್‌ವಸತಿ ಕಲ್ಪಿಸುವ ಕೆಲಸದಲ್ಲಿ ಗಮನ ಹರಿಸುತ್ತ ತಾನು ಕೊಡುಗೈ ದಾನಿಯಾಗಿ ವಿಜೃಂಭಿಸುವ ಅವಕಾಶವನ್ನು ನಿರಂತರವಾಗಿ ಕಾಪಾಡಿಕೊಂಡು ಬರುತ್ತದೆ. ಅದರ ಫಲವಾಗಿಯೇ ಪಿಳ್ಳಮ್ಮನಂತಹವರು ಅತ್ಯಲ್ಪ ಪ್ರಮಾಣದ 'ಗೌರವಧನ' ಪಡೆದುಕೊಂಡು, ತಮ್ಮ ಅಗತ್ಯಗಳನ್ನೆಲ್ಲ ಹತ್ತಿಕ್ಕಿಕೊಂಡು, ಪದೇ ಪದೇ ಈ ಸಮಾಜದ ಋಣ ತೀರಿಸುವ ಮಾತನಾಡುತ್ತಿರುತ್ತಾರೆ. ಕೊನೆಯದಾಗಿ ಪಿಳ್ಳಮ್ಮ ಅಂತದ್ದೊಂದು ಮಾತು ಹೇಳಿದರು.. ಈ ವೃದ್ಧಾಪ್ಯದಲ್ಲಿ ತನ್ನ ಗಂಡ ತನ್ನ ಬಳಿ ಬರುವುದಾದರೆ ತಾನವರ ಸೇವೆ ಮಾಡಲು ಸಿದ್ಧ ಎಂಬುದಾಗಿ.... ಈ ಸಮಾಜಕ್ಕೆ ಅಂತಿಮವಾಗಿ ಬೇಕಿರುವುದಾದರೂ ಇದೇ ತಾನೇ ಹೆಣ್ಣು, ಪ್ರೀತಿಯಿಂದಾದರೂ ಸರಿ, ಇಲ್ಲ ತಾಪದಿಂದಾದರೂ ಸರಿ ಒಟ್ಟಿನಲ್ಲಿ ತನ್ನ ಸೇವೆ ಮಾಡಬೇಕೆಂದೇ ಅಲ್ಲವೆ ... ?



ಗ್ರಹಿಕೆ

> ವಿವಿಧ ಜ್ಞಾನಶಿಸ್ತುಗಳೊಂದಿಗೆ ಮಹಿಳಾ ಅಧ್ಯಯನವು ನಡೆಸುವ ಒಂದು ಸಂವಾದವಾಗಿ ಈ ಅಂಕಣವನ್ನು ರೂಪಿಸಲಾಗಿದೆ. ಈ ಸಂಚಿಕೆಯಲ್ಲಿ ತಾರಕೇಶ್ವರ ಅವರು 'ಸ್ತ್ರೀ ಲೋಕ' ಹಾಗೂ 'ಲೇಖ-ಲೋಕ' ಕೃತಿಗಳನ್ನು ಮಹಿಳಾ ಅಧ್ಯಯನದ ಸಮಾಜಶಾಸ್ತ್ರೀಯ ನೆಲೆಯಿಂದ ಗ್ರಹಿಸಲು ಯತ್ನಿಸಿದ್ದಾರೆ.

## 'ಸಾಮಾನ್ಯ' ಲೋಕ, 'ವಿಶಿಷ್ಟ'-ಲೋಕಗಳು : ಕೆಲವು ಟಿಪ್ಪಣಿಗಳು

**ಎ. ಬಿ. ತಾರಕೇಶ್ವರ**

೧

ಕಳೆದ ಎರಡು ದಶಕಗಳಿಂದ "ಕನ್ನಡ ಸಾಹಿತ್ಯ" ಎಂಬ ಸಂಸ್ಥೆಗೆ ಯಾರು ಹೊಸದಾಗಿ ಬಂದು ಸೇರುತ್ತಿದ್ದಾರೆ? ಎಲ್ಲಿಂದ ಬರುತ್ತಿದ್ದಾರೆ? ಹೊಸಬರು ಬಂದಾಗ ಹಳಬರು ಏನು ಹೇಳುತ್ತಿದ್ದಾರೆ? ಈ ಹಳಬರು ಯಾರು? ಈ ಹಳಬರು ಯಾಕೆ ಇಲ್ಲಿಗೆ ಬಂದರು? "ಕನ್ನಡ ಸಾಹಿತ್ಯ" ಸಂಸ್ಥೆಯ ಹುಟ್ಟು, ಬೆಳವಣಿಗೆ, ಪ್ರಸ್ತುತದ ಅದರ ಸ್ಥಿತಿ, ಆರ್ಥಿಕತೆ, ಅದರ ಬಿಕ್ಕಟ್ಟುಗಳನ್ನು ಚಾರಿತ್ರಿಕವಾಗಿ ಗುರುತಿಸಿ ಸಮಾಜ ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ಅಗತ್ಯವಿದೆ. ಒಂದು ಸಾಂಸ್ಥಿಕ ರೂಪದ ಹುಟ್ಟು ಬೆಳವಣಿಗೆಗಳನ್ನು, ಚಾರಿತ್ರಿಕವಾಗಿ, ಆ ಕಾಲದ ಇತರ ಬೆಳವಣಿಗೆಗಳ ಜೊತೆಗೆ ತಾಳೆಹಾಕಿ ಅಧ್ಯಯನ ಮಾಡಬೇಕಾಗುತ್ತದೆ. ಅದರ ಪ್ರಸ್ತುತ ಸ್ಥಿತಿಗತಿಗಳನ್ನು ಅರಿತುಕೊಳ್ಳಲು ಚಾರಿತ್ರಿಕ ಹಿನ್ನೆಲೆಯಲ್ಲಿ ಆ ಸಂಸ್ಥೆಯ ಸಮಾಜಶಾಸ್ತ್ರೀಯ ಅಧ್ಯಯನ ಮಾಡಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ ಇತ್ತೀಚೆಗೆ ಬಂದಿರುವ ಎರಡು ಪುಸ್ತಕಗಳನ್ನು ಮುಂದಿರಿಸಿಕೊಂಡು ಒಂದಷ್ಟು ಟಿಪ್ಪಣಿಗಳನ್ನು ಮಂಡಿಸಲು ಯತ್ನಿಸುತ್ತೇನೆ. ಈ ಎರಡು ಪುಸ್ತಕಗಳು : (i)ಸವಿತಾ ನಾಗಭೂಷಣರ ಸ್ತ್ರೀಲೋಕ ಮತ್ತು (ii) ವಿಜಯಾ ದಬ್ಬೆ ಸಂಪಾದಿಸಿರುವ ಲೇಖ-ಲೋಕ. ಶೀರ್ಷಿಕೆಯಲ್ಲಿ ಕಾಣುವ ಸಾಮ್ಯವೆಂದರೆ 'ಲೋಕ' ಪದದ ಬಳಕೆ. ಆದರೆ ಮೊದಲ ಪುಸ್ತಕದ ಶೀರ್ಷಿಕೆಯಲ್ಲಿ 'ಲೋಕ'ಕ್ಕೆ 'ಸ್ತ್ರೀ' ಎಂಬ Prefix ಇದೆ ಮತ್ತು ಎರಡನೆಯ ಪುಸ್ತಕದ ಶೀರ್ಷಿಕೆಯಲ್ಲಿ 'ಲೇಖ' ಎಂಬ Prefix ಇದೆ, ಪುಸ್ತಕವನ್ನು ಓದಿದಾಗ 'ಲೇಖ' ಎನ್ನುವುದು ಲೇಖಕಿ ಮತ್ತು ಬರಹ ಎಂಬ ಎರಡೂ ಅರ್ಥಗಳನ್ನು ಒಳಗೊಂಡಿರುವುದನ್ನು ಕಾಣುತ್ತೇವೆ. ಅಂದರೆ ಲೇಖಕಿಯರ ಲೋಕ ಎಂದಾಗಬಹುದು ಅಥವಾ 'ಬರಹ -ಬದುಕು' ಎಂಬುದಕ್ಕೇ ಸಂವಾದಿಯಾಗಿ 'ಕೃತಿ -ಕೃತಿಕಾರ' ದ ವಿಸ್ತೃತ ರೂಪವಾಗಿ ಬಳಕೆಯಾಗಿರುವುದು. 'ಲೋಕ' ಎಂಬ ಪದಕ್ಕೆ ರೂಢಿಯಲ್ಲಿ ( Standard Language ನಲ್ಲಿ) ಜಗತ್ತು, ಪ್ರಪಂಚ, ಜನತೆ, ಮಾನವಕುಲ ಎಂದಿದೆ. ಅಂದರೆ

ಸರ್ವವನ್ನು ಒಳಗೊಂಡದ್ದು, ಸರ್ವರನ್ನು ಒಳಗೊಂಡದ್ದೆಂದು. ಆದರೆ ಮೇಲೆ ಉದ್ಧರಿಸಿರುವ ಪುಸ್ತಕಗಳಲ್ಲಿ ಈ ಸರ್ವರನ್ನು ಎಂಬ ಅರ್ಥವನ್ನು ತೆಗೆದು ಅದನ್ನು ಒಡೆಯಲು ಅದನ್ನು ಸೀಮಿತಗೊಳಿಸಲು Prefix ಅನ್ನು ಸೇರಿಸಲಾಗಿದೆ. ಅಂದರೆ ಸ್ತ್ರೀಯರು ಮಾತ್ರ ಇರುವ 'ಲೋಕ', ಲೇಖಕಿಯರ ಲೋಕ ಎಂಬ ಅರ್ಥಗಳಲ್ಲಿ. ಈ ರೀತಿಯ ಪ್ರಯತ್ನದಿಂದಾಗಿ 'ಸಾಮಾನ್ಯಲೋಕ'ಕ್ಕಿಂತ ಇದು ಭಿನ್ನವಾದದ್ದು. ವಿಶಿಷ್ಟವಾದದ್ದು ಎಂದು ಹೇಳುವ ಪ್ರಯತ್ನ. ನಾನು ಈ 'ಭಿನ್ನತೆ', 'ವಿಶಿಷ್ಟತೆ'ಯ ಚರ್ಚೆಗೆ ಹೊರಳುವ ಮುಂಚೆ 'ಸಾಹಿತ್ಯ' ಎಂಬ ಪರಿಕಲ್ಪನೆಯ ಬಗ್ಗೆ ಕೆಲವು ವಿಷಯಗಳನ್ನು ಮಂಡಿಸಲು ಇಚ್ಛಿಸುತ್ತೇನೆ.

ಸಾಹಿತ್ಯ ಎನ್ನುವುದು ಕೆಲವು ಪುಸ್ತಕಗಳನ್ನು ಆಯ್ದು ಕೂಡಿಟ್ಟ ಗುಂಪು ಎಂದು ಹೇಳಬಹುದು. ಬರೆಯುವವರು, ಓದುವವರು, ವಿಮರ್ಶಿಸುವವರು (ಆಯುವವರು?) ಪ್ರೋತ್ಸಾಹಿಸುವವರು (ರಾಜ, ಸರಕಾರ, ಮುದ್ರಣ ಸಂಸ್ಥೆಗಳು, ಇತರೆ ಖಾಸಗಿ ಸಂಸ್ಥೆಗಳು ಇತ್ಯಾದಿ) ಇವರೆಲ್ಲಾ ಸೇರಿ ಇದು ಒಂದು ಸಂಸ್ಥೆಯಾಗುತ್ತದೆ. ಆಧುನಿಕ ಕಾಲದಲ್ಲಿ ಈ ಸಂಸ್ಥೆ ತನ್ನ ಉಳಿವನ್ನು ಮುಂದುವರಿಸಿಕೊಂಡು ಹೋಗಲು-ಸಾಹಿತ್ಯದ 'ಪಾಠ' ಮಾಡುವವರನ್ನು, 'ಪಾಠ' ಹೇಳಿಸಿಕೊಳ್ಳುವವರನ್ನು ಸೃಷ್ಟಿಸಿಕೊಂಡಿತು. ಆಯ್ದ ಪುಸ್ತಕಗಳ Canon ಗಳು ಸೃಷ್ಟಿಯಾದವು. ಪಠ್ಯವಾದವುಗಳು, ಪ್ರೋತ್ಸಾಹಿತರಿಂದ ಬಹುಮಾನ ಪಡೆದ ಪುಸ್ತಕಗಳು ಶ್ರೇಷ್ಠ ಎನ್ನುವ ಪರಿಕಲ್ಪನೆಗಳೂ ಹುಟ್ಟಿಕೊಂಡವು. ಆದರೆ 'ಸಾಹಿತ್ಯ' ದ ಪರಿಕಲ್ಪನೆ ಕಾಲದಿಂದ ಕಾಲಕ್ಕೆ ಬದಲಾಗುತ್ತಲೂ ಬಂದಿದೆ. ಇಂಗ್ಲೆಂಡ್‌ನಲ್ಲಿ ಒಂದು ಕಾಲಕ್ಕೆ 'ಕಾದಂಬರಿ ಪ್ರಕಾರ'ವನ್ನು ಸಾಹಿತ್ಯದ ಗುಂಪಿಗೆ ಸೇರಿಸುತ್ತಲೇ ಇರಲಿಲ್ಲ (ವಿವರಗಳಿಗೆ ನೋಡಿ Eagleton, 1983). ಕನ್ನಡ ಸಾಹಿತ್ಯದಲ್ಲಿ ಅಂಕಣ ಬರಹವನ್ನು ಸಾಹಿತ್ಯದ ಗುಂಪಿಗೆ ಸೇರಿಸಿರಲಿಲ್ಲ, ಹಾ. ಮಾ ನಾಯಕರ ಅಂಕಣ ಬರಹಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬಂದಾಗ ಎದ್ದ ವಿವಾದವೇ ಅದಕ್ಕೆ ಸಾಕ್ಷಿ. ಆದರೆ ಇಂದು ಅದೂ ಸಹ ಸಾಹಿತ್ಯದ ಒಂದು ಪ್ರಕಾರ ಎಂದಾಗಿದೆ. ಇನ್ನೊಂದರ್ಥದಲ್ಲಿ 'ಸಾಹಿತ್ಯ' ಗುಂಪಿಗೆ ಸೇರಿಸುವ ಪುಸ್ತಕಗಳನ್ನು ಹೆಕ್ಕುವ, ವ್ಯವಸ್ಥಿತವಾಗಿಡುವ ಮಾನದಂಡಗಳು ಕಾಲದಿಂದ ಕಾಲಕ್ಕೆ ಬದಲಾಗಿವೆ.

ಆದರೆ ನಮ್ಮ ಸಾಹಿತ್ಯ ತತ್ವಗಳು, ಸಾಹಿತ್ಯ ಎನ್ನುವುದು ಸಾರ್ವಕಾಲಿಕ ಮೌಲ್ಯಗಳನ್ನು ಪ್ರತಿಪಾದಿಸುವ, ಪ್ರತಿಭಾವಂತರು, ಸಂವೇದನಾಶೀಲರು ರಚಿಸಿರುವ ಶ್ರೇಷ್ಠ ಕಲಾಕೃತಿಗಳು ಎಂದು ಪ್ರತಿಪಾದಿಸುತ್ತಾ ಬಂದಿವೆ. ಈ ಕೃತಿಗಳು ಕಾಲ, ದೇಶಗಳನ್ನು ಮೀರಿ ಸಾರ್ವಕಾಲಿಕ ಮೌಲ್ಯಗಳನ್ನು ಪ್ರತಿಪಾದಿಸುತ್ತವೆ ಎಂದು ಹೇಳಲಾಗುತ್ತದೆ. ಆಧುನಿಕ ಕಾಲದಲ್ಲಿ ಇಂಗ್ಲೆಂಡ್‌ನಲ್ಲಿ ಬಂದ ರೊಮ್ಯಾಂಟಿಕ್ ಸಾಹಿತ್ಯ ಚಳುವಳಿ, ನಂತರದ ನವ್ಯ (Modernist) ಸಾಹಿತ್ಯ ಚಳುವಳಿಗಳು ಇದನ್ನು ಸ್ಥಾಯಿಗೊಳಿಸಿದವು. ಇವುಗಳಿಂದ ಪ್ರಭಾವಿತವಾಗಿದ್ದ ಆಧುನಿಕ ಕನ್ನಡ ಸಾಹಿತ್ಯದ ನವೋದಯ ನವ್ಯ ಚಳುವಳಿಗಳು, ಕಟ್ಟಿಕೊಂಡಿದ್ದ 'ಸಾಹಿತ್ಯ'ದ ಪರಿಕಲ್ಪನೆ ಇದಕ್ಕಿಂತ ಭಿನ್ನವಾಗಿರಲಿಲ್ಲ. ಆಧುನಿಕ ಕಾಲದಲ್ಲಿ 'ಸಾಹಿತ್ಯ'ದ ಪರಿಕಲ್ಪನೆಯನ್ನು ಪ್ರಭಾವಿಸಿದ್ದು ಉದಾರವಾದಿ ಮಾನವತಾವಾದ. ಇಂದು ಈ

ಉದಾರವಾದಿ ಮಾನವತಾವಾದದ ಹಿಂದಿನ ರಾಜಕಾರಣವನ್ನು ಗುರುತಿಸುವ ಚರ್ಚೆಗಳು ನಡೆಯುತ್ತಿವೆ. ಉದಾರವಾದಿ ಮಾನವತಾವಾದ ಕೃತಿಕಾರನ ನೆಲೆಯನ್ನು (Location) (ಜಾತಿ, ವರ್ಣ, ಧರ್ಮ, ಲಿಂಗಾಧಾರಿತ) ಮರೆಮಾಚಿ, ಆತನನ್ನು ಪ್ರಶ್ನಾತೀತವಾಗಿ ಗುರುತಿಸುತ್ತಿತ್ತು; 'ಪಠ್ಯ' (Text) ವನ್ನು ಕೃತಿ ಎಂದೂ, ಅದರ ಕಲಾತ್ಮಕತೆಯನ್ನು ಗಮನಿಸಬೇಕೆಂದೂ ಹೇಳಿ ಆ ಪಠ್ಯ ಸಮಾಜದಲ್ಲಿನ ವಿವಿಧ ವಿಚಾರಧಾರೆಗಳ ಫಲ, ಅದರಲ್ಲಿ ಭಾಗಿಯಾಗುತ್ತಿರುತ್ತದೆ ಮತ್ತು ಅದನ್ನು ಮುಂದುವರೆಸಲು ಸಹಕಾರಿಯಾಗಿರುತ್ತೆ ಎಂಬ ಅಂಶಗಳನ್ನು ಮರೆಮಾಚುತ್ತಿತ್ತು.

ಆಧುನಿಕ ಕನ್ನಡ ಸಾಹಿತ್ಯದ ಉದಾಹರಣೆ ಕೊಟ್ಟು ಹೇಳುವುದಾದರೆ ವಸಾಹತುಶಾಹಿ ತನ್ನ ಆಗಮನದೊಂದಿಗೆ ಆಧುನಿಕತೆಯನ್ನು ತಂದಿತು. ಕ್ರಿಸ್ತಿಯನ್ ಮಿಶನರಿಗಳು ತಮ್ಮ ಧರ್ಮಪ್ರಚಾರಕ್ಕಾಗಿ ಮೊದಲಿಗೆ ಮುದ್ರಣಯಂತ್ರಗಳನ್ನು ಸ್ಥಾಪಿಸಿ, ಕನ್ನಡ ಅಚ್ಚುಗಳನ್ನು ನಿರ್ಮಿಸಿದರೂ, ನಂತರ ಇತರರು ಇದರ ಉಪಯೋಗದ ಸಾಧ್ಯತೆಗಳನ್ನು ಅರಿತುಕೊಂಡು ದುಡಿಸಿಕೊಂಡರು. ಅದೇ ಸಂದರ್ಭದಲ್ಲಿ ಇಂಗ್ಲೀಷ್ ಶಿಕ್ಷಣ ಪಡೆದ ಮೇಲುಜಾತಿಯ, ಮಧ್ಯಮ ವರ್ಗವೊಂದು ಸೃಷ್ಟಿಯಾಯಿತು. ಇಂಗ್ಲಿಷ್ ಶಿಕ್ಷಣ ಪಡೆದ ಈ ಮೇಲುಜಾತಿಯ ಮಧ್ಯಮ ವರ್ಗದ ಜನಕ್ಕೆ ಅಂದು ಪ್ರಚಲಿತವಿದ್ದ ಕನ್ನಡ ಸಾಹಿತ್ಯ ರುಚಿಸಲಿಲ್ಲ. ಇಂಗ್ಲೀಷ್ ಶಿಕ್ಷಣದ ಮೂಲಕ ಕಲಿತ ಸಾಹಿತ್ಯದ ಪ್ರಕಾರಗಳನ್ನು ಕನ್ನಡದಲ್ಲಿ ತರಲು ಆರಂಭಿಸಿದರು. ಆದರೆ ಅದೇ ಸಂದರ್ಭದಲ್ಲಿ ಅಂದಿನ ಪ್ರಧಾನ ವಿಚಾರಧಾರೆಯಾಗಿದ್ದ ರಾಷ್ಟ್ರವಾದ (Nationalism) ದಿಂದಲೂ ಪ್ರಭಾವಿತರಾದರು. ಹಳಗನ್ನಡ, ಸಂಸ್ಕೃತ ಸಾಹಿತ್ಯವನ್ನು 'ನಮ್ಮ' ಹೆಮ್ಮೆಯ ಪರಂಪರೆ ಎಂದು ಕರೆದುಕೊಂಡು ಮೇಲು ಜಾತಿಯ, ಮೇಲು ಮಧ್ಯಮ ವರ್ಗದ ಇಂಗ್ಲೀಷ್ ಕಲಿತ ಜನ ಆಧುನಿಕ ಕನ್ನಡ ಸಾಹಿತ್ಯದ ನಿರ್ಮಾಣ ಮಾಡಿದರು. ಈ ಸಾಹಿತ್ಯ ಈ ವರ್ಗದ ಕಾಳಜಿಗಳನ್ನು ಪ್ರತಿಬಿಂಬಿಸಿದರೂ ಮತ್ತು ಅಂದಿನ ಆ ವರ್ಗದ ಮುಖ್ಯ ಕಾಳಜಿಗಳಾದ 'ಸಮಾಜ ಸುಧಾರಣೆ', 'ರಾಷ್ಟ್ರವಾದ'ಗಳಿಂದ ಪ್ರಭಾವಿತವಾಗಿದ್ದರೂ, ತನ್ನದು ಸಾರ್ವಕಾಲಿಕ ಮೌಲ್ಯಗಳನ್ನು ಪ್ರತಿಪಾದಿಸುವ ಶ್ರೇಷ್ಠ ಸಾಹಿತ್ಯ ಎಂದೇ ಪ್ರತಿಪಾದಿಸಿಕೊಂಡಿತು. ಸ್ವಾತಂತ್ರ್ಯ ನಂತರವೂ ಸ್ಥಿತಿ ಬದಲಾಗಲಿಲ್ಲ, ಆದರೆ ಆ ವರ್ಗದ ಕಾಳಜಿಗಳು ಮತ್ತು ಅವರ ಬರಹಗಳನ್ನು ರೂಪಿಸುತ್ತಿದ್ದ ವಿಚಾರಧಾರೆಗಳು ಬದಲಾಗಿದ್ದವು. ಎಲ್ಲಾ ಲೇಖಕರೂ ಇದೇ ಜಾತಿ/ವರ್ಗದಿಂದ ಬಂದವರೆಂದೇನೂ ಇಲ್ಲಾ, ಆದರೆ ಅಪವಾದಗಳು ಬಹಳ ವಿರಳ. ಬಂದಿದ್ದರೂ ಅವರೂ ಸಹ ಅಂದಿನ ಪ್ರಬಲ ವಿಚಾರಧಾರೆಗಳಿಂದ ರೂಪಿತವಾದರೆ, ಅವರ ಜಾತಿ/ ವರ್ಗದ ಕಾಳಜಿಗಳು ಆ ಪ್ರಬಲ ವಿಚಾರಧಾರೆಗಳೊಂದಿಗೆ ಅನುಸಂಧಾನ ನಡೆಸಿರುವುದರ ಸ್ವರೂಪದ ಗುರುತಿಸುವಿಕೆ ಇನ್ನೂ ಆಗಬೇಕಿದೆ. ಹೀಗೆ ೧೯೭೦ ರವರೆಗೂ ಕನ್ನಡ ಸಾಹಿತ್ಯದ ಸ್ವರೂಪ ನಿರ್ಧರಿಸುವುದರಲ್ಲಿ ಪ್ರಮುಖ ಪಾತ್ರವಹಿಸಿದವರು ಮೇಲ್ಜಾತಿಯ ಮೇಲು ಮಧ್ಯಮ ವರ್ಗದ ಇಂಗ್ಲಿಷ್ ಕಲಿತ ಜನ. ೧೯೭೦ರ ದಶಕದಲ್ಲಿ ಬಂದ ದಲಿತ ಲೇಖಕರು, ತಮ್ಮ ಬರಹಗಳನ್ನು ದಲಿತ ಸಾಹಿತ್ಯ ಎಂದು ಕರೆದುಕೊಂಡು, ಲೇಖಕರ ನೆಲೆಯನ್ನು ಅವರ ಕಾಳಜಿಗಳನ್ನು ಜಗಜ್ಜಾಹೀರು ಮಾಡಿದ್ದರಿಂದ ಕನ್ನಡ ಸಾಹಿತ್ಯದ ಸ್ವರೂಪವೇ

ಬದಲಾಯಿತು. ಕೆಳಜಾತಿಯ ಜನ ಬರೆದದ್ದು ದಲಿತ ಸಾಹಿತ್ಯವಾದರೆ, ಇಲ್ಲಿಯವರೆಗೆ ಬರೆಯುತ್ತಿದ್ದ ಜನ ಯಾರು? ಎಂಬ ಪ್ರಶ್ನೆ ಅದರೊಂದಿಗೇ ಉದ್ಭವವಾಯಿತು. ಇಲ್ಲಿಯವರೆಗೆ ಬರೆಯುತ್ತಿದ್ದ ಪ್ರಮುಖ ಜಾತಿ/ ವರ್ಗದ ಲೇಖಕರು ತಮ್ಮ ನೆಲೆಗಳನ್ನು ಬಹಿರಂಗಗೊಳಿಸಬೇಕಾದ ಸವಾಲು ಎದುರಾಯಿತು. ಆದರೆ ೭೦ರ ದಶಕದ ನಂತರ ಅದರಲ್ಲೂ ೮೦ ಮತ್ತು ೯೦ ರ ದಶಕದಲ್ಲಿ 'ಕನ್ನಡ ಸಾಹಿತ್ಯ' ಸಂಸ್ಥೆಯಲ್ಲಿ ಪ್ರವೇಶ ಪಡೆಯುತ್ತಿರುವವರು ಹಿಂದುಳಿದ ವರ್ಗದವರು ದಲಿತರು. ಮುಸ್ಲಿಂ ಸಮುದಾಯದವರು ಮತ್ತು (ಮುಖ್ಯವಾಗಿ) ಮೇಲ್ಜಾತಿಯ ಮಹಿಳೆಯರು. ಮೇಲ್ಜಾತಿಯ ಮೇಲು/ಮಧ್ಯಮ ವರ್ಗದ ಗಂಡು 'ಕನ್ನಡ ಸಾಹಿತ್ಯ' ಲೋಕಕ್ಕೆ ೮೦ ರ ದಶಕದ ನಂತರ ಪ್ರವೇಶ ಪಡೆದದ್ದು ಬಹಳ ವಿರಳ. ಬಂದಿದ್ದರೂ ಅವರು ಮುಂಬೈ ಅಥವಾ ಮದರಾಸು ಹೀಗೆ ಕರ್ನಾಟಕದಾಚೆ ಇರುವ ಕನ್ನಡಿಗರಾಗಿರುತ್ತಾರೆ.

ಮತ್ತೊಂದು ಪ್ರಮುಖ ಅಂಶವೆಂದರೆ ಇತರೆ ಜಾತಿ/ ವರ್ಗಗಳಿಂದ ಜನ 'ಕನ್ನಡ ಸಾಹಿತ್ಯ' ಲೋಕಕ್ಕೆ ಪ್ರವೇಶ ಪಡೆದದ್ದರ ಹಿಂದಿರುವ ಸಾಮಾಜಿಕ/ ಚಾರಿತ್ರಿಕ ಸಂದರ್ಭ. ಸ್ವಾತಂತ್ರ್ಯಾನಂತರ ಬಂದ ಮೀಸಲಾತಿಯ ಸೌಲಭ್ಯ ಪಡೆದುಕೊಂಡು ಮೊಟ್ಟ ಮೊದಲ ಬಾರಿಗೆ ವಿದ್ಯಾಭ್ಯಾಸ ಪಡೆದ ಕೆಳಜಾತಿಯ ಗಂಡು ಬಹಳ ಪ್ರಮುಖವಾಗಿ 'ಕನ್ನಡ ಸಾಹಿತ್ಯ' ಲೋಕ ಪ್ರವೇಶಿಸಿದ್ದು. ಇದು ಮುಸ್ಲಿಂ ಬರಹಗಾರರಿಗೆ, ಮತ್ತಿತರರಿಗೆ ಸ್ಫೂರ್ತಿಯು ಆಯಿತು. ಮೇಲ್ಜಾತಿಯ ಗಂಡು ಬಿಟ್ಟು ಹೋಗುತ್ತಿದ್ದಂತೆಯೇ, ಮಹಿಳೆ ಆ ಸ್ಥಾನವನ್ನು ನಿಧಾನವಾಗಿ ಆಕ್ರಮಿಸಿಕೊಳ್ಳತೊಡಗಿದಳು. ಹೊಸದಾಗಿ ಪ್ರವೇಶ ಪಡೆದ ಈ ಲೇಖಕರನ್ನು ಮತ್ತು ಅವರ ಪ್ರವೇಶಕ್ಕೆ ಕಾರಣವಾದ ಸಾಮಾಜಿಕ ಸಂದರ್ಭವನ್ನು ಮೀಸಲಾತಿ, ಹೋರಾಟದ ಮೂಲಕ ದಲಿತರು ಆಧುನಿಕ ಸಂಸ್ಥೆಗಳಲ್ಲಿ ತಮಗೆ ದೊರಕಬೇಕಿದ್ದ ನ್ಯಾಯಬದ್ಧ ಪಾಲನ್ನು ಕೇಳಿದ್ದನ್ನು, ಹಳೆಯವರು ಅನುಸಂಧಾನ ಮಾಡಿದ ರೀತಿಯನ್ನು ಅಭ್ಯಸಿಸಬೇಕಿದೆ. ಈ ಲೇಖನ ಆ ದಿಕ್ಕಿನಲ್ಲಿ ಪುಟ್ಟ ಹೆಜ್ಜೆ ಇಡುವ ಪ್ರಯತ್ನ ಮಾಡಿದೆ. ಹೊಸ ಜನರು ಬರಲು ಪ್ರಮುಖವಾದ ಸಾಮಾಜಿಕ/ ಚಾರಿತ್ರಿಕ ಸಂದರ್ಭ ಹಿನ್ನೆಲೆಗೆ ಸರಿದು ಮತ್ತೇನು ಪ್ರಮುಖವಾದದ್ದನ್ನು ನಾವು ಇಲ್ಲಿ ಕಾಣುತ್ತೇವೆ. ಪ್ರಮುಖವಾದದ್ದೇನು? ಅದರ ಹಿಂದಿನ ರಾಜಕಾರಣವೇನು ಎಂದು ಸ್ಥೂಲವಾಗಿ ಈ ಲೇಖನದಲ್ಲಿ ವಿವರಿಸಲು ಯತ್ನಿಸುತ್ತೇನೆ.

೨

ಕನ್ನಡದಲ್ಲಿ 80ರ ದಶಕದ ನಂತರ ಬಂದ ಪ್ರಮುಖ ವಿಮರ್ಶಕರಾದ ಡಾ. ಡಿ. ಆರ್. ನಾಗರಾಜರಿಗೆ ದಲಿತ ಸಾಹಿತಿಗಳ ಆತ್ಮಕಥೆ ಓದುವುದರಲ್ಲಿನ ಆಸಕ್ತಿಯ ಮೂಲ ಅವರೇ ಡಾ. ಸಿದ್ಧಲಿಂಗಯ್ಯನವರ ಊರುಗೇರಿಯ ಹಿನ್ನುಡಿಯಲ್ಲಿ ಹೇಳುವಂತೆ **"ಒಂದು ಹೊಸ ಅನುಭವ ಲೋಕವೊಂದರ ಶೋಧನೆ ಎಂಬ ಕಾರಣಕ್ಕೆ ಆಸಕ್ತಿ"** (ಸಿದ್ಧಲಿಂಗಯ್ಯ ೧೯೯೬: ೧೩೨) ಶಾಂತಾ ನಾಗರಾಜ್ ಅವರು ಸಾರಾ ಅಬೂಬಕ್ಕರ್ ಎಂಬ ಮುಸ್ಲಿಂ ಮಹಿಳೆ ಬರೆದ ಕಾದಂಬರಿಗೆ ಬರೆದ ಹಿನ್ನುಡಿಯಲ್ಲಿ ಹೇಳುತ್ತಾರೆ. "ನಮ್ಮ ನಡುವೆಯೇ ಬದುಕುತ್ತಿರುವ

ಈ ವರ್ಗದ (ಮುಸ್ಲಿಂ ವರ್ಗದ) ಒತ್ತಡಗಳು,ಅನಿವಾರ್ಯತೆಗಳು, ಶೋಷಣೆಗಳು ಅಕ್ಷರ ಜಗತ್ತಿನಿಂದ ದೂರವೇ ಉಳಿದಿದ್ದುದನ್ನು ಸಾರಾರವರು **ಅನಾವರಣಗೊಳಿಸುತ್ತಾ ಕನ್ನಡ ಸಾಹಿತ್ಯದ ಎಲ್ಲೆಯನ್ನು ವಿಸ್ತರಿಸಿದ್ದಾರೆ.** (ಅಬೂಬಕ್ಕರ್ ೧೯೯೫, ಬೆನ್ನುಡಿ ಶಾಂತಾನಾಗರಾಜ್) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೯೫ ರಲ್ಲಿ ದಲಿತ ಸಾಹಿತ್ಯವನ್ನು ಕುರಿತು ಮೂರು ಕಮ್ಮಟಗಳನ್ನು ನಡೆಸಿ ಮೂರು ಪುಸ್ತಕಗಳನ್ನು ಪ್ರಕಟಿಸಿತು. ಆ ಯೋಜನೆಯನ್ನು ಕುರಿತು ಹೇಳುತ್ತಾ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರು ಈ ರೀತಿ ಹೇಳುತ್ತಾರೆ "ದಲಿತ ಲೋಕದ ಬದುಕು ಇತ್ತೀಚಿನ ವರ್ಷಗಳಲ್ಲಿ **ಹೊಸ ಸಂವೇದನೆಯೊಂದನ್ನು ಸಾಹಿತ್ಯಕ್ಕೆ ತಂದಿದೆ.** ದಲಿತ ಲೇಖಕರಿಂದಲೇ ಸೃಜನಶೀಲತೆಯು ಮೈ ತಳೆದಾಗ ಹೇಗಿರುತ್ತದೆಂಬುದು ಕುತೂಹಲಕರ " ( ಎಲ್. ಹನುಮಂತಯ್ಯ ಮತ್ತು ಚಿನ್ನಸ್ವಾಮಿ, ೧೯೯೬ : V ರಲ್ಲಿ ವೈ. ಕೆ. ಮುದ್ದುಕೃಷ್ಣ) ಈ ರೀತಿಯ ಉದಾಹರಣೆಗಳು ಹೇರಳವಾಗಿದೆ. ಮೇಲೆ ನೀಡಿರುವ ಉದ್ಧರಣೆಗಳ ಕರ್ತೃಗಳಿಗೆ ಭಿನ್ನವಾದ ಹೊಸ ಸಂವೇದನೆ ಹೊಸ ಲೋಕ, ಹೊಸ ಧ್ವನಿ ಕನ್ನಡಕ್ಕೆ ಬಂದಿದೆ ಎಂಬ ಕಾರಣಕ್ಕೆ ಆ ಪುಸ್ತಕಗಳು ಪ್ರಮುಖವಾಗುತ್ತದೆ. ಅವರಿಗೆ ಆ ಪುಸ್ತಕದ ಬಗೆಗಿನ ಕುತೂಹಲ, ಆಸಕ್ತಿ, ಮಹತ್ವ ಏಕೆಂದರೆ ಅವರು ಬದುಕುತ್ತಿರುವ ಲೋಕಕ್ಕಿಂತ ಭಿನ್ನವಾದದ್ದನ್ನು ಈ ಲೇಖಕರು ಹೇಳುತ್ತಿದ್ದಾರೆ ಎಂಬ ಕಾರಣಕ್ಕೆ. ಇದರರ್ಥ ೧೯೭೦ ರವರೆಗಿನ ಕನ್ನಡದ ಪ್ರಮುಖ ಸಾಹಿತ್ಯ, ಸಾಮಾನ್ಯವಾದ ಲೋಕದ್ದು, ಆದ್ದರಿಂದ ಆ ಕೃತಿಗಳ ಮೌಲ್ಯಮಾಪನ ಅದರ ಕಲಾತ್ಮಕತೆಯನ್ನು ಅವಲಂಬಿಸಿರುತ್ತಿತ್ತು. ಈಗ ಕಲಾತ್ಮಕತೆ ಮುಖ್ಯಅಲ್ಲ, ಹೊಸ ಲೋಕ, ಹೊಸ ಸಂವೇದನೆ ಒಂದು ಕೃತಿಯ ಮಹತ್ವದ ಮೌಲ್ಯಮಾಪನ ದಂಡಗಳಾಗುತ್ತವೆ. ಅಂದರೆ ಮೌಲ್ಯಮಾಪಕನ ಲೋಕಕ್ಕಿಂತ ಭಿನ್ನವಾದದ್ದು ಪುಸ್ತಕದಲ್ಲಿದ್ದರೆ ಅದು ಮಹತ್ವದ್ದು. ದಲಿತರ ಕಥೆಗಳು ಯಾರಿಗೆ ಹೊಸದು? ದಲಿತರಿಗೆ ? ಖಂಡಿತಾ ಅಲ್ಲ. ಅವರ ಬದುಕು ಅವರಿಗೆ ಹೊಸದಲ್ಲ. ಇತರರಿಗೆ ಮಾತ್ರ ಅದು ಹೊಸದಾಗಿರುತ್ತದೆ, ಕುತೂಹಲ ಕೆರಳಿಸುತ್ತದೆ, ಆಸಕ್ತಿ ಹುಟ್ಟಿಸುತ್ತದೆ.

ಫ್ಯಾಷನ್ ಅನ್ನುವುದು ಹೀಗೆ. ಸಾಹಿತ್ಯದಲ್ಲಿ ಹೊಸ ರೂಪಗಳು ಹುಟ್ಟುವುದನ್ನು ಪ್ರೇಗ್ ಸ್ಕೂಲಿನ Formalists ಈ ರೀತಿ ಹೇಳುತ್ತಾರೆ. ಒಂದು ಶೈಲಿ ಸತತವಾಗಿ ಬಳಕೆಯಾದಾಗ, ಅದು ಸಹಜವಾಗಿಬಿಡುತ್ತೆ. ನಮ್ಮ ಗಮನವನ್ನು ಅದು ತನ್ನತ್ತ ಸೆಳೆಯುವುದಿಲ್ಲ. ಆಗ ನಮ್ಮ ಗಮನವನ್ನು ಹಿಡಿದಿಡಲು, ಆಕರ್ಷಿಸಲು ಹೊಸ ಶೈಲಿ ಬೇಕಾಗುತ್ತದೆ. ಹಾಗೆಯೇ ಇಂದು ಕನ್ನಡ ಸಾಹಿತ್ಯದ ವಿಮರ್ಶಕರಿಗೆ ತಮ್ಮ ಜೀವನ ಸಹಜವೆನ್ನಿಸುತ್ತದೆ, ಅವರಿಗೆ ಸಹಜತೆಯು, ಏಕತಾನತೆಯನ್ನುಮುರಿಯಲು ಹೊಸದೊಂದೇನೋ ಬೇಕನ್ನಿಸುತ್ತದೆ. ಇಲ್ಲಾ ಹೊಸ ಲೇಖಕರು ಕನ್ನಡ ಸಾಹಿತ್ಯ ಲೋಕದ ಒಳಗೆ ಬಂದಿರುವ ಹಿಂದಿನ ಸಾಮಾಜಿಕ/ಚಾರಿತ್ರಿಕ ಸಂದರ್ಭಗಳಿಗಿಂತ, ಮತ್ತು ದಲಿತ ಚಳುವಳಿ (ಸಾಹಿತ್ಯಕ್ಕೆ ಪ್ರೇರಕವಾದ ಅದರಾಚೆಗಿನ ಚಳುವಳಿ) ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ, ಅದಕ್ಕಿರುವ ಅಡೆತಡೆಗಳೇನು (ಸಮಾನತೆ-ದಲಿತ ಚಳುವಳಿ-ಹಿಂದಿನ ಕಾರ್ಯಸೂಚಿ ಎಂದು ಸ್ಥೂಲವಾಗಿ ಅಂದುಕೊಳ್ಳಬಹುದು) ಎಂಬುದಕ್ಕಿಂತ, ಕನ್ನಡ

ಸಾಹಿತ್ಯ ಲೋಕದ ಎಲ್ಲೆ ವಿಸ್ತಾರಗೊಂಡಿದ್ದು ಮುಖ್ಯವಾಗುತ್ತದೆ, ಕನ್ನಡ ಸಾಹಿತ್ಯ ಅನುಭವ ಲೋಕ ಶ್ರೀಮಂತವಾದದ್ದು ಮುಖ್ಯವಾಗುತ್ತದೆ, ದಲಿತರ ಅಥವಾ ಇತರೆ ತುಳಿತಕೊಳ್ಳಗಾದ ಧರ್ಮ, ಜನಾಂಗ, ಜಾತಿಗಳ ಹೋರಾಟದ ಹಿಂದಿನ ಕಾಳಜಿಗಳಲ್ಲ. ಕನ್ನಡ ಸಾಹಿತ್ಯಕ್ಕೆ ಹೊಸ ಅನುಭವ ಲೋಕ ಬರಬೇಕು, ಬಂತು ಎಂಬುದರಾಚೆಗೆ ಇವರ ವಿಮರ್ಶೆ ಹರಿಯದಿರುವುದಕ್ಕೆ, ಈ ವಿಮರ್ಶಕರ ನೆಲೆ, ಅವರ ವಿಮರ್ಶೆ ಇನ್ನೂ ಉದಾರವಾದಿ ಮಾನವತಾವಾದದ ಮುಸುಕಿನಿಂದ ಹೊರಬರದಿರುವುದು, ಬಂದರೂ ಅವರನ್ನು ಪ್ರಭಾವಿಸುತ್ತಿರುವ ಇಂದಿನ ಪ್ರಬಲ ವಿಚಾರಧಾರೆಗಳ ರಾಜಕಾರಣಗಳು ಪ್ರಮುಖ ಎಂದು ಸ್ಥೂಲವಾಗಿ ಭಾವಿಸಬಹುದು.

೩

ಈ ಹಿನ್ನೆಲೆಯಲ್ಲಿ ನಾವು **ಲೇಖ-ಲೋಕ** ಮತ್ತು **ಸ್ತ್ರೀ ಲೋಕ** ಪುಸ್ತಕಗಳ ಪ್ರಕಟಣೆಯನ್ನು ಗಮನಿಸಬೇಕು."ಸಮಕಾಲೀನ ಪ್ರಮುಖ ಲೇಖಕಿಯರ ಬದುಕು ಹಾಗು ಸಾಹಿತ್ಯ ಕುರಿತು ಅವರಿಂದಲೇ ನೇರ ಮಾಹಿತಿ ಪಡೆದು ದಾಖಲಿಸಿದರೆ ಮುಂದಿನ ದಿನಗಳಲ್ಲಿ ಅದು ಮಹತ್ವದ ಅಧಿಕೃತ ಮಾಹಿತಿ- ಮಾಗದರ್ಶನ ಕೃತಿ ಆಗಬಲ್ಲದು ಎಂಬ ದೃಷ್ಟಿಯಿಂದ ಕರ್ನಾಟಕ ಲೇಖಕಿಯರ ಸಂಘ ೧೯೯೭ ರ ಮಾರ್ಚ್ ತಿಂಗಳಲ್ಲಿ ಮೈಸೂರಿನಲ್ಲಿ ಮಹಿಳೆ-ಪರಿಸರ-ಸಾಹಿತ್ಯ ಕುರಿತ ಎರಡು ದಿನಗಳ ಸಂವಾದ ಕಾರ್ಯಕ್ರಮ" ಏರ್ಪಡಿಸಿದ್ದರ ಪುಸ್ತಕ ರೂಪವೇ **ಲೇಖ-ಲೋಕ** (೧೯೯೮), ನಾನು ಹಿಂದಿನ ಪ್ಯಾರಾಗಳಲ್ಲಿ ವಿವರಿಸಿದ ಹೊಸ ಲೇಖಕರ ಆಗಮನವನ್ನು ಕುರಿತು ಕನ್ನಡ ಸಾಹಿತ್ಯ ಲೋಕದ ಧೋರಣೆ ಕೇವಲ ಹಳಬರಿಗೆ ಅಥವಾ ಮೇಲ್ಜಾತಿಯ ಮೇಲು ಮಧ್ಯಮ ವರ್ಗದವರಿಗೇ ಸೀಮಿತವಾಗದೆ ಹೊಸಬರನ್ನು ಆವರಿಸಿದೆ. ಮಹಿಳೆಯರೂ, ದಲಿತರೂ ತಾವು ಸಾಹಿತ್ಯ ಬರೆಯುವುದರ ಹಿಂದಿನ ಉದ್ದೇಶ "ಕನ್ನಡ ಸಾಹಿತ್ಯದ ಅನುಭವ ಲೋಕದ ವಿಸ್ತಾರ ಮಾಡುವುದು", "ಹೊಸ ಅನುಭವ ಲೋಕದ ಅನಾವರಣ ಮಾಡುವುದು" ನಮ್ಮ ಕರ್ತವ್ಯ ಎಂದು ನಂಬುವಂತಾಗಿರುವುದು ಮೇಲೆ ತಿಳಿಸಿದ ಧೋರಣೆ ಇಂದಿನ ಯಜಮಾನ್ಯ ವಿಚಾರ ಧಾರೆಯಾಗಿರುವುದರ ಸಂಕೇತವಾಗಿದೆ.

ಇದಕ್ಕೆ ಉದಾಹರಣೆಯಾಗಿ **ಲೇಖ -ಲೋಕ**ದ ಸಂಪಾದಕಿಯಾಗಿರುವ ವಿಜಯಾ ದಬ್ಬೆಯವರ ಮುನ್ನುಡಿ ''ನಿಮ್ಮೊಂದಿಗೆ'' ಯಲ್ಲಿ ಹೇಳುವ ಮಾತುಗಳನ್ನು ಉದ್ಧರಿಸುವುದು ಸಮಜಂಸವಾಗುತ್ತದೆ. ಮಹಿಳಾ ಸಾಹಿತಿಗಳ ಸಮಸ್ಯೆಗಳನ್ನು ಪಟ್ಟಿ ಮಾಡುತ್ತಾ ದಬ್ಬೆಯವರು ಈ ಕೆಳಗಿನ ಮಾತುಗಳನ್ನಾಡುತ್ತಾರೆ.

'''... ಚೌಕಟ್ಟನ್ನು ಅಲುಗಿಸಿ ಬದುಕಲು ಹೊರಟಾಗ ಉಂಟಾಗುವ ತಳಮಳ, ಉದ್ವಿಗ್ನತೆ, ಉಭಯ ಸಂಕಟಗಳು, ತಾಕಲಾಟಗಳನ್ನು ನನ್ನ ತಲೆಮಾರಿನ ಹಲವು ಲೇಖಕಿಯರು ಅನುಭವಿಸಿದ್ದೇವೆ. ಈ ದಿಕ್ಕಿನಲ್ಲಿ ಎದುರಾಗುವ ಸಮಸ್ಯೆ ಪ್ರವಾಹ ಹತ್ತೂ ದಿಕ್ಕಿನಿಂದ ಮುತ್ತುವ ಸಾವಿರ ಪ್ರಶ್ನೆಗಳು, ಜೀವ ಸತ್ವವನ್ನು ಅಳೆದು ನೋಡುವ ಸಂದರ್ಭಗಳು ಒಮ್ಮೊಮ್ಮೆ ಉತ್ತರವೇ ಕಾಣದ ಹತಾಶೆಗಳು, ಸುಳಿಗಳು-ಇವೆಲ್ಲ ಮಹಿಳಾ

ಸಾಹಿತ್ಯದ ಆತ್ಮ ಕಥಾನಕಗಳಲ್ಲಿ ಶಕ್ತವಾಗಿ ಹೊಕ್ಕಾಗ ಕನ್ನಡ ಸಾಹಿತ್ಯದ ಆಯಾಮಗಳು ನಿಶ್ಚಯವಾಗಿ ಹಿಗ್ಗುತ್ತವೆ" (ವಿಜಯಾ ದಬ್ಬೆ, ೧೯೮೮ : Xi )

ಇಲ್ಲಿ ವಿಜಯಾದಬ್ಬೆಯವರು ಸಮಾಜ ಹಾಕಿಕೊಟ್ಟಿರುವ ಮೌಲ್ಯಗಳನ್ನು ದಾಟಲೆತ್ನಿಸುವ ಮಹಿಳೆಗೆ ಎದುರಾಗುವ ಸಮಸ್ಯೆಗಳು, ತಾಕಲಾಟಗಳು, ಹತಾಶೆಗಳು, ಮಹಿಳಾ ಸಾಹಿತ್ಯದ ಆತ್ಮ ಕಥಾನಕಗಳಲ್ಲಿ ಶಕ್ತವಾಗಿ ಹೊಕ್ಕಬೇಕೆಂದು ಹೇಳುತ್ತಾರೆ. ಮಹಿಳೆಯ ಸಮಸ್ಯೆಗಳು " ಶಕ್ತ"ವಾಗಿ ಆತ್ಮ ಕಥಾನಕಗಳಲ್ಲಿ ಬರಬೇಕೆಂದು ಲೇಖಕಿಯರಿಗೆ ವಿಧಿಸುವ ವಿಜಯಾ ದಬ್ಬೆಯವರು ಮುಂದುವರೆದು ಅದರ ಅಗತ್ಯಕ್ಕೆ ನೀಡುವ ಕಾರಣ ಬಹಳ ಮುಖ್ಯವಾದದ್ದು. ಇವೆಲ್ಲಾ ಮಹಿಳಾ ಸಾಹಿತ್ಯದ ಆತ್ಮ ಕಥಾನಕವಾಗಿ ಏಕೆ ಬರಬೇಕೆಂದರೆ ಅದರಿಂದ "ಕನ್ನಡ ಸಾಹಿತ್ಯದ ಆಯಾಮಗಳು ನಿಶ್ಚಯವಾಗಿ ಹಿಗ್ಗುತ್ತವೆ". ಅಂದರೆ ಕನ್ನಡ ಸಾಹಿತ್ಯದ ಆಯಾಮಗಳನ್ನು ಹಿಗ್ಗಿಸಲು ಮಹಿಳೆಯರು ಅವರ ಸಮಸ್ಯೆಗಳನ್ನು, ನೋವುಗಳನ್ನು ಹತಾಶೆಗಳನ್ನು ಮಹಿಳಾ ಸಾಹಿತ್ಯವಾಗಿ, ಅದರಲ್ಲೂ ಆತ್ಮ ಕಥಾನಕದ ಮೂಲಕ "ಶಕ್ತ"ವಾಗಿ ಹೇಳಬೇಕು. ಈ ಉದಾಹರಣೆಯಿಂದ ಸ್ಪಷ್ಟವಾಗುವುದೇನೆಂದರೆ ವಿಜಯಾದಬ್ಬೆಯವರ 'ಮಹಿಳಾ identity ' ಹಿಂದೆ ಸರಿದು, 'ಕನ್ನಡ ಸಾಹಿತ್ಯ' ಎಂಬ ಸಂಸ್ಥೆಯಲ್ಲಿನ ಅವರ ಸದಸ್ಯತ್ವ (ಲೇಖಕಿಯಾಗಿ, ಕನ್ನಡ ಸಾಹಿತ್ಯದ ಪಾಠ ಹೇಳುವ ಅಧ್ಯಾಪಕಿಯಾಗಿ) ಮುಂದೆ ಬಂದಿರುವುದು. 'ಕನ್ನಡ ಸಾಹಿತ್ಯ' ಸಂಸ್ಥೆಯ ಉದಾರವಾದಿ ಮಾನವತಾವಾದ, ಮಹಿಳೆಯರು ಸಾಹಿತ್ಯ ಲೋಕಕ್ಕೆ ೭೦, ೮೦ರ ದಶಕದಲ್ಲಿ ಹೆಚ್ಚಾಗಿ ಬಂದದ್ದರ ಹಿಂದಿನ ಸಾಮಾಜಿಕ/ಚಾರಿತ್ರಿಕ ಒತ್ತಡವನ್ನು, ಅವರ ಚಳುವಳಿಯ ಹಿಂದಿನ 'ಸಮಾನತೆ'ಯ ತುಡಿತವನ್ನು ಬದಿಗಿಟ್ಟು 'ಹೊಸ ಅನುಭವ ಲೋಕದ ಆಗಮನ', 'ಕನ್ನಡ ಸಾಹಿತ್ಯದ ಎಲ್ಲೆಯ ಹಿಗ್ಗುವಿಕೆ' ಎಂಬ ವಿಚಾರಧಾರೆಯನ್ನು ಹುಟ್ಟು ಹಾಕಿರುವುದು ಹಿಂದಿನ ರಾಜಕಾರಣಕ್ಕೆ ಬಲಿಯಾಗಿ, ಮಹಿಳಾ ರಾಜಕಾರಣವನ್ನು ಮರೆಯುವಂತಾಗಿರುವುದು ಸ್ಪಷ್ಟವಾಗುತ್ತದೆ.

ಲೇಖಕಿಯರ -ಲೋಕ, ಸ್ತ್ರೀ -ಲೋಕ ಎಂದು ಪ್ರತ್ಯೇಕವಾಗಿ ಮಹಿಳಾ ಅಭಿವ್ಯಕ್ತಿಗಳನ್ನು ಕರೆಯುವುದರ ಹಿಂದಿನ ರಾಜಕಾರಣವನ್ನು ನಾವು ಗಮನಿಸಬೇಕು. ಮೇಲ್ಜಾತಿಯ, ಮೇಲು/ ಮಧ್ಯಮ ವರ್ಗದ ಲೇಖಕರು ಬರೆದರೆ ಅದು ಪ್ರಧಾನಧಾರೆ / ಕನ್ನಡ ಸಾಹಿತ್ಯ. ಮಹಿಳೆಯರು ಬರೆದದ್ದು, ದಲಿತರು ಬರೆದದ್ದು ಪ್ರಧಾನದ ನಂತರ ಬರುವ ಹೆಚ್ಚುವರಿ ಮಾಹಿತಿಗಳು ಅಂದರೆ ಪರಿಶಿಷ್ಟವಾಗಿ ಕೊನೆಯಲ್ಲಿ ಸೇರುವವು. ಇವುಗಳಿಗೆ 'ಕಲಾತ್ಮಕತೆ' ಎಂಬ ಮಾನದಂಡದ ಅಗತ್ಯವಿಲ್ಲ. ಅದೇನಿದ್ದರೂ ಕನ್ನಡ ಸಾಹಿತ್ಯ (ಸಾಮಾನ್ಯ ಲೋಕ)ಕ್ಕೆ, 'ಹೊಸಲೋಕ' ದ ಆಗಮನ ಎಂಬ ಮಾನದಂಡ ಈ ಪರಿಶಿಷ್ಟ -ಲೋಕಗಳಿಗೆ (ದಲಿತ ಲೋಕ, ಮುಸ್ಲಿಂ ಜಗತ್ತು, ಸ್ತ್ರೀ ಲೋಕ ಇತ್ಯಾದಿ). ಮಹಿಳೆಯ ಸಮಸ್ಯೆಗಳು ಸ್ತ್ರೀ ಲೋಕವಲ್ಲ, ಅವು ಪುರುಷ ಪ್ರಧಾನ ಲೋಕದ ಸಮಸ್ಯೆಗಳು. ಪುರುಷ ತನ್ನ ಅಧಿಪತ್ಯವನ್ನು ಸ್ಥಾಪಿಸಿ, ಮಹಿಳೆಗೆ ಸಮಾನತೆ ನಿರಾಕರಿಸುವುದರಿಂದ ಉಂಟಾದಂಥವು, ಅವರು ತಮ್ಮ ಬಗ್ಗೆ ಬರೆಯಬೇಕೆಂದರೆ ಪುರುಷ ಲೋಕದ ದಬ್ಬಾಳಿಕೆ, ನಯವಂಚಕತನದ ಬಗ್ಗೆ ಬರೆಯಬೇಕಾಗುತ್ತದೆ. ದಬ್ಬಾಳಿಕೆ ಮಾಡುವವರೂ, ದಬ್ಬಾಳಿಕೆಗೆ ಒಳಗಾದವರು ಇಬ್ಬರೂ

ಒಂದೇ ಲೋಕದಲ್ಲಿ ಇರುತ್ತಾರಲ್ಲವೇ?. ಅದು ಪುರುಷನನ್ನು ಒಳಗೊಂಡಿರುವ ಲೋಕ. ಅದು ಹೇಗೆ 'ಹೊಸದಾಗುತ್ತದೆ', 'ವಿಶಿಷ್ಟವಾದದ್ದಾಗುತ್ತದೆ', 'ಭಿನ್ನವಾದದ್ದಾಗುತ್ತದೆ', ಆದರೂ ಯಾರಿಗೆ? ಏಕೆ? ಅದರ ಹಿಂದಿನ ರಾಜಕಾರಣವೇನು? ಎಂಬುದನ್ನು ವಿವರವಾಗಿ ಚರ್ಚಿಸಬೇಕಾದ ಅಗತ್ಯ ಇಂದು ಜರೂರಾಗಬೇಕಿದೆ.

ದಬ್ಬಾಳಿಕೆಗೆ ಒಳಗಾದವರು, ದಬ್ಬಾಳಿಕೆಗೆ ಸಿಗದಂತಹ ಚಿಕ್ಕಪುಟ್ಟ escape-place ಗಳನ್ನು, ದಬ್ಬಾಳಿಕೆಯ ವಿರುದ್ಧ ಹೋರಾಟ ಮಾಡಲಿಕ್ಕಾಗದಂಥಹ ಸಂದರ್ಭಗಳಲ್ಲಿ, ತಮ್ಮ ಮನಸ್ಸಿನ ಸಮಾಧಾನಕ್ಕೆ ರೂಪಿಸಿಕೊಂಡಿರುವ ಸಾಧ್ಯತೆಗಳಿರುತ್ತವೆ. ಆದರೆ ಹೋರಾಟದ ಸಾಧ್ಯತೆಗಳಿಲ್ಲದಂಥಹ ಅನಿವಾರ್ಯ ಪರಿಸ್ಥಿತಿಯಲ್ಲಿ ಹುಟ್ಟಿಕೊಂಡಂಥಹ ಈ escape-place ಗಳನ್ನು ವೈಭವೀಕರಿಸುವ ಅಥವಾ ಅದು ದಬ್ಬಾಳಿಕೆಗೆ ಸಿಗಲಿಲ್ಲ ಎನ್ನುವ ಒಂದೇ ಕಾರಣಕ್ಕೆ ಅದನ್ನು ಸ್ತ್ರೀ-ಲೋಕ ಅಥವಾ ದಲಿತ-ಲೋಕ ಎಂದು ಹೇಳುವುದೂ ಅಪಾಯಕಾರಿಯಾದದ್ದು. ಈ escape-place ಗಳು ಉಗಮವಾಗಬೇಕಾದರೆ ಅದರ ಹಿಂದೆ ಹೋರಾಟದ ಸಾಧ್ಯತೆಗಳೇ ಇಲ್ಲದಂಥಹ ದಬ್ಬಾಳಿಕೆ ಇದ್ದು ಎಂದರ್ಥ ಮತ್ತು ಇಂದು ಈ escape-placeಗಳನ್ನು ವೈಭವೀಕರಿಸುವುದು ಹೋರಾಟದ ಸಾಧ್ಯತೆಗಳನ್ನು ದೂರವಿಡುವಂಥಹ ಪ್ರಯತ್ನದ ಭಾಗವಾಗುತ್ತದಷ್ಟೆ.

೪

'ಲೇಖಿ -ಲೋಕ' ಮತ್ತು 'ಸ್ತ್ರೀ- ಲೋಕ' ಗಳು ಪ್ರಮುಖವಾಗಿ ಮತ್ತೊಂದು ಪ್ರಮೇಯದ ಆಧಾರದ ಮೇಲೆ ರೂಪಿತವಾಗಿವೆ. ಅದು-ಅಭಿವ್ಯಕ್ತಿ ಮತ್ತು ಅನುಭವದ ನಡುವಿನ ಸಂಬಂಧವನ್ನು ಕುರಿತದ್ದು. ಅನುಭವಕ್ಕೆ ವಿಶೇಷವಾದ ಮಹತ್ವವನ್ನು ಕೊಡಲಾಗುತ್ತದೆ. ಮತ್ತು ಅನುಭವವೆನ್ನುವುದು ಮೂಲಭೂತವಾದದ್ದು, ಅದನ್ನು ಸಮಗ್ರವಾಗಿ ಗ್ರಹಿಸಿ ಬರಹದಲ್ಲಿ ಅಭಿವ್ಯಕ್ತಿಸಲು ಸಾಧ್ಯ ಎಂಬ ಪ್ರಮೇಯದ ಮೇಲೆ ಈ ಎರಡೂ ಪ್ರಕಟಣೆಗಳು ಕೆಲಸ ಮಾಡಿವೆ ಎಂದು ಕಾಣುತ್ತದೆ. ಇದಕ್ಕೆ ಉದಾಹರಣೆಯಾಗಿ ಸವಿತಾ ನಾಗಭೂಷಣರ **ಸ್ತ್ರೀ ಲೋಕ** ಕಾದಂಬರಿಯಲ್ಲಿ ಬರುವ meta textual comments ಗಳನ್ನು ಗಮನಿಸಬಹುದು. ಈ ಕಾದಂಬರಿಯ ೧೬-೧೭ ರಲ್ಲಿ 'ನಾನು' ಮತ್ತು 'ಪ್ರಜ್ಞಾ' ನಡುವೆ ನಡೆಯುವ ಸಂಭಾಷಣೆ ಗಮನಿಸಬಹುದು. 'ನಾನು' ಬರೆದ ಕಾದಂಬರಿಯ ಮೊದಲ ಮೂರು ಅಧ್ಯಾಯಗಳನ್ನು 'ಪ್ರಜ್ಞಾ'ಗೆ ಓದಲು ಕೊಡುತ್ತಾಳೆ. ಆಗ ಪ್ರಜ್ಞಾ ನಿರೂಪಣೆ ಇಲ್ಲದ ಕೇವಲ ಸಂಭಾಷಣೆ ಇರುವ ಇದು ಎಂಥಾ ಕಾದಂಬರಿ ಎಂದು ಕೇಳುತ್ತಾಳೆ. ಆಗ 'ನಾನು' ಸಹಜವೆಂಬಂತೆ " 'ಅವಳು ಹೇಳಿದಳು', 'ಇವಳು ಹೇಳಿದಳು' ಅಂತ ಬರೆದಾಗ.. ಹೀಗಾಯ್ತು, ಹಾಗಾಯ್ತು ಅಂತ ಬರೆದಾಗ ಮಧ್ಯೆ ಮಧ್ಯೆ ಸುಳ್ಳು ಸೇರಿಕೊಂಡು ಬಿಡ್ತುರೀ... ಭಾಳ ಗೊಂದಲ ಆಯ್ತು. ಸುಳ್ಳು ಬರೀಬಾರ್ದು ಅಲ್ಲವಾ?ಎಂದು ಹೇಳುತ್ತಾಳೆ. ಅಂದರೆ ನಿರೂಪಕನ/ಳ ಮಧ್ಯ ಪ್ರವೇಶವೇ ಇಲ್ಲದೆ ಅನುಭವವನ್ನು ದಾಖಲಿಸಬಹುದು, ಅದು ಸತ್ಯ ಎಂಬ ಪ್ರತಿಪಾದನೆ ಇಲ್ಲಿ ಕಾಣುತ್ತದೆ.

ಅನುಭವಗಳು ನಮ್ಮ ಗ್ರಹಿಕೆಗಳು, ಮತ್ತು ನಮ್ಮ ಗ್ರಹಿಕೆಗಳು ನಮ್ಮ ವ್ಯಕ್ತಿತ್ವವನ್ನು ರೂಪಿಸಿರುವ ಸಮಕಾಲೀನ ಸಮಾಜದಲ್ಲಿನ ವಿಚಾರಧಾರೆಗಳಿಂದ ವ್ಯವಸ್ಥಿತಗೊಂಡು ರೂಪುಗೊಂಡಿವೆ ಎಂದು ಭಾವಿಸುವುದಿಲ್ಲ. ಅನುಭವಗಳನ್ನು ಮೂಲಭೂತವಾದದ್ದೆಂದೂ, ಪ್ರಾಮಾಣಿಕವಾದದ್ದೆಂದೂ ನಂಬುವುದರಿಂದ ವ್ಯಕ್ತಿಗೂ ಮತ್ತೂ ಅವರ ಬರಹಕ್ಕೂ ನೇರ ಸಂಬಂಧ ಕಲ್ಪಿಸಲಾಗುತ್ತದೆ. ಸ್ತ್ರೀ ಬರೆದರೆ ಅದು ಸ್ತ್ರೀ ಲೋಕ. ದಲಿತರು ಬರೆದರೆ ಅದು ದಲಿತ- ಲೋಕ ಎಂಬಂತಹ ಸರಳ ತೀರ್ಮಾನಗಳು ರೂಪಿತಗೊಳ್ಳುತ್ತವೆ.

'ಸ್ತ್ರೀ -ಲೋಕ' ಎಂಬ ಶೀರ್ಷಿಕೆಯಡಿ ಬಂದಿರುವ, ನಿರೂಪಕರ ದಲ್ಲಾಳಿತನವೇ ಇಲ್ಲದೆ ಸ್ತ್ರೀ ಪಾತ್ರಗಳ ಪ್ರತಿನಿಧೀಕರಣವಾಗಿರುವುದರಿಂದ ಸತ್ಯಕ್ಕೆ ಸಮೀಪವಾಗಿದೆ ಎಂದು ಪ್ರತಿಪಾದಿಸುವ 'ಸ್ತ್ರೀ-ಲೋಕ' ಕಾದಂಬರಿಯನ್ನು ಗಮನಿಸಿದರೆ ಅದು ಉದಾರವಾದಿ - ಮಾನವತಾವಾದ ವಿಚಾರಧಾರೆಯ ಹಿನ್ನೆಲೆಯಲ್ಲಿ ಕೆಲವು ಸಂಭಾಷಣಾ ಪೂರ್ಣ ಸನ್ನಿವೇಶಗಳನ್ನು ಬರೆದಿರುವಂತೆ ಕಾಣುತ್ತದೆ. ಇಲ್ಲಿ ಉದಾರವಾದಿ ಮಾನವತಾವಾದ ಎಂಬುದು ಮುಖವಾಡ ಎಂದು ಮತ್ತೆ ನೆನಪಿಸುವ ಅಗತ್ಯವಿಲ್ಲ. ಇಲ್ಲಿ ಮೇಲು ಜಾತಿಯ, ಮಧ್ಯಮ ವರ್ಗದ ಹಿಂದೂ ವಿವಾಹಿತ ಮಹಿಳೆ (ಉದಾರವಾದಿ -ಮಾನವತಾವಾದಿ) ಕನ್ನಡ ಪರ, ಮುಸ್ಲಿಂ ಪರ (ಅಂದರೆ ಜಾತ್ಯಾತೀತತೆ) ಬಡವರ ಪರ ನಿಲುವುಗಳನ್ನು ಮಹಿಳಾ ಕಾಳಜಿಯ ಹಿನ್ನೆಲೆಯಲ್ಲಿ ವ್ಯಕ್ತಪಡಿಸಿದಂತೆ ಕಾಣುತ್ತದೆ. ನಾನಿಲ್ಲಿ 'ಸ್ತ್ರೀ-ಲೋಕ'ದಲ್ಲಿನ ಮಹಿಳಾ ಕಾಳಜಿಗಳನ್ನು ಸಂಶಯಿಸುತ್ತಿಲ್ಲ ಅಥವಾ 'ಲೇಖ-ಲೋಕ'ದ ಯೋಜನೆಯ ಹಿಂದಿನ ಆಶಯಗಳನ್ನು ಸಂಶಯಿಸುತ್ತಿಲ್ಲ. ಆದರೆ ಮಹಿಳಾ ಕಾಳಜಿಗಳು ಉದಾರವಾದಿ- ಮಾನವತಾವಾದದ ವಿಚಾರಧಾರೆಯ (ಇಲ್ಲಿ ಮೇಲ್ಜಾತಿಯ, ಮಧ್ಯಮ ವರ್ಗದ ಹಿಂದೂ ಮಹಿಳೆಯ ಮೂಲಕ) ಮೂಲಕ ಹೊಮ್ಮಿರುವುದನ್ನು ಗುರುತಿಸುತ್ತಿದ್ದೇನೆ. ಅಂದರೆ ನಮ್ಮ ಅನುಭವಗಳ ಗ್ರಹಿಕೆಯೇ, ನಮ್ಮ ನೆಲೆ (ಜಾತಿ, ಲಿಂಗ, ವರ್ಣ, ವರ್ಗ) ಮತ್ತು ಕೆಲವು ಸಮಕಾಲೀನ ವಿಚಾರಧಾರೆಗಳ ಮೂಲಕ, ವ್ಯವಸ್ಥೆಗೊಂಡು ರೂಪುಗೊಂಡಿರುವುದರ ಕಡೆ ಕೈ ಮಾಡುತ್ತಿದ್ದೇನೆ. ನಮ್ಮ ಬರಹಗಳು ನಮ್ಮ ಅನುಭವದ ನೇರ ಅಭಿವ್ಯಕ್ತಿಯಲ್ಲ, ಅದರ ಮಧ್ಯೆ ದಲ್ಲಾಳಿಯಾಗಿ ಲೇಖಕ/ಕಿಯ ನೆಲೆ ಮತ್ತು ವಿಚಾರಧಾರೆಗಳು ಇರುತ್ತವೆ ಮತ್ತು ನಮ್ಮ ನೆಲೆಯ ರಾಜಕಾರಣ ಮತ್ತು ವಿಚಾರಧಾರೆಗಳ ಹಿಂದಿನ ರಾಜಕಾರಣ ಯಾವ ರೀತಿ ನಮ್ಮ ಬರಹಗಳನ್ನು ರೂಪಿಸುತ್ತೆ, ನಮ್ಮ ಕಾರ್ಯಸೂಚಿಯನ್ನು ಮಾರ್ಪಡಿಸುತ್ತದೆ ಎಂಬ ಅರಿವು ಇರಬೇಕೆಂಬುದರ ಅಗತ್ಯವನ್ನು ಮನದಟ್ಟು ಮಾಡಲು ಯತ್ನಿಸುತ್ತಿದ್ದೇನೆ.

ಅನುಭವ ಮತ್ತು ಅಭಿವ್ಯಕ್ತಿ, ಬದುಕು ಮತ್ತು ಬರಹ, ಲೇಖಕಿಯ ಲೋಕ-ಲೇಖ ಇವುಗಳ ನಡುವೆ ನೇರ ಸಂಬಂಧವಿದೆ ಆದ್ದರಿಂದ ಬರಹವನ್ನು ಅರ್ಥೈಸಲು ಬರಹಗಾರರ ಬದುಕನ್ನು ನೋಡಬೇಕು. ಲೇಖಕಿಯರ ಬರಹವನ್ನು ಅರ್ಥೈಸಲು, ಅಧ್ಯಯನ ಮಾಡಲು ಲೇಖಕಿಯರ ಬದುಕಿನ ವಿವರಗಳು ದಾಖಲಾಗಬೇಕೆಂಬ ಗ್ರಹಿಕೆ 'ಲೇಖ-ಲೋಕ'ದ ಹಿಂದೆ ಕೆಲಸ ಮಾಡಿದೆ. ವಿಜಯಾ ದಬ್ಬೆಯವರು ಗುರುತಿಸುವಂತೆ ಈ ಕಾರ್ಯಕ್ರಮದ

ಮೂರನೆಯ ನಿರೀಕ್ಷೆ " ಬದುಕು ಬರಹಗಳ ಒಳಕೊಂಡಿಗಳನ್ನು ಕುರಿತಾಗಿತ್ತು" (ವಿಜಯಾ ದಬ್ಬೆ, ೧೯೯೮: VI ) ಹಿಂದೆ ಹೇಳಿದಂತೆ ಮೇಲ್ಜಾತಿಯ, ಮಧ್ಯಮ ವರ್ಗದ ಪುರುಷ ಬರೆಯುತ್ತಿದ್ದಾಗ ಕೃತಿ ಮುಖ್ಯವಾಗಿತ್ತು, 'ಕೃತಿ'ಯ ಮೌಲ್ಯಮಾಪನ ಒಂದು ಕಲಾಕೃತಿಯಾಗಿ ನಡೆಯುತ್ತಿತ್ತು. ಮಹಿಳೆ ಬರೆಯಲು ಪ್ರಾರಂಭಿಸಿದರೆ ಅವಳ ಬರಹಗಳಿಗೆಲ್ಲಾ ಅವಳ ಬದುಕೇ ಆಕರವೆಂಬಂತೆ, ಅವೆರೆಡರ ನಡುವೆ ಒಳಕೊಂಡಿಗಳಿವೆ ಮತ್ತು ಆಕೆಯ ಬರಹ ಹೊಸ ಲೋಕವನ್ನು ಪರಿಚಯಿಸುತ್ತದೆ ಎಂಬಂಥಹ ಗ್ರಹಿಕೆಗಳು ಪ್ರಾರಂಭವಾಗುತ್ತದೆ. ಅಂದರೆ ಮಹಿಳಾ ಸಾಹಿತ್ಯ, ದಲಿತ ಸಾಹಿತ್ಯ, ಮುಸ್ಲಿಂ ಸಾಹಿತ್ಯ (ಅದರಲ್ಲೂ ಮುಸ್ಲಿಂ ಮಹಿಳಾ ಸಾಹಿತ್ಯ) ನಮಗೆ ಆತ್ಮಕಥಾನಕಗಳಾಗಿ ಕಾಣುತ್ತವೆ, ಸಮಾಜ ಶಾಸ್ತ್ರೀಯವಾಗಿ ಕಾಣುತ್ತದೆ, 'ಸಾಹಿತ್ಯಕೃತಿ, ಕಲಾಕೃತಿ' ಎಂಬ ಪರಿಕಲ್ಪನೆಗಳು ಹಿಂದೆ ಸರಿಯುತ್ತವೆ. ಮಹಿಳೆಯ ಬರಹ 'ವಿಶಿಷ್ಟ'ವಾದ 'ವಿಭಿನ್ನ'ವಾದ ಲೋಕವನ್ನು ತೆರೆದಿಡಬೇಕಾದರೆ, ಅವಳ ಬದುಕು ಸಹ 'ವಿಶಿಷ್ಟ'ವಾಗಿ, 'ವಿಭಿನ್ನ'ವಾಗಿ ಇರಬೇಕು ಎಂಬ ತೀರ್ಮಾನಕ್ಕೆ ಬರುತ್ತೇವೆ. ಈ ಕುತೂಹಲದ ತಣಿಕೆಗೆ ಬಂದ ತೀರ್ಮಾನಕ್ಕೆ ಖಚಿತತೆ ತಂದುಕೊಡಲು ಲೇಖಕಿಯ ಬದುಕಿನ ಬಗ್ಗೆ ಆಸ್ಥೆ ತಳೆಯುತ್ತೇವೆ. ಇದರ ಅಪಾಯಗಳ ಬಗ್ಗೆ ಎಚ್ಚರಿಸುವ ಅಗತ್ಯವಿಲ್ಲ ಎನ್ನಿಸುತ್ತದೆ. ಲೇಖಕಿ ತನ್ನ ಬರಹದಲ್ಲಿ 'ಮದುವೆ' ಎಂಬ ಸಂಸ್ಥೆಯನ್ನು ಪ್ರಶ್ನಿಸಿದ್ದರೆ, ಆಕೆಯ ಬದುಕಿಗೆ ಅದನ್ನು ಅನ್ವಯಿಸಿ ನೋಡುವ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ, 'ಬದುಕು-ಬರಹ' ದ ನಡುವಿನ ಸಂಬಂಧದ ಸರಳ ಗ್ರಹಿಕೆ ಅಪಾಯಗಳನ್ನು ತಂದೊಡ್ಡಬಹುದು.

'ಲೇಖ-ಲೋಕ' ಯೋಜನೆಯು ಹಿಂದಿನ ವ್ಯಕ್ತಿಗಳ ಸ್ತ್ರೀ-ರಾಜಕಾರಣವನ್ನು ಪ್ರಶ್ನಿಸುವುದು ಈ ಬರಹದ ಉದ್ದೇಶವಲ್ಲ, ಆದರೆ ಸ್ತ್ರೀ-ಸಾಹಿತ್ಯ, ಜಡ್ಡುಗಟ್ಟಿದ ಜೀವನಗಳಿಗೆ ಕುತೂಹಲ ನೀಡುವ, ಆಸಕ್ತಿ ಕೆರಳಿಸುವ ಸಾಹಿತ್ಯವಾಗದೆ, ಕನ್ನಡ ಸಾಹಿತ್ಯದ ಎಲ್ಲೆಗಳನ್ನು ವಿಸ್ತರಿಸುವ ಕಾರ್ಯಸೂಚಿಯನ್ನು ತನಗರಿವಿಲ್ಲದೇ ತನ್ನ ಸುತ್ತಲಿನ ಪ್ರಬಲ ವಿಚಾರಧಾರೆಗಳ ಪ್ರಭಾವಕ್ಕೆ ಒಳಗಾಗಿ 'ಸ್ತ್ರೀ-ರಾಜಕಾರಣ'ವನ್ನು ಮರೆಯಬಹುದಾದ ಅಪಾಯದ ಸಾಧ್ಯತೆಗಳನ್ನು ಸೂಚಿಸುವುದಷ್ಟೇ ಎಂದು ಮತ್ತೊಮ್ಮೆ ಸ್ಪಷ್ಟೀಕರಿಸುತ್ತಾ ಸವಿತಾ ನಾಗಭೂಷಣರ 'ಸ್ತ್ರೀ- ಲೋಕ' ಮತ್ತು ವಿಜಯಾ ದಬ್ಬೆ ಸಂಪಾದಿಸಿರುವ 'ಲೇಖ-ಲೋಕ' ಪುಸ್ತಕಗಳನ್ನು ನೆಪವಾಗಿರಿಸಿಕೊಂಡು 'ಸಾಮಾನ್ಯ ಲೋಕ' ಮತ್ತು 'ವಿಶಿಷ್ಟ' ಲೋಕಗಳ ಕುರಿತ ಈ ಕೆಲವು ಟಿಪ್ಪಣಿಗಳನ್ನು ಚರ್ಚೆಗೆ ತೆರೆದಿಡುತ್ತಿದ್ದೇನೆ.

**ಉಲ್ಲೇಖಗಳು**

೧. ಈಗಲ್‌ಟನ್, ಟೆರ್ರಿ ೧೯೮೩: Literary Theory : An Introduction, ಆಕ್ಸ್‌ಫರ್ಡ್ ಬೇಸಿಲ್ ಬ್ಲಾಕ್‌ವೆಲ್

೨. ವಿಜಯಾ ದಬ್ಬೆ ಸಂ. ೧೯೯೮ **ಲೇಖ-ಲೋಕ** ಬೆಂಗಳೂರು, ಕರ್ನಾಟಕ ಲೇಖಕಿಯರ ಸಂಘ

೩. ಸವಿತಾ ನಾಗಭೂಷಣ, ೧೯೯೬ **ಸ್ತ್ರೀ-ಲೋಕ,** ಸಾಗರ, ಅಕ್ಷರ ಪ್ರಕಾಶನ

೪. ಸಾರಾ ಅಬೂಬಕ್ಕರ್ ೧೯೯೫ (೧೯೮೪) **ಚಂದ್ರಗಿರಿ ತೀರದಲ್ಲಿ,** ಬೆನ್ನುಡಿ : ಶಾಂತಾ ನಾಗರಾಜ್, ಬೆಂಗಳೂರು : ನವ ಕರ್ನಾಟಕ ಪ್ರಕಾಶನ

೫. ಸಿದ್ಧಯ್ಯ ಕೆ. ವಿ. ಗೋವಿಂದಯ್ಯ ಎಚ್. ಬೂದಾಳ ನಟರಾಜ್, ಸಂ. ೧೯೯೬ **ದಲಿತ ಕಾವ್ಯ** ಬೆಂಗಳೂರು : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

೬. ಸಿದ್ಧಲಿಂಗಯ್ಯ, ೧೯೯೬ **ಊರು ಕೇರಿ,** ಹಿನ್ನುಡಿ : ಡಿ. ಆರ್. ನಾಗರಾಜ್, ಸಾಗರ, ಅಕ್ಷರ ಪ್ರಕಾಶನ

೭. ಹನುಮಂತಯ್ಯ ಎಲ್. ಚಿನ್ನಸ್ವಾಮಿ ಬಿ. ೧೯೯೬ **ದಲಿತ ಕಥೆಗಳು,** ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ




"ನೀವು ನಿಮ್ಮ ಲೇಖನಿಯಿಂದ ಬರೆವುದನ್ನು ಆರಂಭಿಸುವುದಕ್ಕೆ ಮುಂಚೆ ಸ್ತ್ರೀಯರನ್ನು ನಿಮ್ಮ ಸ್ವಂತ ತಾಯಿಯಂತೆ ಆಲೋಚನೆ ಮಾಡಿ. ಆಗ ಭೂಮಿಯನ್ನು ತಣಿಸುವ ಸುಂದರ ಮಳೆ ಆಕಾಶದಿಂದ ಬರುವಂತೆ ನಿಮ್ಮ ಲೇಖನಿಯಿಂದ ಅತ್ಯಂತ ಪರಿಶುದ್ಧವಾದ ಸಾಹಿತ್ಯ ಉದ್ಭವಿಸಿ ಬಂದೀತು. ಸ್ತ್ರೀ ನಿಮ್ಮ ಹೆಂಡತಿ ಆಗುವುದಕ್ಕೆ ಮುಂಚೆ ನಿಮಗೆ ತಾಯಿಯ ಸ್ವರೂಪವಾಗಿದ್ದಳೆಂದು ಜ್ಞಾಪಕದಲ್ಲಿಟ್ಟುಕೊಳ್ಳಿ."

(ಮೋ. ಕ. ಗಾಂಧಿ)

ಈ ಕಥೆಯ ನೆರಳಚ್ಚಿನ ಪ್ರತಿಯನ್ನು ಗೆಳತಿಯೊಬ್ಬರ ಸಂಗ್ರಹದಿಂದ ಪಡೆಯಲಾಯಿತು. 'ಜಯ ಕರ್ನಾಟಕ 'ದಲ್ಲಿ ಪ್ರಕಟವಾದದ್ದು ಎಂಬ ಮಾಹಿತಿಯಷ್ಟೇ ದೊರೆತಿದೆ. ಕೋಲಾರದ ಶ್ರೀಮತಿ ಎಸ್. ಆರ್. ಜಯಲಕ್ಷ್ಮೀಯವರ ಈ ಕಥೆ ಸುಮಾರು ೪೦ ರ ದಶಕದ ಮೊದಲ ಭಾಗದ್ದಾಗಿದ್ದು, ಮಹಿಳೆಯರು ನವೋದಯದ ಮಾದರಿಯನ್ನು ಹಿಡಿದು ಬರೆಯುತ್ತಿದ್ದ ಮೊದ ಮೊದಲ ಕಥೆ, ಕಾದಂಬರಿಗಳ ಲಕ್ಷಣಗಳನ್ನು ತೋರುವಂಥದ್ದಾಗಿದೆ. ಬಹುಮಟ್ಟಿಗೆ ಅಂದಿನ ನಗರದ ಮಧ್ಯಮ ವರ್ಗದ ಶಿಕ್ಷಿತ ಮಹಿಳೆಯರ ಅಭಿವ್ಯಕ್ತಿಯ ಮಾದರಿಯೂ ಇದೇ ಆಗಿದೆ.

# ದೀಪಾವಳಿ

**ಶ್ರೀಮತಿ ಎಸ್. ಆರ್. ಜಯಲಕ್ಷ್ಮಿ, ಕೋಲಾರ**

ವಿಲಾಯತಿಗೆ ಹೋಗಿ ಬಂದ ಬಳಿಕ ಹಳ್ಳಿಯ ಅನಾಗರಿಕ ಹುಡುಗಿಯನ್ನು ಯಾವ ತರುಣ ಮೆಚ್ಚುತ್ತಾನೆ? ಆದರೆ ಚಿಕ್ಕಂದಿನಲ್ಲಿಯ ಆ ಹುಡುಗಿಯೊಡನಾಟದ ಸವಿನೆನಪು ಹರಿಯುವುದೆ? ಆ ಚೆಲುವು, ಆ ಒಲವು, ಆ ನಲಿವು, ..... .... ಆ ದೀಪಾವಳಿ....! .... ...

ಅಂದು ದೀಪಾವಳಿ. ಸೂರ್ಯನು ಹುಟ್ಟಿ ಎರಡು ಜಾಮವಾಗಿಯೂ ಸಹ ಪಟ ಪಟ, ಘುಟ ಘುಟ ಎಂಬ ಪಟಾಕಿ ಸುಡುವ ಶಬ್ದವೂ ಮತಾಪು ಬಿಡುವ ವಾಸನೆಯೂ ಕಮ್ಮಿಯಾಗಲಿಲ್ಲ. ಊರಲ್ಲೆಲ್ಲೆಲ್ಲಿಯೂ ಒಂದೇ ಕೋಲಾಹಲ. ಚಿಕ್ಕ ಮಕ್ಕಳ ಆಟಪಾಟಗಳಿಗೂ ದೊಡ್ಡವರ ಆನಂದಕ್ಕೂ ಮಿತಿಯೇ ಇಲ್ಲದಂತಾಗಿತ್ತು. ಕೃಷ್ಣಸ್ವಾಮಿಯು ಹಾಸಿಗೆಯಲ್ಲಿ ಹೊರಳಾಡುತ್ತಾ ತಾನು ಎಂಟು ವರ್ಷಗಳ ಹಿಂದೆ ಅನುಭವಿಸಿದ ದೀವಳಿಗೆ ಹಬ್ಬವನ್ನು ನೆನೆನೆನೆದು, ಮನದೊಳಗೆ ಉಂಟಾಗುವ ಆಲೋಚನಾ ತರಂಗಗಳಲ್ಲಿ ತಲ್ಲೀನನಾಗಿದ್ದನು. ಹೌದು, ಅದೇ ಅವನು ಕೊನೆಯ ಬಾರಿ ದೀವಳಿಗೆ ಹಬ್ಬವನ್ನು ವಿಜೃಂಭಿಸಿದ್ದನು. ಅದರ ಮಾರನೆಯ ವರ್ಷವೇ ಅವನು ವಿಲಾಯತಿಗೆ ತೆರಳಿಬಿಡಲು, ಅದಕ್ಕೆ ನಂತರದಲ್ಲಿ ಇದುವರೆಗೂ ಅವನು ಆ ಹಬ್ಬವನ್ನು ಮಾಡಿರಲೇ ಇಲ್ಲ. ಅವನು ವಿಲಾಯತಿಗೆ ತೆರಳುವುದಕ್ಕೆ ಮೂರು ವರ್ಷಗಳ ಹಿಂದೆ ತಾನೆ, ತಾಯಿ ಇಲ್ಲದ ತಬ್ಬಲಿಯಾದ ಕೃಷ್ಣಮೂರ್ತಿಯು ತಂದೆಯನ್ನೂ ಸಹ ಕಳೆದುಕೊಂಡನು. ನಂತರ ಎರಡು ದೀಪಾವಳಿಗಳಲ್ಲಿ ಮಾತ್ರ ಗ್ರಾಮದಲ್ಲಿ ವಾಸಿಸುತ್ತಿದ್ದ ಅವನ ಅಕ್ಕನು, ಮದರಾಸಿನಲ್ಲಿ ಓದುತ್ತಲಿದ್ದ ಕೃಷ್ಣಮೂರ್ತಿಯನ್ನು ಹಬ್ಬಕ್ಕೆ ಕರೆಯುತ್ತಲಿದ್ದಳು. ಆಗ ಕೃಷ್ಣಮೂರ್ತಿಯು ತನ್ನ ಅಕ್ಕನ ಮಗಳಾದ ಸುಂದರಿಗೆಂದು ರೇಷ್ಮೆಯ ಲಂಗವನ್ನೂ, ಪಟಾಕಿ ಮೊದಲಾದವುಗಳನ್ನೂ ಕೊಂಡುಕೊಂಡು ಅಕ್ಕನ ಮನೆಗೆ ತೆರಳುವನು. ಮನೆಯ

ಹೊಸ್ತಿಲನ್ನು ದಾಟುವುದರೊಳಗಾಗಿಯೇ ಸುಂದರಿಯು ಓಡಿಬಂದು, ಕಿಟ್ಟುವಿನ ಕಾಲುಗಳನ್ನು ಕಟ್ಟಿಕೊಂಡು ಮಾವಾ........ ಚುರುಕುಳ್ಳಿ ತಂದಿದ್ದೀಯಾ? ನನಗೆ ವಿಷ್ಣುಚಕ್ರ ಬೇಕಲ್ಲಾ? ಎಂದು ಐವತ್ತೆಂಟು ಪ್ರಶ್ನೆಗಳನ್ನು ಕೇಳುವ ವಾಡಿಕೆ. ಅವಳು ಒಂದು ಹರಕು ಚೀಟಿನ ಲಂಗವನ್ನೂ ಅಂಗಿಯನ್ನೂ ತೊಟ್ಟು, ಕೆದರಿದ ತಲೆಯೊಂದಿಗೆ ಎದುರಿಗೆ ಬಂದು ಈಗಲೂ ಪ್ರತ್ಯಕ್ಷವಾಗಿ ನಿಂತಿರುವಂತೆ ಭಾವಿಸಿ, ಸುಂದರಿಯ ಸುಂದರಮೂರ್ತಿಯನ್ನು ನೆನೆದು ಕೃಷ್ಣಮೂರ್ತಿಯು ನಸು ನಕ್ಕನು. ಅವಳೊಡನೆ ತಾನೂ ಬೆರೆತು ಪಟಾಕಿಗಳನ್ನು ಸುಟ್ಟು ಆಟವಾಡಿ, ಅಭ್ಯಂಗಸ್ನಾನಮಾಡಿ, ಅಕ್ಕನು ಅಕ್ಕರೆಯೊಡನೆ ಬಡಿಸಿದ ರುಚಿಕರವಾದ ವಿವಿಧ ಭಕ್ಷ್ಯ, ಭೋಜ್ಯಗಳನ್ನು ಉಂಡು, ಹಬ್ಬವನ್ನು ಆನಂದದಿಂದ ಆಚರಿಸಿದ ಆ ದಿವಸಗಳನ್ನು ಇಂದೂ ಕಿಟ್ಟು ಇಚ್ಛಿಸಿದನು. ಅವನು ತನ್ನ ಪ್ರಿಯ ಅಕ್ಕನನ್ನೂ ಸುಂದರಿಯನ್ನೂ ಕಂಡು ಎಂಟು ವರ್ಷಗಳು ಕಳೆದುಹೋಗಿದ್ದವು. ತನಗೇನೇ ಸುಂದರಿಯನ್ನು ಕೊಡಬೇಕೆಂಬ ಅಭಿಲಾಷೆಯು ತನ್ನ ಅಕ್ಕನಿಗಿದೆಯೆಂಬುದನ್ನು ಅವನು ತನ್ನ ಬಾಲ್ಯದಿಂದಲೂ ಅರಿತಿದ್ದನು. ಆದರೆ ವಿಲಾಯತಿಗಿ ತೆರಳಿ ಐಸಿಎಸ್ ಪರೀಕ್ಷೆಯಲ್ಲಿ ಉತ್ತೀರ್ಣನಾದ ಮೇಲೆ, ಆ ಬಡವಳೂ ಅನಾಗರಿಕಳೂ ಆದ ಹಳ್ಳಿಯ ಹುಡುಗಿಯನ್ನು ಮದುವೆಯಾಗಲು ಅವನ ಮನಸ್ಸು ಒಪ್ಪಲಿಲ್ಲ.

ಅವನ ಸಹೋದರಿಯು ವಿಲಾಯತಿಯಲ್ಲಿರುವ ಕೃಷ್ಣಮೂರ್ತಿಗೆ ಪದೇಪದೇ ಹುರಿಗಾಳು, ಕಾರದ ಅವಲಕ್ಕಿ, ಕೋವಾ, ಚಕ್ಕುಲಿ ಎಂದು ನಾನಾತರಹದ ತಿಂಡಿಗಳನ್ನು ತಯಾರುಮಾಡಿ ಪಾರ್ಸಲ್ ಮಾಡುತ್ತಲಿದ್ದಳು. ಜೊತೆಗೆ 'ನೀನು ಯಾವಾಗ ಇಲ್ಲಿಗೆ ಹಿಂತಿರುಗಿ ಬರುತ್ತೀಯಾ? ನಮ್ಮ ಪುಟ್ಟೂ-ಸುಂದರಿ ಸದಾ ನಿನ್ನನ್ನು ನೆನಸುತ್ತಲೇ ಇದ್ದಾಳೆ. ಅವಳು ನಿನ್ನನ್ನು ಬಿಟ್ಟು ಇನ್ನಾರನ್ನೂ ಮದುವೆಯಾಗುವುದಿಲ್ಲವಂತೆ...." ಎಂದೂ, "ಅಬ್ಬಬ್ಬಾ, ಸುಂದರಿಯು ಈಗ ಎಷ್ಟು ಬೆಳೆದುಬಿಟ್ಟಿದ್ದಾಳೆ ಗೊತ್ತೇನೋ ಕಿಟ್ಟು! ಎತ್ತರದಲ್ಲಿ ನಮ್ಮ ಸುಬ್ಬೀ ಮಗಳು ಮೀನಾಕ್ಷಿಗಿಂತ ಎತ್ತರವಾಗಿದ್ದಾಳೆ. ಈಗ ನೀನು ಅವಳನ್ನು ಕಂಡರೆ ನಿನಗೆ ಅವಳ ಗುರುತೇ ಸಿಗಲಾರದು. ಈ ಸಲ ಕಳುಹಿಸಿರುವ ಕೋವವನ್ನು, ಅವಳೊಬ್ಬಳೇ ನಿನಗೆಂದು ಒಂದು ದಿನವೆಲ್ಲಾ ಒಲೆಯಮುಂದೆ ಕುಳಿತು ಕಾಯಿಸಿದಳು. ಪಾಪಾ! ಚಕ್ಕುಲಿಯನ್ನೂ ಅವಳೇ ಮಾಡಿದಳು. ಅಡಕೆ ಪುಡಿಯನ್ನಂತೂ ನಿನಗೆಂದು ಸ್ಪೆಶಲ್ಲಾಗಿ ತಯಾರಿಸಿದಳು. ಅಧಿಕವಾಗಿ ಏಕೆ ಬರೆಯಲಿ! ಅಂತೂ ಈ ಸಲ ಕಳುಹಿಸಿರುವ ಭಕ್ಷ್ಯಗಳಷ್ಟೂ ಅವಳೊಬ್ಬಳ ಕೈಯದೇ. ಅವಳಿಗೆ ನಿನ್ನ ಮೇಲಿರುವ ಪ್ರೇಮದ ಆಳವೆಷ್ಟೋ !" ಎಂದೂ ಪರಿಪರಿಯಾಗಿ ಪತ್ರಗಳನ್ನು ತಮ್ಮನಿಗೆ ಬರೆಯುವವಳು. ಕೃಷ್ಣಮೂರ್ತಿಯು ಅದನ್ನು ಓದಿದೊಡನೆ "ಛೀ, ಈ ಹಳ್ಳಿಗಾಡಿನ ಹುಡುಗಿಗೆ ಎಷ್ಟೊಂದು ಧೈರ್ಯ! ಕಾದುಬಿದ್ದಿರು, ನಿನ್ನನ್ನೇ ಮದುವೆಯಾಗುತ್ತೇನೆಂದು!" ಎಂದು ನುಡಿಯುತ್ತಾ ಪತ್ರಗಳನ್ನು ಚೂರುಚೂರಾಗಿ ಹರಿದುಹಾಕುವ ವಾಡಿಕೆ.

ನ್ಯೂಮೋನಿಯಾ ಕಾಯಿಲೆಯಿಂದ ಬಹಳವಾಗಿ ನರಳಿ ಈಗತಾನೇ ಗುಣಹೊಂದುತ್ತಲಿರುವ ಕಿಟ್ಟು, ಇಂದು ಈ ವಿಷಯಗಳನ್ನು ಒಂದೊಂದಾಗಿ ನೆನೆಸಿಕೊಂಡು ದುಃಖಿಸುತ್ತಿದ್ದನು. ಅವನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. "ಸುಂದರೀ, ನನ್ನ

ಪ್ರಿಯೇ, ನಿನ್ನ ಅಗಾಧ ಪ್ರೇಮವು ಪವಿತ್ರವಾದದ್ದು. ಯಾಕೆ, ಹಳ್ಳಿಗಾಡಿನ ಹುಡುಗಿಯಾದ ಮಾತ್ರಕ್ಕೆ ಹೃದಯವಿಲ್ಲವೇ? ಪ್ರೇಮವಿಲ್ಲವೇ? ಗುಣವಿಲ್ಲವೇ?ಸೌಂದರ್ಯ ತಾನೇ ಇಲ್ಲವೇ?'' ಎಂದು ತನಗೆ ತಾನೇ ಪ್ರಶ್ನಿಸಿಕೊಂಡು, ತನ್ನ ತಿಳಿಗೇಡಿತನಕ್ಕೆ ತನ್ನನ್ನೇ ಬಯ್ದುಕೊಂಡನು. ಅವನು ಇಂದೇ ಹೊರಟು ಸುಂದರಿಯನ್ನು ನೋಡಿಬರಬೇಕೆಂದು ಆತುರಗೊಂಡನು.

ಕೃಷ್ಣಮೂರ್ತಿಯು ವಿಲಾಯತಿಯಿಂದ ಹಿಂತಿರುಗಿದೊಡನೆಯೆ ಉತ್ತರ ಹಿಂದುಸ್ತಾನದಲ್ಲಿ ಉದ್ಯೋಗದಲ್ಲಿ ನಿಯಮಿತನಾದನು. ತನ್ನ ಸಹೋದರಿಯನ್ನೂ ಸುಂದರಿಯನ್ನೂ ಹೋಗಿ ಒಂದು ಬಾರಿ ನೋಡಿಬರಬೇಕೆಂದು ಅವನ ಮನಸ್ಸು ತಳಮಳಗೊಂಡಿತ್ತು. ಮರುಕ್ಷಣವೇ, ತನ್ನ ಸಹೋದರಿಯು ಆ ಅನಾಗರಿಕ ದಡ್ಡ ಹುಡುಗಿಯನ್ನು ಮದುವೆಯಾಗೆಂದು ತನ್ನನ್ನು ಪೀಡಿಸುವಳಲ್ಲಾ ಎಂದು ಭೀತಿಯುಂಟಾಗುವುದು. ಉನ್ನತೋನ್ನತವಾದ ಹುದ್ದೆಯನ್ನು ಪಡೆದ, ಅಪ್‌ಟುಡೇಟ್ ಯುವಕನಾದ ತಾನು ಆ ಹಳ್ಳಿಯ ಅನಾಗರಿಕ ಬೊಕ್ಕಿಷವನ್ನುಮದುವೆಯಾಗಿ ಬಂದರೆ, ತನ್ನ ಸಹೋದ್ಯೋಗಿಗಳೂ ಮಿತ್ರರೂ ತನ್ನನ್ನು ಏನೆಂದು ತಿಳಿಯುವರೋ, ಎಂದು ಅವನು ನೆನೆದುಕೊಂಡು, ಇಂತಹ ಅಪಮಾನಕ್ಕೆ ಸಿಕ್ಕಿಕೊಳ್ಳಲು ಮನಬರದೆ, ತನ್ನ ದಕ್ಷಿಣದೇಶದ ಪ್ರಯಾಣವನ್ನು ಮುಂದುವರಿಸುತ್ತಲೇ ಬಂದನು. ಆದರೆ ಅವನಿಗಂತೂ ಇದುವರೆಗೂ ಮನಸ್ಸಿಗೆ ಹಿಡಿದಂತಹ ಪ್ರೇಯಸಿಯು ಸಿಗಲಾರದೆ ಹೋದಳು. ಹೀಗಿರಲು, ಅವನಿಗೆ ದೆಹಲಿಗೆ ವರ್ಗವಾದ ಮಾರನೆಯ ವರ್ಷವೇ ಈ ಕಠಿಣ ಕಾಯಿಲೆಯು ಬಂದು ಬದುಕುವುದೇ ಕಷ್ಟವಾಗಿಹೋಯಿತು. ಇದುವರೆಗೂ ನಮ್ಮ ನಾಡಹಬ್ಬಗಳನ್ನು ಕೊಂಡಾಡುವುದೇ ಒಂದು ಅಪಮಾನವೆಂದು ತಿಳಿದಿದ್ದ ಕೃಷ್ಣಮೂರ್ತಿಯು, ಹಾಸಿಗೆಯಲ್ಲಿ ಹೊರಳಾಡುತ್ತಾ ತನ್ನ ಸಹೋದರಿಯ ಮತ್ತು ಸುಂದರಿಯ ಜೊತೆಗೆ ದೀಪಾವಳೀ ಹಬ್ಬವನ್ನು ಕೊಂಡಾಡಬೇಕೆಂದು ಬಹಳವಾಗಿ ಬಯಸಿದನು. ತಾನು ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಛಾಯಾಚಿತ್ರಗಳನ್ನು (Photoes) ಹಿಡಿದು ಅಂಟಿಸಿ ಇಟ್ಟಿದ್ದ ಪುಸ್ತಕವನ್ನು(Album) ಪಕ್ಕದಲ್ಲಿದ್ದ ಪುಟ್ಟ ಮೇಜಿನಿಂದ ತೆಗೆದು ಒಂದೊಂದಾಗಿ ಚಿತ್ರವನ್ನು ನೋಡತೊಡಗಿದನು. ಅದರಲ್ಲಿರುವ ಮುಕ್ಕಾಲುಪಾಲು ಚಿತ್ರಗಳು ಸುಂದರಿಯ ಚಿತ್ರಗಳೇ! ಆ ಹಸುಗೂಸಿನ ನಿರ್ಮಲವಾದ ಹೃದಯದಲ್ಲಿ ಅವಳಿಗೆ ತನ್ನಲ್ಲಿರುವ ಅಗಾಧವಾದ ಪ್ರೇಮವು ತುಂಬಿ ತುಳುಕಾಡುತ್ತಲಿರುವುದನ್ನು, ಅವಳು ತನ್ನನ್ನು ನೋಡಿ ನಗುವ ಆ ಸುಗುಣ ಮನೋಹರವಾದ ನಸುನಗುವಿನಲ್ಲಿ ಇಂದೇ ಅವನು ಕಂಡು ಆನಂದಿಸಿದನು. ಮತ್ತೊಂದು ಚಿತ್ರದಲ್ಲಿ ತಾನು ಅವಳಿಗೆಂದು ಕೊಂಡು ತಂದ ಲಂಗವನ್ನುಟ್ಟು, ಅವಳು ತನ್ನನ್ನು ಕಂಡು ಮುದ್ದಾಗಿ ನಗುವ ನಗುವಿನಲ್ಲೇ ತನಗೆ ಧನ್ಯವಾದ (Thanks) ತೋರ್ಪಡಿಸುವುದನ್ನೂ, ಮತ್ತೊಂದರಲ್ಲಿ ತಾನು ಕೊಂಡುತಂದ ವಿಷ್ಣುಚಕ್ರವನ್ನು ಅತ್ಯಾನಂದದೊಡನೆ ಹೊತ್ತಿಸಿ ಹಿಡಿದುಕೊಂಡಿರಲು ಆ ಬೆಳಕಿನಲ್ಲಿ ಆ ನಲ್ಲೆಯ ಸೌಂದರ್ಯರಾಶಿಯು ಅತ್ಯಂತ ಸೊಗಸಾಗಿ ಪ್ರಕಾಶಿಸುತ್ತಿರುವುದನ್ನೂ ಕಂಡು, ಆನಂದದೊಡನೆಯೂ ಮರುಕ್ಷಣ ದುಃಖದೊಡನೆಯೂ ಬಿಕ್ಕಿ ಬಿಕ್ಕಿ ಅತ್ತುಬಿಟ್ಟನು ಆ

ಯುವಕನು. ಅವನ ಹೃದಯದಲ್ಲಿ ಬೂದಿಮುಚ್ಚಿದ ಕೆಂಡದಂತಿದ್ದ ಅವಳ ಮೇಲಣ ಪ್ರೇಮವು, ಏಕಾಂತವೆಂಬ ಬೀಸಣಿಗೆಯಿಂದ ಬೀಸಲ್ಪಟ್ಟು ಉರಿಯಲಾರಂಭಿಸಿತು. ತನ್ನ ಘಟಾಟೋಪವಾದ ಅಜ್ಞಾನ ಜೀವನವನ್ನೂ, ಸುಂದರಿಯ ನೆಮ್ಮದಿಯಿಂದೊಡಗೂಡಿದ ಆನಂದಮಯ ಜೀವನವನ್ನೂ ಹೋಲಿಸಿನೋಡಿ ನಾಚಿಕೆಗೊಂಡನು. 'ಸುಂದರಿಯು ಈಗ ಯಾರನ್ನು ಮದುವೆಯಾಗಿಬಿಟ್ಟಿರುವಳೋ?' ಎಂದು ನೆನೆಸಿಕೊಂಡ ಮಾತ್ರಕ್ಕೆ ಅವನ ಹೃದಯವು ವೇಗವಾಗಿ ಹೊಡೆಯಲಾರಂಭಿಸಿತು. ಹಾಗೆ ಸಂಭವಿಸಿದ್ದಲ್ಲಿ ತಾನು ತನ್ನ ಜೀವನವನ್ನು ಬ್ರಹ್ಮಚಾರಿಯಾಗಿಯೇ ಇದ್ದು ಕಳೆಯುವುದಾಗಿ ಪ್ರತಿಜ್ಞೆ ಮಾಡಿಕೊಂಡನು. "ಇನ್ನು ಮೇಲೆ ಸುಂದರಿಯೊಡಗೂಡಿ ಆನಂದವಾಗಿ ದೀಪಾವಳಿ ಹಬ್ಬವನ್ನು ಕೊಂಡಾಡಲಾರೆನೇ" ಎಂದು ನೆನೆಯುವಾಗಲೇ ಅವನ ಮೈ ನಡುಗಿತು.

ಅಷ್ಟರಲ್ಲಿ ನರ್ಸೊಬ್ಬಳು ಬಂದು "ಸಾರ್, ಔಷಧಿ, ಸಾರ್ ಔಷಧಿ!" ಎಂದು ಆಂಗ್ಲೇಯ ಭಾಷೆಯಲ್ಲಿ ಕೂಗಲು, ಸ್ವಪ್ನಪ್ರಪಂಚದಲ್ಲಿ ತೇಲಾಡುತ್ತಿದ್ದ ಕೃಷ್ಣಮೂರ್ತಿಗೆ ಎಚ್ಚರಿಕೆಯುಂಟಾಯಿತು.

ಕೃಷ್ಣನು "ಮನೆಗೆ ಹೋಗಿಬಿಟ್ಟು, ಅರ್ಧಗಂಟೆಯೊಳಗಾಗಿ ಹಿಂತಿರುಗಿ ಬಂದುಬಿಡುತ್ತೇನೆಂದು ಹೇಳಿದೆಯಲ್ಲಾ? ಏತಕ್ಕಾಗಿ ಬರಲು ಇಷ್ಟು ನಿಧಾನವಾಯಿತು?" ಎಂದು ಆಂಗ್ಲೇಯ ಭಾಷೆಯಲ್ಲಿಯೇ ಪ್ರಶ್ನಿಸಲು,

ನರ್ಸು ನಸುನಗುತ್ತಾ "ಇಂದು ದೀಪಾವಳಿಯಲ್ಲವೆ? ಅಭ್ಯಂಗ ಸ್ನಾನ ಮಾಡಿ ಹೊಸ ಉಡುಪು ತೊಟ್ಟುಕೊಂಡು, ಹಳ್ಳಿಯಿಂದ ನನ್ನ ತಾಯಿಯು ಕಳುಹಿಸಿದ ಭಕ್ಷ್ಯಗಳನ್ನು ಉಂಡು ಹಬ್ಬಮಾಡಿ, ಎಲ್ಲ ಮುಗಿಸಿಕೊಂಡು ಬರಲು ಸ್ವಲ್ಪ ತಾಮಸವಾಯಿತು. ಬಾಗಿಲಿನಲ್ಲೇ ತಾವು ಕರೆದರೆ ಇರಲೆಂದು ಜವಾನನನ್ನು ನಿಲ್ಲಿಸಿಬಿಟ್ಟು ಹೋಗಿದ್ದೆನಲ್ಲಾ" ಎಂದಳು.

ಕೃಷ್ಣ-"ಚಿಂತೆಯಿಲ್ಲಾ. ತಮ್ಮ ಹಳ್ಳಿ ಯಾವುದು, ಮಿಸ್ ತ್ರಿಪುರಾ?"

ಮಿಸ್ ತ್ರಿಪುರಾ -"ಮೈಸೂರು ಸಂಸ್ಥಾನದಲ್ಲಿರುವ ಶಾಂತಿಗ್ರಾಮ ಎಂಬುದು."

"ಶಾಂತಿಗ್ರಾಮ ! ಮಿಸ್ ತ್ರಿಪುರಾ ! ನನ್ನ ತ್ರಿಪುರ ಸುಂದರಿಯಾ ನೀನು! ನೀನು ಹೇಗೆ ಇಷ್ಟೊಂದು ವಿದ್ಯೆಯನ್ನು ಕಲಿತೆಯಮ್ಮಾ!" ಎಂದು ಅತ್ಯಾನಂದದೊಡನೆಯೂ, ಆಶ್ಚರ್ಯದೊಡನೆಯೂ ಕೃಷ್ಣನು ಕೇಳಿದನು.

ಮಿಸ್ ತ್ರಿಪುರಾ-" ಮಾವ ! ನೀವು ವಿಲಾಯತಿಗೆ ತೆರಳಿದ ನಂತರದಲ್ಲಿ ಅಮ್ಮನು ನನ್ನನ್ನು ವಿದ್ಯಾವ್ಯಾಸಂಗಕ್ಕಾಗಿ ಬೆಂಗಳೂರಿಗೆ ನನ್ನ ಸೋದರತ್ತೆಯ ಮನೆಗೆ ಕಳುಹಿಸಿದಳು. ಅದಕ್ಕೆ ತಂದೆಯವರೂ ಒಪ್ಪಿದರು. ನೀವು ಹಿಂತಿರುಗಿದನಂತರ ನಾನು ವಿದ್ಯಾವತಿಯಾಗಿರುವುದನ್ನು ಕಂಡು ಆಶ್ಚರ್ಯಗೊಳ್ಳಬೇಕೆಂಬ ಅಭಿಲಾಷೆಯಿಂದ, ತಾಯಿ ತಂದೆಗಳಿಬ್ಬರೂ ಈ ವಿಷಯವನ್ನು ಕುರಿತು ನಿಮಗೆ ಬರೆಯಲೆ ಇಲ್ಲ. ಹಿಂದೂ ದೇಶಕ್ಕೆ ಹಿಂತಿರುಗಿದ ನಂತರವೂ ಕೂಡ ನನ್ನನ್ನು ನೀವು ಕೈಬಿಟ್ಟುಬಿಡಲು, ಇನ್ನು ಮೇಲೆ

ಕನ್ಯೆಯಾಗಿಯೇ ಕಾಲಕಳೆಯುವುದೆಂದು ನಿಶ್ಚಯಿಸಿದೆನು. ಮುಂದೆ ಮೈಸೂರು ಸೀಮೆಯಲ್ಲಿಯೇ ಇರಲು ಇಷ್ಟವಿಲ್ಲದೆ, ಮುಂದಿನ ವ್ಯಾಸಂಗವನ್ನು ಇಲ್ಲಿಗೆ ಬಂದು ಮೆಡಿಕಲ್ ಕಾಲೇಜಿನಲ್ಲಿ ಮುಗಿಸಿದೆನು. ಈ ವರ್ಷದ ಅಪ್ರೆಂಟೀಸ್ ಕೋರ್ಸ್ ಮುಗಿಸಿದ ನಂತರ ಶಾಂತಿಗ್ರಾಮಕ್ಕೆ ಹಿಂತಿರುಗಿ ಗ್ರಾಮಸೇವೆಮಾಡಬೇಕೆಂದಿರುವೆನು."

ಕೃಷ್ಣ "ಪ್ರಿಯೇ, ನಾನು ನಿನ್ನನ್ನು ಎಲ್ಲಿಯೂ ಹೋಗಲು ಬಿಡೆನು. ನನ್ನ ತಪ್ಪಿತವನ್ನು ದಯವಿಟ್ಟು ಕ್ಷಮಿಸಿಬಿಡು. ಅಕ್ಕನು ಬರೆಯುತ್ತಿದ್ದಂತೆ ನೀನು ಎಷ್ಟೊಂದು ಬದಲಾವಣೆ ಹೊಂದಿರುವೆ! ಸಾಕ್ಷಾತ್ ರತಿದೇವಿಯಂತಿರುವೆಯಲ್ಲಾ! ನನ್ನ ಮುದ್ದು ಸುಂದರೀ" ಎಂದು ತನ್ನ ಬಲಹೀನವಾದ ಕರಗಳಿಂದ ಅವಳನ್ನು ಅಪ್ಪಿಕೊಂಡನು.

ಕೃಷ್ಣಮೂರ್ತಿಯ ದೀಪಾವಳಿ ಹಬ್ಬವು ಸಾಂಗವಾಗಿ ನಡೆಯಿತು.



"ಪುರುಷ ಮಹಿಳೆಗೆ ಮಾಡಿರುವ ಅನ್ಯಾಯಗಳ ಬಗೆಗೆ ಕ್ರೋಧಗೊಳ್ಳಲು ನಾನೇನು ಹೆಣ್ಣಾಗಬೇಕಿಲ್ಲ"

(ಮೋ. ಕಾ. ಗಾಂಧಿ)

ಮಹಿಳಾವಾದ, ಸ್ತ್ರೀವಾದಿ ಚಿಂತನೆಗಳು ಪ್ರಚಲಿತಗೊಳ್ಳುತ್ತಿರುವ ಇಂದಿನ ದಿನಗಳಲ್ಲಿ ನಮ್ಮ ಮಹಿಳೆಯರ ಅಭಿವ್ಯಕ್ತಿಯ ಒಂದು ಮಾದರಿಯಾಗಿ ಡಾ. ವಿಜಯಾ ದಬ್ಬೆಯವರ ಎರಡು ಕವನಗಳು ಇಲ್ಲಿವೆ.

# ಸೊಳ್ಳೆ ಮತ್ತು ಮೂರನೆಯ ಮಹಾಯುದ್ಧ

ಡಾ. ವಿಜಯಾ ದಬ್ಬೆ

ಯಾವ್ಯಾವುದರ ಸೂತ್ರ ಎಲ್ಲೆಲ್ಲಿ ಎಂದು
ಎಲ್ಲರೂ ಹುಡುಕುತ್ತಾರೆ
ಬಲ್ಲೆನೆಂದು ಬೀಗುತ್ತಾರೆ
ಒಲ್ಲೆನೆಂದು ಸೆಡೆಯುತ್ತಾರೆ
ಆ ನಿಗೂಢ ಮಾತ್ರ
ಕೈಗೆ ಸಿಕ್ಕದೆ ತಣ್ಣಗೆ ನಗುತ್ತದೆ.

ಮಹಾಯುದ್ಧವನ್ನು ನಿರ್ಣಯಿಸಿದ್ದು
ನಾನೆಂದು ತಾನೆಂದು
ಕೊರಳಪಟ್ಟಿಯ ಬಿಗಿಮಾಡಿಕೊಳ್ಳುತ್ತಾರೆ.
ಚರಿತ್ರಕಾರರು ಲೇಖನಿಯ ಪಸೆ
ಆರುವವರೆಗೆ ಬರೆಯುತ್ತಾರೆ.
ನಿಜದನೆಲೆ ಮತ್ತೆಲ್ಲೋ ಕಣ್ಣು ಹೊಡೆಯುತ್ತದೆ.

ದಣಿದು ಹಣ್ಣಾಗಿದ್ದ ನಾಯಕನ
ನಿದ್ದೆ ಕೆಡಿಸಿತು ಒಂದು ಸಣ್ಣ ಸೊಳ್ಳೆ
ನಿದ್ದೆಗೆಟ್ಟ ನಾಯಕ ಯುದ್ಧನಿರ್ಣಯ ಸಭೆಗೆ ಬಂದ
ಆ ಸಭೆಯೆಂದರೇನು ? ನಿದ್ದೆ ಎಚ್ಚರದ
ನಡುವಿನೊಂದು ಮಹಾವಿಸ್ಮಯ
ಯುದ್ಧ ಬೇಕೋ ಬೇಡವೋ ಎಂದರು
ನಿದ್ದೆಯಲ್ಲಿದ್ದ ನಾಯಕ ತಲೆದೂಗಿದ
ಸೊಳ್ಳೆ ಗೆದ್ದಿತು, ಯುದ್ಧಘೋಷಣೆಯಾಯಿತು.

## ದೇವರೇ, ನಿನಗೆ ಶುಭವಾಗಲಿ

ಡಾ. ವಿಜಯಾ ದಬ್ಬೆ

ನಿನ್ನಂತೆ ನಾನು
ಸ್ವಯಂಭೂ ಎಂಬ ಅಬ್ಬೇಪಾರಿಯಲ್ಲ
ಅಪ್ಪ ಅಮ್ಮರ ಸಂಗದಲ್ಲಿ ಅರಳಿದೀ ಜೀವಕ್ಕೆ
ನೆತ್ತಿಗೆ ಎಣ್ಣೆಯಿಟ್ಟು ಕೈಗೆ ರೊಟ್ಟಿ ಕೊಟ್ಟು
ಚೋಟುದ್ದವನ್ನು ಮಾರುದ್ದ ಮಾಡಿದ್ದಾರೆ ಅಜ್ಜ ಅಜ್ಜಿಯರು.
ದಟ್ಟಡಿಯಿಡುವಾಗ ಕೈಕೊಟ್ಟು
ತೊದಲಿಡುವಾಗ ನುಡಿಕೊಟ್ಟು
ಕಂಡದ್ದು ಕಾಣದ್ದು ಹಿತವರು ಹಗೆಗಳು
ಹಳ್ಳ ಗಾಳಿ ಸಸ್ಯ ತೆಂಗು
ಎಲ್ಲ ಎಲ್ಲ ಬೆಳಸಿವೆ
ಎಲ್ಲ ಎಲ್ಲ ನಿಲಿಸಿವೆ.
ನಿನ್ನಂತೆ ನಾನು ಸ್ವಯಂಭುವಲ್ಲ
ಪುಣ್ಯಕ್ಕೆ ಒಂಟಿ ಸುಂಟರಗಾಳಿಯಲ್ಲ

ಪಂಚಭೂತಗಳೇ ಏನು
ಕೋಟಿ ಭೂತಗಳೇ ನನ್ನ ಕಡೆದಿವೆ
ಸಲ್ಲುತ್ತೇನೆ ಈ ಕೋಟಿಗಳಿಗೆ
ಆ ಸ್ವಯಂಭೂಯತ್ವ ಸಾಕೆನಿಸಿ
ನನ್ನಂತೆ ನೀನೂ ಹುಟ್ಟಿ ಬೆಳೆಯಲು ಬಯಸಿ
ಇಲ್ಲಿಗೆ ಅವತಾರದಲ್ಲಿ ಬಂದೆಯಲ್ಲ ಕಾಮ್ರೇಡ್
ಅಷ್ಟು ಸಾಕು, ನಾನುಂಡ ಸುಖವ
ನೀನಿಷ್ಟು ತಗೋ ನಿನಗೆ ಶುಭವಾಗಲಿ

ಓದಿಗೆ ನೆರವು

# ಮಹಿಳಾ ಅಧ್ಯಯನ

ಸಿದ್ಧತೆ : ಡಾ. ಎಂ. ಉಷಾ

**ಟಿಪ್ಪಣಿ**

ಪಾಶ್ಚಾತ್ಯ ಜಗತ್ತಿನಲ್ಲಿ ೧೮ ನೆಯ ಶತಮಾನದ ಕೊನೆಯ ವೇಳೆಗೆ ಸ್ತ್ರೀವಾದಿ ಚಿಂತನೆಗಳು ಸ್ಪಷ್ಟ ರೂಪವನ್ನು ಪಡೆದುಕೊಳ್ಳಲಾರಂಭಿಸಿದುವು. ಇದಕ್ಕೆ ಮುಂಚೆಯೇ The origin of the family, private property and state ಎಂಬ ಗ್ರಂಥದಲ್ಲಿ ಏಂಗಲ್ಸ್ ಈ ಕುರಿತು ಮಹತ್ವದ ಚರ್ಚೆಯೊಂದನ್ನು ಹುಟ್ಟುಹಾಕಿದ್ದ. ಮನುಕುಲದಲ್ಲಿ ಹುಟ್ಟಿಕೊಂಡ ದಾಸ್ಯ ಪ್ರವೃತ್ತಿಗೆ ಅತ್ಯಂತ ಹೀನಾಯವಾದ ನೆಲೆಯಲ್ಲಿ ಸಿಲುಕಿದ ಮಹಿಳೆಯನ್ನು ಕುರಿತು ಆತ ವಿವರಿಸಲು ಯತ್ನಿಸಿದ್ದ. ಅನಂತರ ೧೮ ನೇ ಶತಮಾನದ ಕಡೆಯಲ್ಲಿ ಮೇರಿವುಲ್ಫ್‌ಸ್ಟನ್ ಕ್ರಾಫ್ಟ್‌ಳು The Vindication of the Rights and Wrongs of Woman ಎಂಬ ಕೃತಿಯಲ್ಲಿ ತೀರಾ ಗಂಭೀರವಾದ ರೀತಿಯಲ್ಲಿ ಮಹಿಳಾ ಪ್ರಶ್ನೆಯನ್ನು ಎತ್ತಿದಳು. ನಂತರ ಸಿಮೋನ್ ದ ಬೋವಾ, ವರ್ಜೀನಿಯಾ ವುಲ್ಫ್, ಬೆಟ್ಟಿ ಫ್ರೀಡನ್, ಮೇರಿ ಎಲ್‌ಮನ್, ಶುಲಾಮಿತ್ ಫೈರ್‌ಸ್ಟನ್, ಕೇಟ್ ಮಿಲ್ಲೆಟ್ ಮುಂತಾದವರು ಸ್ತ್ರೀವಾದಿ ಚಿಂತನೆಯನ್ನು ಬೆಳೆಸಿದರು. ಉದಾರವಾದಿ ನೆಲೆಯಲ್ಲಿ ಚಿಂತನೆ ಆರಂಭಿಸಿದ ಇವರನ್ನು ಸ್ತ್ರೀವಾದದ ಆದಿಚಿಂತಕಿಯರು ಎಂದು ಕರೆಯಲಾಗಿದೆ.

ಈ ಶತಮಾನದ ೬೦ರ ಉತ್ತರಾರ್ಧ ಹಾಗೂ ೭೦ರ ದಶಕದ ಆರಂಭದಲ್ಲಿ ರೂಪುಗೊಳ್ಳ ತೊಡಗಿದ ಸ್ತ್ರೀವಾದಿ ಚಿಂತನೆಯಾದರೋ ತನ್ನನ್ನು ಉದಾರವಾದಿ ಸ್ತ್ರೀವಾದಿ ನೆಲೆಗಿಂತ ಭಿನ್ನವಾಗಿ ತೀವ್ರಗಾಮಿ ಸ್ತ್ರೀವಾದವಾಗಿ ಗುರುತಿಸಿಕೊಂಡಿತು. ಮಾರ್ಕ್ಸ್‌ವಾದಿ ಸ್ತ್ರೀವಾದ, ಸಾಂಸ್ಕೃತಿಕ ಸ್ತ್ರೀವಾದ, ಕಪ್ಪು ಸ್ತ್ರೀವಾದ, ಲೆಸ್ಬಿಯನ್ ಸ್ತ್ರೀವಾದ -ಹೀಗೆ ವಿವಿಧ ಪಂಥಗಳಾಗಿ ನಿರ್ವಚಿಸಿಕೊಂಡಿತು. ವಿವಿಧ ಜ್ಞಾನ ಶಾಖೆಗಳಿಂದ ತನ್ನನ್ನು ನಿರ್ವಚಿಸಿಕೊಳ್ಳುವ ಹಾಗೂ ವಿವಿಧ ಜ್ಞಾನ ಶಾಖೆಗಳಲ್ಲಿ ತನ್ನ ದೃಷ್ಟಿಕೋನವೊಂದನ್ನು ಪ್ರಭಾವಿಸುವ ಕೆಲಸವನ್ನು ಆರಂಭಿಸುವ ಮೂಲಕ ಸ್ತ್ರೀವಾದವು ೨೦ ನೇ ಶತಮಾನದ ಪ್ರಮುಖ ಆಲೋಚನಾ ಕ್ರಮಗಳಲ್ಲಿ ಒಂದಾಯಿತು.

ವಸಾಹತುಶಾಹಿ ಶಿಕ್ಷಣದ ಜೊತೆ ಜೊತೆಗೆ ತನ್ನ ವೈಚಾರಿಕ ಆಕೃತಿಯನ್ನು ರೂಪಿಸಿಕೊಳ್ಳುತ್ತ ಬಂದ ಭಾರತದ ಆಧುನಿಕ ಚಿಂತನಾಕ್ರಮವು, ಮಹಿಳಾ ಪರವಾದ ಕುತೂಹಲ ಕಾಳಜಿಗಳನ್ನು ಆರಂಭದಿಂದಲೇ ಪ್ರಕಟಪಡಿಸಿದೆ. ಆದ್ದರಿಂದಲೇ ಸ್ವಾತಂತ್ರ್ಯ ಪೂರ್ವದಲ್ಲಿಯೇ ಮಹಿಳೆಯ ರಾಜಕೀಯ ಹಕ್ಕುಗಳ ಕುರಿತಾದ ಹೋರಾಟವು

ಭಾರತದಲ್ಲಿ ಆರಂಭಗೊಂಡಿತು. ಅದರೊಂದಿಗೆ ಮೇಲು ಮಧ್ಯಮವರ್ಗದಲ್ಲಿನ ಮಹಿಳೆಯರ ಸಮಸ್ಯೆಗಳನ್ನೂ ಕುರಿತ ಸುಧಾರಣಾ ಕ್ರಮಗಳೂ ತೀವ್ರಗತಿಯಲ್ಲಿ ನಡೆದು ಬಂದವು. ಆದರೆ ಈ ಕಾಳಜಿಗಳು ಕನ್ನಡದ ಸಂದರ್ಭದಲ್ಲಿ ೮೦ ರ ದಶಕದಲ್ಲಿಯಷ್ಟೇ ಖಚಿತವಾದ ಸ್ತ್ರೀವಾದಿ ಚಿಂತನೆಯ ರೂಪವನ್ನು ತಳೆಯಲಾರಂಭಿಸಿದವು. ಆರಂಭದಿಂದಲೂ ಪಶ್ಚಿಮ ಅಂಧಾನುಕರಣೆ ಹಾಗೂ ಪ್ರಮೀಳಾ ರಾಜ್ಯ ನಿರ್ಮಾಣದ ಕುತಂತ್ರ ಎಂಬ ಆರೋಪಗಳನ್ನು ಎದುರಿಸುತ್ತಲೇ ಬಂದ ಸ್ತ್ರೀವಾದವು, 'ಮಹಿಳಾ ಅಧ್ಯಯನ' ವೆಂಬ ಸಮಾಜಶಾಸ್ತ್ರೀಯ ಶಿಸ್ತನ್ನು ಕಂಡುಕೊಳ್ಳುವ ಮೂಲಕ ಖಚಿತವಾದ ತಾತ್ವಿಕ ನೆಲೆಗಟ್ಟನ್ನು ಹೊಂದಿರುವ ಗಂಭೀರವಾದ ಅಧ್ಯಯನ ವಿಧಾನವಾಗಿ ರೂಪುಗೊಳ್ಳಲು ಇಂದು ಹವಣಿಸುತ್ತಿದೆ. ಅದಕ್ಕೆ ಪೂರಕವಾಗಿ ಪಶ್ಚಿಮದ ಪ್ರಮುಖ ಸ್ತ್ರೀವಾದಿ ಚಿಂತನೆಯ ಸಂಗ್ರಹಾನುವಾದಗಳು ಕನ್ನಡದಲ್ಲಿ ಬರತೊಡಗಿದೆ. ಪಶ್ಚಿಮದ ಸ್ತ್ರೀವಾದದ ಮುಖಾಮುಖಿಯಲ್ಲಿ ರೂಪುಗೊಳ್ಳಬೇಕಾದ ಭಾರತದ ಸ್ತ್ರೀವಾದದ ನಿಲುವುಗಳ ಹುಡುಕಾಟವು ಆರಂಭಗೊಂಡಿದೆ.

ಸಾಹಿತ್ಯೇತರ ಶಿಸ್ತುಗಳು ಇನ್ನೂ ಕನ್ನಡ ಭಾಷೆಯಲ್ಲಿ ತಮ್ಮನ್ನು ಹೆಚ್ಚಾಗಿ ತೊಡಗಿಸಿಕೊಳ್ಳದಿರುವುದರಿಂದ, ಕನ್ನಡದಲ್ಲಿನ ಮಹಿಳಾ ಅಧ್ಯಯನವು ಬಹುಪಾಲು ಸ್ತ್ರೀವಾದಿ ಚಿಂತನೆಗಳು ಸಾಹಿತ್ಯ ವಿಮರ್ಶೆಗಳಾಗಿಯೇ ರೂಪುಗೊಳ್ಳುತ್ತಿವೆ. ಸ್ತ್ರೀವಾದಿ ಚಿಂತನೆ ಮತ್ತು ಹೋರಾಟಗಳ ನಡುವೆ ಕರ್ನಾಟಕದ ಸಾಂಸ್ಕೃತಿಕ ಸಂದರ್ಭದಲ್ಲಿ ಹೆಚ್ಚಿನ ಕೊಡು - ಕೊಳ್ಳುವಿಕೆಗಳು ಇನ್ನೂ ಗಂಭೀರವಾಗಿ ನಡೆದಿಲ್ಲ. ಹಾಗಾಗಿ ಮಹಿಳಾ ಅಧ್ಯಯನದ ಅಂತರ್‌ಶಿಸ್ತೀಯ ಸ್ವರೂಪವು ಇನ್ನು ಮೇಲಷ್ಟೇ ಕನ್ನಡದಲ್ಲಿ ರೂಪುಗೊಳ್ಳಬೇಕಿದೆ.

ಮಹಿಳಾ ಅಧ್ಯಯನವನ್ನು ವಿವಿಧ ಜ್ಞಾನಶಾಖೆಗಳ ಸಹಾಯದಿಂದ ವಿಸ್ತರಿಸಿಕೊಳ್ಳುವುದು ಒಂದು ವಿಧಾನವಾದರೆ, ಬೇರೆ ಬೇರೆ ಜ್ಞಾನ ಶಾಖೆಗಳಲ್ಲಿ ಸ್ತ್ರೀವಾದಿ ದೃಷ್ಟಿಕೋನವೊಂದನ್ನು ಅಳವಡಿಸುವುದು ಅದರ ವಿಸ್ತರಣೆಯ ಇನ್ನೊಂದು ಮುಖ. ಹಾಗಾಗಿ ಮಹಿಳಾ ಅಧ್ಯಯನವೆನ್ನುವುದು ಎಲ್ಲವನ್ನೂ ಒಳಗೊಂಡಂತೆ ರೂಪುಗೊಳ್ಳಬೇಕಾದ ಅಧ್ಯಯನ ವಿಧಾನವಾಗುವಂತೆಯೇ, ಎಲ್ಲ ಅಧ್ಯಯನ ಶಿಸ್ತುಗಳಲ್ಲಿ ನುಸುಳಬೇಕಾದ ಆಲೋಚನಾಕ್ರಮವೂ ಆಗಬೇಕಿದೆ. ಸಮಾಜದ ಎಲ್ಲರ ದೃಷ್ಟಿಯನ್ನು ತನ್ನತ್ತ ಸೆಳೆದುಕೊಳ್ಳುವುದರೊಂದಿಗೇ ತಾನು ಎಲ್ಲರ ದೃಷ್ಟಿಯೊಳಗೂ ತುಂಬಿಕೊಳ್ಳುವ ಅಂತಃಸತ್ವವನ್ನೂ ಬೆಳೆಸಿಕೊಳ್ಳಬೇಕಾಗಿದೆ. ಇದು ಒಂದು ರೀತಿಯಲ್ಲಿ 'ಕೋಡಗನನ್ನು ಕೋಳಿ ನುಂಗುವ ಕೆಲಸ'. ಆದ್ದರಿಂದಲೇ ಸ್ತ್ರೀವಾದವೆಂಬುದು ತನಗೆ ಇದುವರೆಗೆ ದೊರಕದೆ ಹೋದ ಅವಕಾಶವನ್ನು ಕುರಿತು ಪ್ರಶ್ನಿಸುವುದರೊಂದಿಗೇ, ತನ್ನ ಸಾಮರ್ಥ್ಯವನ್ನು ನಿರೂಪಿಸಿಕೊಳ್ಳಬೇಕಾಗಿದೆ.

ಮಹಿಳಾ ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಪ್ರಕಟಣೆಗೊಳ್ಳುವ ಕೃತಿಗಳನ್ನು ಕುರಿತ ಮಾಹಿತಿಯನ್ನು ಕಾಲಕಾಲಕ್ಕೆ ಒದಗಿಸುವುದು 'ಹೊಸ ಓದು' ಅಂಕಣದ ಉದ್ದೇಶ.

ಪತ್ರಿಕೆಯ ಮೊದಲ ಸಂಚಿಕೆಯಲ್ಲಿ ಈ ಕ್ಷೇತ್ರದ ಓದಿನ ಸಮಗ್ರ ಮಾಹಿತಿಯೊಂದನ್ನು ಒದಗಿಸಿ ಮುಂದಿನ ಸಂಚಿಕೆಗಳಲ್ಲಿ ಆಯಾ ಅವಧಿಯ ಹೊಸ ಪ್ರಕಟಣೆಗಳನ್ನು ನೀಡುವ ಉದ್ದೇಶದಿಂದ ಕೆಲಸವನ್ನು ಆರಂಭಿಸಲಾಯಿತು. 'ಸಮಗ್ರ ಮಾಹಿತಿ' ಎಂದಾಗ ಅಕ್ಷರಶಃ ಎಂಬಂತೆ ಪಾಲಿಸುವುದು 'ಪತ್ರಿಕೆ'ಯೊಂದು ಒದಗಿಸಿಕೊಳ್ಳಬಹುದಾದ ಸ್ಥಳಾವಕಾಶದಲ್ಲಿ ಸಾಧ್ಯವಿಲ್ಲದ ಮಾತು. ಹಾಗಾಗಿ ಮಹಿಳಾ ಅಧ್ಯಯನವನ್ನು ಪ್ರವೇಶಿಸುವ ಆಸಕ್ತರಿಗೆ ಮೊದಲ ಹಂತದ ನೆರವಾಗಿಯಾದರೂ ಒದಗುವಂತೆ ಈ ಕ್ಷೇತ್ರದಲ್ಲಿ ಮಹತ್ವದವೆಂದು ಗಮನಿಸಬಹುದಾದ, ಅಷ್ಟರ ಮಟ್ಟಿಗಾದರೂ 'ಸಮಗ್ರ' ವೆನಿಸಬಹುದಾದ ಒಂದು ಗ್ರಂಥಸೂಚಿಯೊಂದಿಗೆ ಈಗ ಈ ಅಂಕಣ ಆರಂಭಗೊಳ್ಳುತ್ತಿದೆ. ಮುಂದಿನ ಸಂಚಿಕೆಗಳಲ್ಲಿ ಇಲ್ಲಿಂದ ಮುಂದುವರೆಯುವ 'ಹೊಸ ಓದು' ಗಳನ್ನು ಹೆಚ್ಚಿನ ವಿವರಗಳಲ್ಲಿ ಒದಗಿಸುವ ಉದ್ದೇಶವಿದೆ.

೧. ಗಾಂಧಿ ಮೋ. ಕ.
ಮಹಿಳೆಯರು, ೧೯೬೯
ಅನ್ವೇಷಣೆ ಪ್ರಕಾಶನ, ಬೆಂಗಳೂರು

೨. ಶಿವರುದ್ರಪ್ಪ ಜಿ. ಎಸ್. (ಸಂ.)
ಮಹಿಳೆ ಮತ್ತು ಕನ್ನಡ ಸಾಹಿತ್ಯ ೧೯೭೬
ಬೆಂಗಳೂರು ವಿಶ್ವವಿದ್ಯಾಲಯ

೩. ಕಮಲಾದೇವಿ ಚಟ್ಟೋಪಾಧ್ಯಾಯ,
ನಾನೊಂದು ಕನಸು ಕಂಡೆ, ೧೯೭೬
ಅನು : ಡಾ. ಸರೋಜಿನಿ ಶಿಂತ್ರಿ
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೪. ಲೆನಿನ್
ಮಹಿಳೆಯರ ವಿಮೋಚನೆ ಕುರಿತು, ೧೯೮೦
ಅನು : ಕೆ. ಎಲ್. ಗೋಪಾಲಕೃಷ್ಣರಾವ್
ಪ್ರಗತಿ ಪ್ರಕಾಶನ, ಮಾಸ್ಕೊ

೫. ಕಮಲಾದೇವಿ ಚಟ್ಟೋಪಾಧ್ಯಾಯ,
ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ ೧೯೮೪
ಅನು : ವೈದೇಹಿ, ಅಕ್ಷರ ಪ್ರಕಾಶನ, ಹೆಗ್ಗೋಡು

೬. ಮೈಥಿಲಿ ಶಿವರಾಮನ್
ವಿಮೋಚನೆಯೆಡೆಗೆ, ೧೯೮೬
ಅನು : ಸುಮಿತ್ರಾಬಾಯಿ ಬಿ. ಎನ್. ಮತ್ತು ವಿಜಯಾ ದಬ್ಬೆ
ಪ್ರ : ಸಮತಾ ಅಧ್ಯಯನ ಕೇಂದ್ರ, ಮೈಸೂರು

೭. ಅಂದನೂರು ಶೋಭಾ ಮತ್ತು ಶ್ರೀಲಕ್ಷ್ಮೀ (ಸಂ)
ಮಹಿಳೆಯ ಮುನ್ನಡೆ, ೧೯೮೮
ಮಾನಿನಿ, ಬೆಂಗಳೂರು

೮. ವಿಜಯಾದಬ್ಬೆ
ಮಹಿಳೆ, ಸಾಹಿತ್ಯ ಮತ್ತು ಸಮಾಜ, ೧೯೮೯
ರಚನಾ ಪ್ರಕಾಶನ, ಮೈಸೂರು

೯. ಗಾಯಿತ್ರಿ ಎನ್. (ಸಂ)
ತ್ರೀವೇಣಿ ೧೯೮೯,
ಜಾಗೃತಿ ಪ್ರಕಾಶನ, ಬೆಂಗಳೂರು

೧೦. ಶಿವರುದ್ರಪ್ಪ ಜಿ. ಎಸ್. (ಸಂ.)
ಕನ್ನಡ ಸಾಹಿತ್ಯ ಸಂದರ್ಭ, ೧೯೯೦
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೧. ಗಾಯಿತ್ರಿ ಎನ್.
ಮಹಿಳೆ ಬಿಡುಗಡೆಯ ಹಾದಿಯಲ್ಲಿ, ೧೯೯೧
ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು

೧೨. ಕೇಶವಶರ್ಮ
ಸ್ತ್ರೀವಾದಿ ವಿಮರ್ಶೆ, ೧೯೯೨
ಅನ್ವೇಷಣೆ ಪ್ರಕಾಶನ, ಬೆಂಗಳೂರು

೧೩. ಛಾಯಾದಾತಾರ್,
ಸ್ತ್ರೀ ಪುರುಷ
ಅನು : ಸರಸ್ವತಿ ರಿಸಬೂಡ, ೧೯೯೨
ಇಳಾ ಪ್ರಕಾಶನ, ಬೆಂಗಳೂರು

೧೪. ಸವಿತಾ ನಾಗಭೂಷಣ (ಸಂ.)
ಮುಡಿಮಲ್ಲಿಗೆ, ೧೯೯೨, ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ

೧೫. ಬರಗೂರು ರಾಮಚಂದ್ರಪ್ಪ (ಸಂ.)
ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ
(ಕನ್ನಡ ಸಾಹಿತ್ಯ ಪುನರ್‌ಮೌಲ್ಯೀಕರಣ ಮಾಲೆ) ೧೯೯೩,
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೬. ಮನು ಚಕ್ರವರ್ತಿ ಎನ್. (ಸಂ)
ಭಾರತೀಯ ಸ್ತ್ರೀವಾದ, ೧೯೯೩
ಅಕ್ಷರ ಚಿಂತನ, ಹೆಗ್ಗೋಡು

೧೭. ಮೈತ್ರೇಯಿ ಮುಖ್ಯೋಪಾಧ್ಯಾಯ
ಬೆಳ್ಳಿಯ ಸಂಕೋಲೆಗಳು, ೧೯೯೩
ಅನು : ವೈದೇಹಿ
ಅಕ್ಷರ ಚಿಂತನ, ಹೆಗ್ಗೋಡು

೧೮. ಬರಗೂರು ರಾಮಚಂದ್ರಪ್ಪ (ಸಂ.)
ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಚಿಂತನೆ, ೧೯೯೩
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೯. ವೀಣಾಶಾಂತೇಶ್ವರ (ಸಂ.)
ಮಹಿಳಾ ಅಧ್ಯಯನ, ೧೯೯೩
ಪ್ರೊ. ಎಚ್. ವಿ. ನಾಗೇಶ ಅಭಿನಂದನಾ ಸಮಿತಿ, ಧಾರವಾಡ

೨೦. ತೇಜಸ್ವಿನಿ ನಿರಂಜನ ಮತ್ತು ಸೀಮಂತಿನಿ ನಿರಂಜನ (ಸಂ)
ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ೧೯೯೪
ಕನ್ನಡ ಸಂಘ ಕ್ರೈಸ್ತ ಕಾಲೇಜು, ಬೆಂಗಳೂರು

೨೧. ಇಂದಿರಾ. ಆರ್.
ಸ್ತ್ರೀವಾದಿ ದಿಕ್ಸೂಚಿ, ೧೯೯೫
ಸಮತಾ ಅಧ್ಯಯನ ಕೇಂದ್ರ, ಮೈಸೂರು

೨೨. ಸುಮಿತ್ರಾಬಾಯಿ ಬಿ. ಎನ್. ಮತ್ತು ಗಾಯಿತ್ರಿ ಎನ್. (ಸಂ.)
ಸ್ತ್ರೀವಾದಿ ಪ್ರವೇಶಿಕೆ, ೧೯೯೫
ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು

೨೩. ಮಧು ಕೀಶ್ವಾರ್
ಭಾರತದ ಮಹಿಳೆಯರ ಬದುಕು ಮತ್ತು ಹೋರಾಟ, ೧೯೯೬
ಅನು : ಹೇಮಲತಾ ಹೆಚ್. ಎಂ.
ಸಮತಾ ಅಧ್ಯಯನ ಕೇಂದ್ರ, ಮೈಸೂರು

೨೪. ಗಾಯಿತ್ರಿ ನಾವಡ
ವಿರಚನೆ, ೧೯೯೭
ಎನ್. ಆರ್. ಎಂ. ಎಚ್. ಪ್ರಕಾಶನ, ಬೆಂಗಳೂರು

೨೫. ಗಾಯಿತ್ರಿ ಎನ್.
ಮಹಿಳಾ ಚಳುವಳಿಯ ಮಜಲುಗಳು, ೧೯೯೮
ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು

೨೬. ವಿಜಯಾ ದಬ್ಬೆ (ಸಂ)
ಲೇಖ-ಲೋಕ ೧೯೯೮.
ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

೨೭. ಮಧು ಕೀಶ್ವಾರ್
ಮಾನುಷಿಯ ಮಾತು ೧೯೯೮
ಅನು : ಎಲ್. ಜಿ. ಮೀರ
ಅಕ್ಷರ ಪ್ರಕಾಶನ, ಹೆಗ್ಗೋಡು

1. Betty Friedan
The Feminine Mystique, 1963
W. W. Norton, New York

2. Thomas P.
Indian Women through the ages, 1964
Asia Publishing House, New Delhi.

3. Kate Millett
Sexual Politics, 1970
Garden city, Ny Doubleday

4. Simone de Beauvoir
The Second Sex, 1974
Trans. H. M. Parshley
Vintage Books, New York

5. Luce Lrigaray
The Speculum of the Other Woman, 1978
Trans. Gillian C. Gill
N. Y. Cornell University Press. Ithaca

6. Elaine Showalter (Ed)
In The New Feminist Criticism, 1985
Panthecon Books, New York

7. Toril Moi
Sexual/ Textual politics, 1985
Methuen, London

8. Krishna Raj M.
Women Studies in India : Some Perspectives, 1986
Popular Prakashan Bombay

9. Kumari Jayawardhana
Feminism and Nationalism in The Third World India, 1986
Kali Press for Women, New Delhi

10. Liddle, Joanna and Rama Joshi
Daughters of Independence, gender, Caste and Class in India. 1986, Zed Press, New Delhi.

11. Connell R. W.
Gender and Power, 1987
Stanford University Press, California

12. Catherine Belsey and jane Moore (Ed),
The Feminist Reader, 1989
The Machillan Press Ltd.

13. Indira J. Parikh and Pulin K. Garg
Indian women : An Inner Diologue, 1989
Sage Publications, New Delhi

14. Kumkum Sangari and Sudesh Vaid (Ed)
Recasting Women, 1989
Kali Press for Women, New Delhi.

15. Linda, J. Nicholson (Ed)
Feminism/Postmodernism, 1990
Routledge New York

16. Isobel Armstrong (Ed)
New Feminist Discourses, 1992
Routledge, London

17. Gerda Lerner
The Creation of Feminist Consciousness, 1993
Oxford University Press

18. Susie Tharu and K. Lalita (Ed)
Women Writing in India, 1993
Oxford University Press Oxford

19. Mary E. Jahn
Discrepant Disalocations, 1996
Oxford University Press, Oxford

20. Pat Caplan (Ed)
The Cultural Construction of Sexuality, 1996
Routledge, London



<u>ಈ ಸಂಚಿಕೆಯ ಲೇಖಕರು</u>

**ಡಾ. ಉಮಾಪತಿ**
ರಾಜ್ಯಶಾಸ್ತ್ರ ವಿಭಾಗ
ಮಾನಸಗಂಗೋತ್ರಿ, ಮೈಸೂರು.

**ಡಾ. ಉಷಾ ಎಂ.**
ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಚಂದ್ರಶೇಖರ ಟಿ. ಆರ್.**
ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ತಾರಕೇಶ್ವರ ವಿ. ಬಿ.**
ಭಾಷಾಂತರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಡಾ. ಪ್ರೀತಿ ಶುಭಚಂದ್ರ**
L-68 5 ನೇ ಕ್ರಾಸ್, ಅಧ್ಯಾಪಕರ ವಸತಿಗೃಹಗಳು
ಮಾನಸಗಂಗೋತ್ರಿ, ಮೈಸೂರು

**ಶ್ರೀಮತಿ ಲಲಿತಾ ನಾಯಕ್ ಬಿ. ಟಿ**
ಅಧ್ಯಕ್ಷರು,
ಬಾಲಭವನ ಸೊಸೈಟಿ
ಜವಾಹರ ಬಾಲಭವನ, ಕಬ್ಬನ್‌ಪಾರ್ಕ್
ಬೆಂಗಳೂರು ೫೬೦ ೦೦೧

**ಡಾ. ವಿಜಯಾ ದಬ್ಬೆ**
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು

**ಡಾ. ಶ್ರೀಮತಿ ಎಚ್. ಎಸ್.**
ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಡಾ. ಶೈಲಜಾ ಇಂ. ಹಿರೇಮಠ**
ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಡಾ. ಹೇಮಲತಾ ಮಹಿಷಿ**
ಡಿ. 213, ಭಾರತೀಯ ವಿಜ್ಞಾನ ಸಂಸ್ಥೆ
ಬೆಂಗಳೂರು.

# ಪ್ರಸಾರಾಂಗದ ಹೊಸ ಪ್ರಕಟಣೆಗಳು

| | | | |
|---|---|---|---|
| ೧. | ಬಳ್ಳಾರಿ ಜಿಲ್ಲೆಯ ಶಾಸನಸಂಪುಟ<br>ಡಾ. ದೇವರ ಕೊಂಡಾರೆಡ್ಡಿ | ರೂ. | ೬೦೦.೦೦ |
| ೨. | ಕೊಡೇಕಲ್ಲ ವಚನವಾಕ್ಯ<br>ಡಾ. ಬಸವಲಿಂಗ ಸೊಪ್ಪಿನಮಠ | ರೂ. | ೨೦೦.೦೦ |
| ೩. | ಆದಿಲ್‌ಶಾಹಿ ಆಸ್ಥಾನ ಸಾಹಿತ್ಯ<br>ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ | ರೂ. | ೪೦.೦೦ |
| ೪. | ಕೃಷಿಜ್ಞಾನ ಪ್ರದೀಪಿಕೆ<br>ಶ್ರೀ ಘನಮಠದ ಶಿವಯೋಗಿಗಳು | ರೂ. | ೧೦೦.೦೦ |
| ೫. | ಸಾಂಸ್ಕೃತಿಕ ಸಂಶೋಧನೆ<br>ಡಾ. ತಾಳ್ತಜೆ ವಸಂತಕುಮಾರ | ರೂ. | ೦೫.೦೦ |
| ೬. | ಹಲಸಂಗಿ ಗೆಳೆಯರು<br>ಡಾ. ಗುರುಲಿಂಗ ಕಾಪಸೆ | ರೂ. | ೦೫.೦೦ |
| ೭. | ಸ್ವಾತಂತ್ರ್ಯ ಹೋರಾಟ ಮತ್ತು ಜನಪದ ಸಾಹಿತ್ಯ<br>ಡಾ. ಬಸವರಾಜ ಮಲಶೆಟ್ಟಿ | ರೂ. | ೦೫.೦೦ |
| ೮. | ಕನ್ನಡ ಭಾಷಾಪ್ರಭೇದಗಳು<br>ಡಾ. ಸಂಗಮೇಶ ಸವದತ್ತಿಮಠ | ರೂ. | ೦೫.೦೦ |
| ೯. | ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕೀಕರಣ ಮತ್ತು ಜನಾಂದೋಲನ<br>ಡಾ. ಬಿ. ಶೇಷಾದ್ರಿ | ರೂ. | ೦೫.೦೦ |
| ೧೦. | ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯರು<br>ಶ್ರೀ ರಾಧಾಕೃಷ್ಣ ಬೆಳ್ಳೂರು | ರೂ. | ೦೫.೦೦ |
| ೧೧. | ಸ್ವಾತಂತ್ರ್ಯ ಹೋರಾಟ ಮತ್ತು ರಂಗಭೂಮಿ<br>ಡಾ. ಶ್ಯಾಮಸುಂದರ ಬಿದರಕುಂದಿ | ರೂ. | ೦೫.೦೦ |
| ೧೨. | ತೇಜಸ್ವಿ ಕಥೆಗಳ ಕುರಿತು<br>ಡಾ. ಕರೀಗೌಡ ಬೀಚನಹಳ್ಳಿ | ರೂ. | ೦೫.೦೦ |
| ೧೩. | ದ್ವಿಭಾಷಿಕತೆ<br>ಡಾ. ಕೆವಿ. ನಾರಾಯಣ | ರೂ. | ೦೫.೦೦ |
| ೧೪. | ಹರಿಹರ ಚಿತ್ರಿಸಿದ ದಲಿತ ಶರಣರು<br>ಪ್ರೊ. ಎಸ್.ಎಸ್. ಹಿರೇಮಠ | ರೂ. | ೦೫.೦೦ |

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಸಂಸ್ಕೃತಿ ಎನ್ನುವುದು ಸಮೂಹಸಮ್ಮತ ಜೀವನ ಪದ್ಧತಿಯಾಗಿದೆ. ಕನ್ನಡಿಗರ ಇಂತಹ ಜೀವನ ಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಇಂಥ ಸಂದರ್ಭದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ, ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ಯ'ಗಳನ್ನು ಶೋಧಿಸುವುದು; ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶಗಳನ್ನು ಗುರುತಿಸುವುದು; ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯಸಂಸ್ಕೃತಿಯಿಂದ ಎಚ್ಚರ ವಹಿಸಿ ತುಂಬಿಕೊಳ್ಳುವುದು.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ ಈಗ "ಮಹಿಳಾ ಅಧ್ಯಯನ" ಪತ್ರಿಕೆಯನ್ನು ಪ್ರಕಟಿಸುತ್ತಲಿದೆ. ಮಹಿಳೆಯ ಸ್ವಾತಂತ್ರ್ಯ, ಸಂವೇದನೆ ಇತ್ಯಾದಿ "ಮಹಿಳಾವಾದಿ ಅಧ್ಯಯನ"ಕ್ಕೆ ನೆಲೆಯಾಗಬಯಸಿದೆ, ಈ ಪತ್ರಿಕೆ.

**ಡಾ. ಎಂ. ಎಂ. ಕಲಬುರ್ಗಿ**
ಕುಲಪತಿಗಳು